ಹಂಪೆಯ ಹರಿಹರಕವಿ ಕೃತ

# ರಕ್ಷಾಶತಕಂ

(ಅರ್ಥ ಭಾವಾರ್ಥ ಟಿಪ್ಪಣಿಗಳೊಡನೆ)

ಮುನ್ನುಡಿಕಾರರು :

ಧರ್ಮಾಧ್ಯಕ್ಷರಾದ ಶ್ರೀ ಟಿ. ಎಚ್. ಎಂ. ಸದಾಶಿವಯ್ಯ



ಸಂಪಾದಕರು :

...ರ್. ಚೆನ್ನಬಸಪ್ಪ



ಸಜೀವ ಸಾಹಿತ್ಯಮಾಲೆ

ಬಳ್ಳಾರಿ

ಹಂಪೆಯ ಹರಿಹರ ಕವಿಕೃತ

# ರಕ್ಷಾಶತಕಂ

(ಅರ್ಥ, ಭಾವಾರ್ಥ ಟಿಪ್ಪಣಿಗಳೊಡನೆ)

ಮುನ್ನುಡಿಕಾರರು :

ಧರ್ಮಜ್ಞಶೇಖರ ಶ್ರೀ ಟಿ. ಎಚ್. ಎಂ. ಸದಾಶಿವಯ್ಯ, ಬಿ.ಎ.ಬಿ.ಎಲ್.,

ಸಂಪಾದಕರು :

ಕೋ. ಚೆನ್ನಬಸಪ್ಪ

ಸಜೀವ ಸಾಹಿತ್ಯಮಾಲೆ

ಬಳ್ಳಾರಿ

# ಮುನ್ನುಡಿ

ಕಾವ್ಯ, ಕತೆ, ಕಾದಂಬರಿ, ಮುಂತಾದ ಹಲವಾರು ಕ್ಷೇತ್ರಗಳಲ್ಲಿ ದುಡಿದು, ಕನ್ನಡಿಗರಿಗೆ ಸುಪರಿಚಿತರಾಗಿದ್ದು, ನವ್ಯಸಾಹಿತ್ಯ ಕ್ಷೇತ್ರದಲ್ಲಿ ಹೆಸರಾಂತ ನನ್ನ ಸನ್ಮಾನ್ಯ ಮಿತ್ರರಾದ ಶ್ರೀ ಕೋ. ಚೆನ್ನಬಸಪ್ಪನವರು ಇದೀಗ ಗಂಭೀರವಾದ ದಾರ್ಶನಿಕ ವಾಙ್ಮಯ ಕ್ಷೇತ್ರದಲ್ಲಿ ಕೃಷಿಮಾಡಲು ಪ್ರವೇಶಿಸಿರುವುದು ಸ್ವಾಗತಾರ್ಹವಾಗಿದೆ. ಅವರು ದಾರ್ಶನಿಕ ಮಹಾಕವಿ ಹರಿಹರದೇವನ 'ರಕ್ಷಾಶತಕ'ದ ಸಂಪಾದನೆಯ ಪವಿತ್ರೋದ್ಯಮವನ್ನು ಕೈಕೊಂಡು, ಆ ಶತಕ ರಾಜನನ್ನು ವಾಚಕ ಪ್ರಪಂಚಕ್ಕೆ ಪರಿಚಯ ಮಾಡಿಕೊಡುವ ಸೇವೆಯನ್ನು ನನಗೆ ಒಪ್ಪಿಸಿರುವರು. ಆಂಧ್ರದಲ್ಲಿ ಪಾಲ್ಕುರಿಕೆ ಸೋಮನಾಥನಂತೆ ಕನ್ನಡದಲ್ಲಿ ಹರಿಹರ ಮಹಾಕವಿಯು ನನ್ನ ಅಭಿಮಾನ ಕವಿಯಾಗಿರುವುದರಿಂದ ಈ ಕೈಂಕರ್ಯವನ್ನು ಸಲ್ಲಿಸಲು ಅತ್ಯಂತ ಸಂತೋಷಪೂರ್ವಕವಾಗಿ ಒಪ್ಪಿಕೊಂಡಿರುವೆನು. ವಿಶ್ವವಾಙ್ಮಯದಲ್ಲಿ ಪ್ರತ್ಯೇಕ ವಿಶಿಷ್ಟತೆಯುಳ್ಳ ಶಾಖೆಗಳಲ್ಲಿ:

## ಶತಕ ವಾಙ್ಮಯ ಶಾಖೆಗೆ

ಗಣ್ಯವಾದ ಸ್ಥಾನವಿದೆ. ಇದು ಪಂಡಿತರನ್ನೂ ಪಾಮರರನ್ನೂ ಒಂದೇ ರೀತಿ ರಂಜಿಸಬಲ್ಲ ಲಕ್ಷಣಗಳುಳ್ಳದ್ದಾಗಿದೆ. ಶತಕಗಳು ಪುರಾಣಗಳಂತೆ ಕಥಾಪ್ರಧಾನಗಳಲ್ಲ, ಪ್ರಬಂಧಗಳಂತೆ ವರ್ಣನಾಪ್ರಧಾನಗಳಲ್ಲ. ಗೇಯ ಕೃತಿಗಳಂತೆ ಸಂಗೀತ ಪ್ರಧಾನಗಳಲ್ಲ. ಕಾವ್ಯಗಳಂತೆ ದೀರ್ಘಪರಿಮಿತಿಯುಳ್ಳವಲ್ಲ. ಇವು ಮುಕ್ತಕಗಳಾದ ರೂಪಿಕ ಸೂತ್ರಬದ್ಧವಾಗಿದ್ದು; ಸುಲಭಗ್ರಾಹ್ಯಗಳಾಗಿ ಕವಿಯ ಆತ್ಮಾನುಭಾವವನ್ನು ಹೃದಯಂಗಮವಾಗಿ ಪ್ರಕಟಿಸುವುವು. ಹೃದಯಾಂತರಾಳದಿಂದ ನೇರವಾಗಿ ಹೊರಟು ಓದುವ ಅಥವಾ ಕೇಳುವವರ ಹೃದಯವನ್ನು ನೇರವಾಗಿ ಪ್ರವೇಶಿಸಿ ಸಂಚಲನಗೊಳಿಸುವ ಅದ್ಭುತಶಕ್ತಿ ಇವುಗಳಲ್ಲಿರುವುದರಿಂದ ಶತಕಗಳು ಅತ್ಯಂತ ಸನ್ನಿಹಿತಗಳು.

ಒಂದೇ ಒಂದು ಭಾವವನ್ನು ಹತ್ತು ಮಾತ್ರೆಗಳ ಹದಿನಾಲ್ಕು ಚರಣಗಳುಳ್ಳ ಪದ್ಯವೊಂದಕ್ಕೆ ಆಂಗ್ಲದಲ್ಲಿ Sonnet ಎನ್ನುವರು. ಇಂಥ ಸ್ವಯಂಪೂರ್ಣ ಪದ್ಯಗಳು ನೂರಕ್ಕೆ ಕಡಿಮೆಯಿಲ್ಲದೇ ಹೆಣೆಯಲ್ಪಟ್ಟ ಮಾಲಿಕೆಯು ಭಾರತೀಯ ವಾಙ್ಮಯದಲ್ಲಿ ಶತಕವೆಂದು ಕರೆಯಲ್ಪಟ್ಟಿರುತ್ತವೆ.

"Garlands" ಎಂಬ ಇಂಥ ಪದ್ಯಮಾಲಿಕೆಗಳು ಪ್ರಾಚ್ಯವಾಙ್ಮಯದಲ್ಲಿ ಕಂಡುಬರುತ್ತವಾದರೂ ಅವು ಸಂಖ್ಯಾ ನಿಯಮದಿಂದ ಬದ್ಧವಾಗಿಲ್ಲ. ಈ ಸಂಖ್ಯಾಪರಿಮಿತಿಯು ಸಂಸ್ಕೃತದ ಸ್ತೋತ್ರವಾಙ್ಮಯದಿಂದ ಗ್ರಹಿಸಲ್ಪಟ್ಟಿರುವುದು. ವೇದಗಳಲ್ಲಿ ಭಕ್ತಿಪ್ರತಿಪಾದಿತವಾದ ಮಂತ್ರಗಳೂ, ಸ್ತವನಗಳೂ, ಪ್ರಾರ್ಥನೆಗಳೂ ಹೇರಳವಾಗಿ ಕಂಡುಬರುವುವು. ಇವುಗಳಲ್ಲಿ ಭಕ್ತಿಭಾವಕ್ಕನುಗುಣವಾಗಿ ಹುಟ್ಟಿದ ಶಾಂತಿವಾಚಕಗಳೂ, ಸ್ತೋತ್ರಗಳೂ ಜಪತಪ ರೂಪಗಳನ್ನು ತಾಳ್ಪು ಮಂತ್ರತಂತ್ರ ಕ್ರಿಯೆಗಳಾಗಿ ಪರಿಣಮಿಸಿದವು. ಈ ಕರ್ಮಗಳಲ್ಲಿ ಕೆಲವು ನಿಯಮಗಳು ಏರ್ಪಟ್ಟವು. ಒಂದೇ ಮಂತ್ರವನ್ನು ಇಷ್ಟೇಸಾರಿ ಜಪಿಸಬೇಕೆಂಬ ನಿಯಮದಿಂದ ಅವು ಸಂಖ್ಯಾಬದ್ಧಗಳಾದವು. ಒಂದು ಮಂತ್ರವನ್ನಾಗಲಿ, ಒಂದು ನಾಮವನ್ನಾಗಲಿ ೧೦೮ ಸಾರಿ ಜಪಿಸುವುದರಿಂದ ಲಾಭವಿರುವುದೆಂದು ತಾಂತ್ರಿಕರು ಹೇಳುವರು. ಅಂತೇ ಅಷ್ಟೋತ್ತರ ಶತಕಗಳು ಹುಟ್ಟಲು ಕಾರಣವಾಯಿತು. ೧೦೮ ಪ್ರದಕ್ಷಣೆಗಳೂ, ೧೦೮ ಸೂರ್ಯನಮಸ್ಕಾರಗಳೂ, ಪುನಶ್ಚರಣೆಗಳೂ ನಿಯಮವಾದುದು ಈ ಕಾರಣದಿಂದಲೇ. ಜಪಮಾಲೆಯಲ್ಲಿ ೧೦೮ ಮಣಿಗಳೇ ನಿರ್ಣಯಿಸಲ್ಪಟ್ಟವು. ಈ ಶತಕ ಸಂಖ್ಯಾತ್ಮವಾದ ನಿರ್ಣಯವು, ಭಕ್ತ್ಯಾವೇಶದಿಂದ ಮಾಡುವ ಸ್ತೋತ್ರಗಳಾದ ಭಕ್ತಿ ಶತಕಗಳಲ್ಲಿ ಸಹಾ ವ್ಯಾಪಿಸಿತು. ವೈದಿಕ ವಾಙ್ಮಯದಲ್ಲಿ ಶತಸಂಚಿಗೆ ಅತ್ಯಂತ ಗೌರವವಿರುವುದು. ಶತರುದ್ರೀಯವು ಯಜುರ್ವೇದದಲ್ಲಿ ಒಂದು ಪ್ರಮುಖ ಭಾಗವು. ಕಾರಣ ಶತಕವಾಙ್ಮಯವು ಭಕ್ತಿಯೋಗಕ್ಕಾಗಿಯೇ ಹುಟ್ಟಿರುವುದೆಂದು ಹೇಳಬಹುದು. ಭಕ್ತಿಗೂ ವೈರಾಗ್ಯಕ್ಕೂ ಅವಿನಾಭಾವ ಸಂಬಂಧವಿರುವುದರಿಂದಲೂ, ಶೃಂಗಾರವು ಸಪ್ರೇಮ ಭಕ್ತಿ ಸಿದ್ಧಾಂತ ಒಂದು ವಿಲಕ್ಷಣ ರೂಪವೆಂದೇ ಗ್ರಹಿಸಲ್ಪಟ್ಟಿರುವುದರಿಂದಲೂ ಭಕ್ತಿಮಾರ್ಗದಲ್ಲಿ ನೀತಿಗೆ ಹೆಚ್ಚು ಪ್ರಾಧಾನ್ಯವಿರುವುದರಿಂದಲೂ, ಶತಕ ವಾಙ್ಮಯದಲ್ಲಿ ವೈರಾಗ್ಯ, ಶೃಂಗಾರ, ನೀತಿಗಳಿಗೆ ಸಹಾ ಪ್ರವೇಶವು ದೊರೆಯಿತು. ಶ್ರೀ ಶಂಕರಾಚಾರ್ಯರ ಸ್ತವನಗಳು ಭರ್ತೃಹರಿಯ ಕೃತಿಗಳೂ, ನೀತಿಮಂಜರಿ, ಶೃಂಗಾರಶತಕ, ಶೃಂಗಾರತಿಲಕ ಮುಂತಾದವುಗಳೇ ಇದಕ್ಕೆ ಸಾಕ್ಷಿ.

ಶತಕದ ಎರಡನೆಯ ವಿಶಿಷ್ಟಲಕ್ಷಣ ಎಂದರೆ ಮಕುಟ ನಿಯಮ. ಈ ನಿಯ

ಮವನ್ನು ಥಾಮ್‌ಸನ್ ಬರೆದ "Rule Britannia" ಬರನ್ಸ ರಚಿಸಿದ "God provideth for the Marriage" ಮೂರ್ ಬರೆದ "Oft in the chilly Night" ಕ್ಯಾಂಬೆಲ್ ಕವಿಯ "The Irish Harper and the Dog" ಮುಂತಾದ ಗೀತೆಗಳಲ್ಲಿ ಕಾಣಬಹುದು. ಶ್ರೀ ಶಂಕರಾಚಾರ್ಯರು ರಚಿಸಿದ ಸ್ತೋತ್ರಗಳಲ್ಲಿ ಮತ್ತೂ ಚಿದಾನಂದ ಸ್ತೋತ್ರವೇ ಮುಂತಾದ ಹಲಕೆಲವು ಸಂಸ್ಕೃತ ಕೃತಿಗಳಲ್ಲಿ ಈ ನಿಯಮವು ಕಂಡು ಬರುತ್ತಿದ್ದರೂ ಇದು ಸಂಸ್ಕೃತದಲ್ಲಿ. ಅಷ್ಟೊಂದು ಕಟ್ಟುನಿಟ್ಟಾಗಿ ಪಾಲಿಸಲ್ಪಟ್ಟಂತೆ ಕಾಣುವುದಿಲ್ಲ.

ಕಾವ್ಯಪ್ರಪಂಚದಲ್ಲಿ ಶತಕಗಳಿಗೆ ಯಾವಸ್ಥಾನವಿದೆ ಎಂಬುದರ ಬಗ್ಗೆ ವಿಮರ್ಶಕರಲ್ಲಿ ಏಕಮತವಿಲ್ಲ. ರಸಾತ್ಮಕವಾದ ವಾಕ್ಯವೇ ಕಾವ್ಯವೆಂದೂ, ರಮಣೀಯಾರ್ಥ ಪ್ರಸಾರಕವಾದ ಶಬ್ದವು ಕಾವ್ಯವೆಂದೂ :

ಶ್ಲೋ॥ ಸದೋಷಲಕ್ಷಣವತೀ ಸರೀತಿರ್ಗುಣಭೂಷಿತಾ,
ಸಾಲಂಕಾರ ರಸಾನೇಕ ವೃತ್ತಿರ್ವಾವಾಕ್ಯನಾನುಬಾಕ್ ।

ಕಾವ್ಯವೆಂದೂ ಲಾಕ್ಷಣಿಕರು ಬರೆದಿರುವರು. ಕಾವ್ಯಪ್ರಯೋಜನವೇನೆಂಬುದು ನಿರ್ಣಯವಾದರೆ ಶತಕಗಳ ಕಾವ್ಯವಿಭಾಗವನ್ನು ನಿರ್ಣಯಿಸುವುದು ಸುಲಭವಾಗುತ್ತದೆ. ಮಮ್ಮಟಾಚಾರ್ಯನು ಕಾವ್ಯಪ್ರಯೋಜನವನ್ನು ಈ ರೀತಿ ನಿರ್ಣಯಿಸಿರುವನು :

ಶ್ಲೋ॥ ಕಾವ್ಯಂ ಯಶಶೇರ್ಥಕೃತೇ ವ್ಯವಹಾರ ವಿದೇಶಿವೇತ ರಕ್ಷತಯೇ
ಪರನಿರ್ವ್ವೃತಯೇ ಕಾಂತಾಸಮಿತತಯೋಪದೇಸಯುಜೇ

ಕಾರ್ಯಪ್ರಯೋಜನವು ರಸೌಚಿತ್ಯಮೂಲವಾಗಿ ಸಾಧಿಸಿ ಈ ಭಾವವನ್ನುಂಟುಮಾಡುವುದಾದರೂ ಅದು ಪುರುಷಾರ್ಥಸಿದ್ಧಿಗೆ ಸಾಧನವಾಗಿರಬೇಕು. ಪದ್ಯಭೇದವನ್ನೂ ಸಂಖೆಯನ್ನೂ ಹಿಡಿದು ಕಾವ್ಯಸ್ವರೂಪವನ್ನು ಹಿಡಿದು ಕಾವ್ಯಸ್ವರೂಪವನ್ನು ನಿರ್ಣಯಿಸುವುದು ಪ್ರಯೋಜನಕರವಲ್ಲ. ಭಾವಾನು ಸಂಧಾ

ನವಿಲ್ಲದ ಪದ್ಯ ಸಮುದಾಯವು ಕಾವ್ಯವೆಂದು ಪರಿಗಣಿಸಲ್ಪಡಲಾರದು ರಸೌಚಿತ್ಯವುಳ್ಳ ಭಾವಗೀತೆಗಳು ಸಹಾ ಚಿಕ್ಕವುಗಳಾಗಿದ್ದರೂ ಕಾವ್ಯವಿಭಾಗಗಳಾಗಿ ಪರಿಗಣಿಸಲ್ಪಡುವುವು.

ಕೆಲವರು ಶತಕಗಳನ್ನು ಭಾವಗೀತೆಗಳ ವಿಭಾಗಕ್ಕೆ ಸೇರಿಸಿರುವರು. ಆಂಗ್ಲ ವಾಙ್ಮಯ ರೀತಿಯ ಲಕ್ಷ್ಯದಿಂದ ಶತಕವಾಙ್ಮಯ ರೀತಿಯನ್ನು ಪರಿಶೀಲಿಸಿದರೆ ಈ ನಿರ್ಣಯವು ಯುಕ್ತವೆಂದು ತೋರಿದರೂ ಈ ಹೋಲಿಕೆಯ್ಯು ನಿರ್ಣಯನು ಅಸಂಗತವೆಂದೇ ಹೇಳಬಹುದು. ಭಾವಗೀತೆಗಳಲ್ಲಿ ಕವಿಯು ಪ್ರಕೃತಿಸ್ವರೂಪಗಳ ಗುಣಸೌಂದರ್ಯಗಳನ್ನೂ ಮನೋಭಾವಗಳನ್ನೂ ಮನೋಹರವಾಗಿ ವರ್ಣಿಸುತ್ತ ಭಾವವಿಕಾಸವನ್ನುಂಟುಮಾಡುವುದೇನೊ ನಿಜ. ಆದರೆ ಈ ಭಾವವಿಕಾಸವು ಮಾನಸಿಕಾನಂದವನ್ನುಂಟುಮಾಡಿದರೂ ಪುರುಷಾರ್ಥಸಾಧನೆಗೆ ಪ್ರಯೋಜನವಲ್ಲ. ಶತಕಗಳಾದರೋ ಭಾವಗೀತೆಗಳಿಗೆ ಅತೀತವಾದ ಆತ್ಮಾನಂದವನ್ನುಂಟುಮಾಡುತ್ತ ಪುರುಷಾರ್ಥವನ್ನು ಪಡೆಯುವುದಕ್ಕೆ ಸಾಧನಗಳಾಗಿರುವುವು. ಇವು ಸಾಮಾನ್ಯವಾಗಿ ಭಕ್ತಿಯೋಗವನ್ನು ಪ್ರತಿಪಾದಿಸುವುವಾಗಿದ್ದು ಇವುಗಳಿಗೆ ಮೋಕ್ಷಪ್ರಾಪ್ತಿಯೇ ಪ್ರಯೋಜನವು. ಕವಿಗಳು ಕೀರ್ತಿಕಾಮಿಗಳಾಗಿಯೋ, ಧನ, ಕನಕ, ವಸ್ತ್ರವಾಹನಗಳನ್ನು ಪಡೆಯಲೋಸುಗವೋ ಪ್ರಬಂಧಾದಿಗಳನ್ನು ರಚಿಸಿದರೂ ಮೋಕ್ಷಕಾಮಿಗಳಾಗಿ ಪರಮಾತ್ಮನನ್ನು ಆಶ್ರಯಿಸಿ ಶತಕಗಳನ್ನು ಬರೆಯುತ್ತಿದ್ದರು. ಕವಿಗಳು ಚಿಕ್ಕವಯಸ್ಸಿನಲ್ಲಿ ಶತಕಗಳನ್ನೂ ಪ್ರೌಢವಯಸ್ಸಿನಲ್ಲಿ ಕಾವ್ಯಾದಿಗಳನ್ನು ಬರೆದರೆಂಬುದು ಅನುಭವಕ್ಕೆ ವಿರುದ್ಧವಾಗಿದೆ. ಸುಪ್ರಸಿದ್ಧ ಆಂಧ್ರಕವಿ ಧೂರ್ಜಟಿಯು ಧನಾರ್ಥಿಯಾಗಿ ಕಾಳಹಸ್ತಿ ಮಹಾತ್ಮ್ಯೆಯನ್ನೂ ಮೋಕ್ಷಾರ್ಥಿಯಾಗಿ ಶ್ರೀಕಾಳಹಸ್ತೀಶ್ವರ ಶತಕವನ್ನು ಬರೆದನು. ಶತಕಗಳಲ್ಲಿ ಕಂಡು ಬರುವ ಪರಮಾತ್ಮನ ಲೀಲೆಗಳ ವರ್ಣನೆಗಳ, ಭಾವಗೀತೆಗಳ ಭಾವವರ್ಣನೆಗೆ ಅತೀತವಾಗಿದ್ದು ಕವಿಯ ವ್ಯಕ್ತಿತ್ವವನ್ನೂ ಸ್ಫುಟಗೊಳಿಸಿ ಭಕ್ತಿರಸಾವೇಶನೆವನ್ನುಂಟುಮಾಡುವುವು. ಭಾವಗೀತೆಗಳು ಭೌತಿಕಾನಂದವನ್ನುಂಟುಮಾಡಿ ಮನಸ್ಸನ್ನು ತಣಿಸಿದರೆ, ಶತಕಗಳು ಆಧ್ಯಾತ್ಮಿಕಾನಂದವನ್ನುಂಟುಮಾಡಿ ಹೃದಯವನ್ನು ಸೂರೆಗೊಳ್ಳುವುವು. ಅನನ್ಯಭಕ್ತಿ ಪಾರವಶ್ಯಾನಂದವನ್ನು ವರ್ಣಿಸಲೂ ಶತಕಗಳು ಯೋಗ್ಯವಾಗಿರುವುವು.

ಶತಕವಾಙ್ಮಯವು ಹುಟ್ಟು ಮತ್ತು ಪೂರ್ವೋತ್ತರಗಳಲ್ಲಿ ಸಂಸ್ಕೃತ ಸಂಪ್ರದಾಯಕ್ಕೆ ಅನುಗುಣವಾಗಿದ್ದರೂ ದ್ರಾವಿಡ ಭಾಷೆಗಳಲ್ಲಿ ಅದು ತನ್ನದೇ ಆದ ಸ್ವತಂತ್ರ ಮಾರ್ಗವನ್ನು ಹಿಡಿದಿತ್ತು. ಇದು ಆಂಧ್ರಭಾಷೆಯಲ್ಲಿ ಅತಿ ವಿಸ್ತಾರವಾಗಿ ಬೆಳೆದಷ್ಟು ಮತ್ತಿನ್ನಾವ ಭಾಷೆಯಲ್ಲೂ ಬೆಳೆದಿಲ್ಲ. ತೆಲುಗು ಭಾಷೆಯಲ್ಲಿ ಸದ್ಯಕ್ಕೆ ಬೆಳಕಿಗೆ ಬಂದಿರುವ ಶತಕಗಳು ೬೦೦ಕ್ಕೆ ಮೇಲ್ಪಟ್ಟಿವೆ. ಸಾಹಿತ್ಯಕ್ಷೇತ್ರದ ಮತ್ತಿನ್ನಾವ ಭಾಗದಲ್ಲೂ ಇಷ್ಟೊಂದು ಬೆಳವಣಿಗೆ ಕಂಡು ಬಂದಿಲ್ಲ. ಅಪ್ಪಕವಿ, ಪಿನ್ನ ಕೋಟಿಪೆದ್ದನ ಮುಂತಾದ ಸಾಂಪ್ರದಾಯ ವಾದಿಗಳಾದ ಲಾಕ್ಷಣಿಕರು ಶತಕಗಳನ್ನು ಕ್ಷುದ್ರಕಾವ್ಯಗಳೆಂದು ಹೀಯಾಳಿಸುತ್ತ ಬಂದಿದ್ದರೂ, ಜನತೆಯ ಒಲುಮೆಯು ಶತಕವಾಙ್ಮಯದಕಡೆಗೇನೇ ಇರುವುದು, ಇದರ ಜನಾನುರಂಜತೆಯನ್ನು ತೋರಿಸುವುದು. ಶ್ರೀನಾಥ, ಅಲ್ಲಸಾನಿಪೆದ್ದನ ಮುಂತಾದ ಕವಿಸಾರ್ವಭೌಮರ ಹೆಸರು ಕೇಳಿರುವವರು ನೂರಕ್ಕೆ ಒಬ್ಬರೋ ಇಬ್ಬರೋ ! ಆದರೆ ಜನತಾ ಕವಿಯಾದ ವೇಮನಯೋಗಿಯ ಪದ್ಯಗಳು ಎಲ್ಲರ ನಾಲಿಗೆಗಳ ಮೇಲೆ ಕುಣಿದಾಡುವುವು. ಸಂಖ್ಯಾಮಾನದಿಂದ ಶತಕಶಾಖೆಯಲ್ಲಿ ಕಂಡುಬರುವ ರಚನೆಗಳು ಪುರಾಣಪ್ರಬಂಧಾದಿ ಬೇರಿನ್ನಾವ ಶಾಖೆಗಳಲ್ಲೂ ಇಲ್ಲವೆಂದು ನಿರಾತಂಕವಾಗಿ ಹೇಳಬಹುದು ಇದು ಜನತಾಸಾಹಿತ್ಯವಾಗಿ ಪರಿಣಮಿಸಿದುದ್ದೇ ಈ ಹೆಚ್ಚಳಕ್ಕೆ ಕಾರಣ.

ಅಕ್ಕತಂಗಿಯರಂತೆ ಪರಸ್ಪರ ಸನ್ನಿಹಿತ ಬಾಂಧವ್ಯದಿಂದ ಬೆಳೆದುಬಂದಿರುವ ಕನ್ನಡ - ತೆಲುಗು ಭಾಷೆಗಳಲ್ಲಿ ಶತಕವಾಙ್ಮಯಾವತಾರವಾಗಿದ್ದು ೧೨ನೆಯ ಶತಮಾನದಲ್ಲಿ ಈ ಉಗಮಕ್ಕೆ ಕಾರಣರಾದವರು ಕರ್ನಾಟಕಾಂಧ್ರ ವಾಙ್ಮಯಗಳ ಗತಿಯನ್ನೇ ಬದಲಾಯಿಸಿ ನೂತನ ಸ್ವಾತಂತ್ರ್ಯಯುಗವನ್ನೇ ಸ್ಥಾಪಿಸಿದ ವೀರಶೈವದಾರ್ಶನಿಕ ಕವಿಗಳು. ಕಲ್ಯಾಣದ ವಿಚಾರ ಕ್ರಾಂತಿಯ ಮಂಥನದಲ್ಲಿ ಹುಟ್ಟಿದ ವಚನಸಾಹಿತ್ಯ ಮಹಾಪೂರವು ಆಂಧ್ರ ಕರ್ನಾಟಕ ಸಾಹಿತ್ಯ ಕ್ಷೇತ್ರಗಳಲ್ಲಿ ಅಭೂತಪೂರ್ವವಾದ ಮಂಥನವನ್ನುಂಟುಮಾಡಿದುದಲ್ಲದೇ, ಆ ಪ್ರವಾಹದ ಒಂದು ಶಾಖೆಯು ಛಂದೋಲಕ್ಷಣಗಳ ಪರಿಮಿತಿಗಳೊಳಗಾಗಿ ಶತಕವಾಙ್ಮಯ ರೂಪವನ್ನು ತಾಳಿತೆಂದು ಹೇಳಬಹುದು.

ವಚನ ಸಾಹಿತ್ಯದ ಸೆಳವಿಗೆ ಒಳಗಾದ ಮೊದಲಿಗರಲ್ಲಿ "ತ್ರಿಲೋಕ

ಗುರು" ಎಂದು ಪ್ರಸಿದ್ಧನಾದ ಮಲ್ಲಿಕಾರ್ಜುನ ಪಂಡಿತಾರಾಧ್ಯನು. ವಚನಸಾಹಿತ್ಯದ ಹಿನ್ನೆಲೆಯಲ್ಲಿ ಬರೆದ "ಶಿವತತ್ತ್ವಸಾರವೂ" ಶ್ರೀಗಿರಿಮಲ್ಲಿಕಾರ್ಜುನ ಶತಕವೂ ಶತಕವಾಙ್ಮಯ ಇತಿಹಾಸದಲ್ಲಿ ಮೊಟ್ಟಮೊದಲನೆಯ ಸ್ಥಾನವನ್ನು ಅಲಂಕರಿಸಿವೆ.

ಈ ಕೃತಿಗಳ ಪ್ರಭಾವವನ್ನು ತದನಂತರ ಹುಟ್ಟಿದ ಪಾಲ್ಕುರಿಕಿ ಸೋಮನಾಥನ 'ವೃಷಾಧಿಪಶತಕ' 'ಬಸವಲಿಂಗಶತಕ'ಗಳಲ್ಲೂ, ಯಥಾವಾಕ್ಯುಟ ಅನ್ನಮಾಮಾತ್ಯನ ಸರ್ವೇಶ್ವರ ಶತಕದಲ್ಲಿ ಶಿವದೇವಮಂತ್ರಿಯ ಶತಕದಲ್ಲೂ ಹರಿಹರದೇವನ ರಕ್ಷಾಶತಕ, ಪಂಪಾಶತಕಗಳಲ್ಲೂ ಕಾಣಬಹುದು.

ಕಲ್ಯಾಣ ಕ್ರಾಂತ್ರಿಯುಗದ ಪೂರ್ವದಲ್ಲಿದ್ದ ನಾಗವರ್ಮಾಚಾರ್ಯನು ಮಾರ್ಗಸಂಪ್ರದಾಯದಲ್ಲಿ ಬರೆದ 'ವೈರಾಗ್ಯಶತಕ' ವೊಂದನ್ನು ಬಿಟ್ಟರೆ ಕನ್ನಡ ಸಾಹಿತ್ಯದಲ್ಲಿ ಹರಿಹರನ ಶತಕದ್ವಯಗಳೇ ಪ್ರಪ್ರಥಮಶತಕಗಳು. ನೂತನ ಯುಗ ಪ್ರವರ್ತಕರಾದ ಪಂಡಿತರಾಧ್ಯ, ಸೋಮನಾಥ ಮತ್ತು ಹರಿಹರ ಇವರು ತಮ್ಮ ಶತಕಗಳಿಂದಲೂ ತದಿತರ ಕೃತಿಗಳಿಂದಲೂ ಹೊಸದೊಂದು ಶಿವಕವಿ ಸಮಯವನ್ನೇ ಸ್ಥಾಪಿಸಿದರು. ಏಕದೇವೋಪಾಸನೆ, ಷಟ್‌ಸ್ಥಲ ಸಿದ್ಧಾಂತದಲ್ಲಿಯ ಮಹೇಶ್ವರ ಸ್ಥಲದಭಕ್ತಿ, ಉಜ್ವಲವಾದ ವ್ಯಕ್ತಿಸ್ವಾತಂತ್ರ್ಯ "ಮನುಜರಮೇಲೆ ಸಾಯುವರಮೇಲೆ ಕನಿಷ್ಠರಮೇಲೆ" ಕವಿತೆಯನ್ನು ಕಟ್ಟುವ ಹವ್ಯಾಸದ ನಿರಸನೇ, ಸರ್ವಸುಖಗಳನ್ನು ಶಿವಾರ್ಪಿತಬುದ್ಧಿಯಿಂದ ಅನುಭವಿಸುವ ವೈರಾಗ್ಯ ಸರ್ವಸಮನ್ವಯ ದೃಷ್ಟಿಯಿವುಗಳೇ ಈ ನೂತನ ಸಂಪ್ರದಾಯದ ವೈಶಿಷ್ಟಗಳಾಗಿದ್ದು ಇವುಗಳನ್ನು ೧೨ನೇ ಶತಕಮಾನದಿಂದ ೧೭ನೆಯ ಶತಕಮಾನದವರೆವಿಗೂ ಈ ಉಭಯಭಾಷೆಗಳಲ್ಲಿ ಹರಿದುಬಂದ ವಾಙ್ಮಯದಲ್ಲಿ ಕಾಣಬಹುದು.

"ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ"

ಎಂಬ ಮಕುಟವುಳ್ಳ ನೂರು ವೃತ್ತಗಳಿಂದಲೂ ಕೊನೆಯಲ್ಲೊಂದು ಫಲಶೃತಿಯ ಪದ್ಯದಿಂದಲೂ ಹೆಣೆಯಲ್ಪಟ್ಟಿರುವ ಈ ಪದ್ಯಮಾಲಿಕೆಗೆ 'ರಕ್ಷಾ

ಶತಕ' ವೆಂಬ ಹೆಸರನ್ನು ಕವಿಯೇ ಕೊಟ್ಟಿರುವನು. ರಕ್ಷಿಸುವ ಕ್ರಿಯೆಯನ್ನು ಸೂಚಿಸುವ ರಕ್ಷಾಶಬ್ದವು ಶಿಶುಗಳನ್ನು ಬಾಲಗ್ರಹಾದಿ ಚೇಷ್ಟೆಗಳಿಂದ ರಕ್ಷಿಸಲು ಕಟ್ಟಲ್ಪಡುವ ತಾಯಿತ (ತಾಯಿತು) ಎಂಬ ಮಂತ್ರಾಕ್ಷರಗಳಿಂದ ಬರೆಯಲ್ಪಟ್ಟಿರುವ ರೇಕೆಗೆಸಹಾ ಅನ್ವಯಿಸುತ್ತದೆ. ಅನೇಕ ಉಪಾಧಿಗಳಿಂದ ಕೂಡಿ ಭಯಾನಕವಾಗಿರುವ ಈ ಘೋರ ಸಂಸಾರವೆಂಬ ಅರಣ್ಯವನ್ನು ಸುರಕ್ಷಿತವಾಗಿ ದಾಟಿ ತನ್ನ ಗಮ್ಯಸ್ಥಾನವನ್ನು ಸೇರಲು ಹೊರಟಿರುವ ಜೀವಿ ಎಂಬ ಪಥಿಕನಿಗೆ ಶಿವನ ಕಾರುಣ್ಯವೆಂಬ ರಕ್ಷೆಯು ಅವಶ್ಯಕವಾಗಿದ್ದು ತನ್ನ 'ಶತಕವೇ ಅಂಥಾರಕ್ಷೆಯೆಂದು ಕವಿಯು ಸೂಚಿಸಿರುವನು. ಸಂಖ್ಯಾನಿಯಮ, ಮಕುಟನಿಯಮಗಳೆರಡೂ, ಈ ಶತಕದಲ್ಲಿ ಪಾಲಿಸಲ್ಪಟ್ಟಿವೆ. ಒಂದೊಂದು ಭಾವವು ಒಂದೊಂದು ವೃತ್ತದಲ್ಲಿ ಪರಿಪೂರ್ಣತೆಯನ್ನು ಹೊಂದಿಸುವುದು ಮಾತ್ರವಲ್ಲದೇ ಕವಿಯು ಜಗತ್ತಿಗೆ ಕೊಡಬೇಕೆಂಬ ಭವ್ಯ ಸಂದೇಶವು ಎಲ್ಲಾ ಪದ್ಯಗಳನ್ನು ಸೂತ್ರರೂಪವಾಗಿ ಹೆಣೆದು ಏಕತಾನವಾಗಿ ಮೆರೆದಿದೆ. ಕವಿಯು ಪದ್ಯಗಳನ್ನು ಮನಬಂದಂತೆ ಬರೆಯದೆ ಒಂದು ನಿರ್ದಿಷ್ಟವಾದ ಪ್ರಣಾಳಿಕೆಯನ್ನು ಅನುಸರಿಸುವನು. ಆ ಪ್ರಣಾಳಿಕೆಯಮೇರೆಗೆ ಶತಕದ ನೂರು ವೃತ್ತಗಳನ್ನು ಎರಡು ಭಾಗಗಳಾಗಿ ಸ್ಥೂಲವಾಗಿ ವಿಂಗಡಿಸಬಹುದು.

ಮೊದಲಿನದರಿಂದ ೪೩ ವೃತ್ತಗಳು ಪ್ರವೃತ್ತಿಮಾರ್ಗದ ಅವಸ್ಥೆಗಳನ್ನು ಚಿತ್ರಿಸಿರುವುವು. ೪೩ನೇ ವೃತ್ತದಲ್ಲಿ ಈ ಅವಸ್ಥೆಗಳ್ಯಾವೆಂಬುದರ ಪುನರುಕ್ತಿಯಿದೆ. ತದನಂತರ ಕೊನೆಯುವರಿವಿಗೂ ನಿವೃತ್ತಮಾರ್ಗವು ನಿರ್ದೇಶಿಸಲ್ಪಟ್ಟಿದೆ.

ಮಂಗಳಕರವಾದ ಶ್ರೀಕಾರದಿಂದ ಪ್ರಾರಂಭವಾಗುವ ಮೊಟ್ಟಮೊದಲನೆಯ ವೃತ್ತದಲ್ಲಿ ಕವಿಯು ನಮ್ಮನ್ನು ಪಾವನವಾದ ತುಂಗಭದ್ರೆಯ ನಿರ್ಮಲ ಜಲದಲ್ಲಿ ಮೀಯುವಂತೆ ಮಾಡಿ ವಿಷಯಪ್ರವೇಶಕ್ಕೆ ಬೇಕಾಗುವ ಪಾರಿಶುದ್ಧವನ್ನೂ ಶಾಂತಿವಾತಾವರಣವನ್ನು ಕಲ್ಪಿಸಿರುವನು. ತನ್ನ ಆರಾಧ್ಯ ಮೂರ್ತಿಯಾದ ಹಂಪೆಯ ವಿರೂಪಾಕ್ಷನನ್ನು ಸಾಕಾರ ಬ್ರಹ್ಮನೆಂದೂ 'ಭಕ್ತಿಪ್ರೇಮಾಂಭೋರಾಶಿಯೆಂದೂ ವಿಶೇಷಿಸಿ ಸಪ್ರೇಮ ಭಕ್ತಿಸಿದ್ಧಾಂತವೇ ತನ್ನ

ಕಾವ್ಯದ ವಸ್ತುವೆಂದು ಸೂಚಿಸಿರುವನು. ಕರ್ಮಪಾಶಬದ್ಧನಾದ ಜೀವಿಯು ಜನನ ಮರಣಗಳ ಪರಿಭ್ರಮಣ ಚಕ್ರದಲ್ಲಿ ತೊಳಲಿ ಬಳಲಿ ನರಜನ್ಮಕ್ಕೆ ಬರುವ ಯಾತನೆಯನ್ನು ಭೀಭತ್ಸವಾಗಿ ವರ್ಣಿಸಿರುವನು. 'ಜನನೀ ಗರ್ಭಾಂತದಿಂ ಬರ್ಪವಿಷಮಶ್ಲೇಶ' ವನ್ನೂ 'ಬಾಲ್ಯದೋಳ್ ಮಾಳ್ಪ ನಿಷೇಧ ವ್ರಾತ' ವನ್ನೂ 'ಯೌವನದ ವಿಕಳತೆಯನ್ನೂ 'ಮುಪ್ಪಿನ ಹೇಯವನ್ನೂ ಸಾವಿನ ಸಂಕಟ" ವನ್ನೂ ಹೃದಯವನ್ನು ಸ್ತಂಭಿಸುವ ಶೈಲಿಯಲ್ಲಿ ಚಿತ್ರಿಸಿರುವನು. ಈ ಚಿತ್ರಗಳು ವಿಶ್ವವಿಖ್ಯಾತನಾದ ಷೇಕ್ಸಪಿಯರ್ ಕವಿಯು ಮಾನವ ಜೀವಿಯ ಏಳು ಅವಸ್ಥೆಗಳ ಶಬ್ಧ ಚಿತ್ರಗಳನ್ನು ನೆನೆಪಿಗೆ ತರುವುವು ಮುಪ್ಪಿನಬಗ್ಗೆ ಕವಿಯು :

ಎಡೆಗೊಂಡೀಮುಪ್ಪು ದೋಱಲ್ ನೆರೆನೆಗೆದು ಸಿರಂದೂಗಿ ಬೆನ್ ಬಾಗಿಯೆಂತ
ಕ್ಕಡಿಯೆತ್ತಲ್ಕಾಱದೆತ್ತಂ ದಡದಡಿಸಿ ಕರಂ ಜೋಲ್ದು ಕೋಲೂಱಿ ನಿಂದುಂ
ನಡುಗುತ್ತುಂ ಕೆಮ್ಮಿ ಕೆಮ್ಮುತ್ತೊಡಲನೊಲೆಯುತುಂ ಮುಗ್ಗಿ ಬಳ್ದಂನಿತಾಂತಂ
ಕೆಡೆವಲ್ಲಿಂ ಮುನ್ನ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ

ಹೇಳಿ ಉತ್ತಮ ಭಕ್ತ, ಜ್ಞಾನಿ ಸ್ಥಳದಲ್ಲಿರುವ "ನೆರೆಕೆನ್ನೆಗೆ ತೆರೆಗಲ್ಲಕೆ" ಶರೀರಗದಡು ವೋಗದಮುನ್ನ, ಹಲ್ಲು ಹೋಗಿ, ಬೆನ್ನುಬಾಗಿ ಅನ್ಯರಿಗೆ ಹಂಗಾಗದ ಮುನ್ನ, ಕಾಲದಮೇಲೆ ಕೈಯನೂಱಿ ಕೋಲಹಿಡಿಯದ ಮುನ್ನ ಮುಪ್ಪಿಂದೊಪ್ಪುವಳಿಯದಮುನ್ನ ಮೃತ್ಯು ಮುಟ್ಟದಮುನ್ನ - ಪೂಜಿಸಂ ನಮ್ಮ ಕೂಡಲಸಂಗಮದೇವನ"

ಎಂಬ ಬಸವಣ್ಣನವರ ವಚನವೇ ಪದ್ಯರೂಪವನ್ನು ತಾಳಿದಂತಿದೆ. ಆಂಧ್ರದಲ್ಲಿ ಹರಿಹರನ ಪ್ರತಿರೂಪನಾದ ಪಾಲ್ಕುರಿಕ ಸೋಮನಾಥನು ಇದೇ ವಚನವನ್ನು ತನ್ನ ಕಾವ್ಯದಲ್ಲಿ ಗರ್ಭೀಕರಿಸಿಕೊಂಡಿರುವನು.

ತರುವಾಯ ಕೊನೆಯದಾದ ಮರಣಾವಸ್ಥೆಯು ಎಂಥವರನ್ನಾದರೂ ಗಡಗಡ ನಡಿಗಿಸುವಂತೆ ವರ್ಣಿಸಲ್ಪಟ್ಟದೆ. ಈ ಉಪಾಧಿಗಳಿಂದ ಮುಕ್ತ

ನಾಗಬೇಕೆಂದರೆ ಶಿವನಿಗೆ ಅನನ್ಯ ಭಕ್ತಿಭಾವದಿಂದ ಶರಣು ಹೋಗುವುದೇ ಮಾರ್ಗವೆಂದು ಉದ್ಘೋಷಿಸಿ ಕವಿಯು ನಮ್ಮನ್ನು ಪ್ರವೃತ್ತಿಮಾರ್ಗದಿಂದ ನಿವೃತ್ತಿಮಾರ್ಗಕ್ಕೆ ಅನುಗುಣವಾದ ಶರಣಸಂಗ, ಅಷ್ಟಾವರಣ ಮಾರ್ಗ, ಷಟ್ ಸ್ಥಲ ಸಿದ್ಧಾಂತದ ಪ್ರತಿಪಾದನೆಗಳನ್ನು ನಿರೂಪಿಸಿರುವನು. ಲಿಂಗಾರ್ಚನೆಯಿಂ ದುಂಟಾಗುವ ಮಹದಾನಂದವನ್ನು ಬಣ್ಣಿಸುವ ಪ್ರಸಂಗದಲ್ಲಿ ಕವಿ ನಮ್ಮನ್ನು ಪುನಃ ತುಂಗಭದ್ರಾ ತೀರಕ್ಕೆ ಕರೆದೊಯ್ಯುವನು:

‘‘ಅದನಿನ್ನೇನೆಂಬೆನಾಹಾ ಗುರುತರಸುಖಮಂ ತುಂಗಭದ್ರಾನದೀತೀ-
ರದೊಳಿರ್ದುತ್ತುಂಗಹಸ್ತಂ ಮುಕುಲಿತನಯನಂ ಭೂತಿಸರ್ವಾಂಗನಾಗಿ-
ರ್ದು ದಯಾಂಭೋರಾಶಿ ಗಂಗಾಧರ ಪುರಹರ ಸರ್ವೇಶಂನೆಂದುಬ್ಬಿನಾ ಸೌ
ಖ್ಯದ ಪೆರ್ಚಂ ಕೊಟ್ಟು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೬೧

ಎಂದು ಹೇಳಿ ಲಿಂಗಪೂಜೆಗೆ ಯೋಗ್ಯವಾದ ಸ್ಥಳವನ್ನು ‘‘ತಳಿರಿಂ, ಪೂವಿಂ” ಎಂಬ ಪದ್ಯದಲ್ಲಿ ವರ್ಣಿಸಿ, ನಮಗೆ ತನ್ನ ಆಶ್ರಮದ ಪರಿಚಯ ಮಾಡಿಕೊಟ್ಟಿ ರುವನು. ಶಿವ ತತ್ತ್ವದ ನಿರೂಪಣೆ, ಶಿವಶರಣ ಮಾಹಾತ್ಮ್ಯ, ಶರಣ ಸಂಗದ ಆವಶ್ಯಕತೆ, ಮುಂತಾದವುಗಳನ್ನು ನಿರೂಪಿಸಿರುವ ಪದ್ಯಗಳಲ್ಲಿ ಪಂಡಿತಾರಾಧ್ಯನ ‘‘ಶಿವ ತತ್ತ್ವ ಸಾರ’’ದ ಛಾಯೆಯನ್ನು ಕಾಣಬಹುದು. ನಿವೃತ್ತಿಯ ಕೊನೆಯ ಹಂತದಲ್ಲಿ ಜೀವಿಗೆ ಉಂಟಾಗುವ ಅನಿರ್ವಚನೀಯವಾದ ಆನಂದ ವನ್ನು ಬಣ್ಣಿಸಿ ಶಿವನ ಪಾದಕಮಲಗಳನ್ನು ಸೇರಿದ ಸಾಮೀಪ್ಯಾವಸ್ಥೆಯಲ್ಲಿ ಕವಿಯು:

ಬಿಡೆನೀಶಾ ನಿಮ್ಮ ಪಾದಾಬ್ಜಮನೆಲೆಲೆ ಬಿಡೆಂ ಸೀಳ್ದೊಡಂ ಪೋಳ್ದೊಡಂ ಪೊ-
ಯ್ದೊಡಮುಂದಿಂದೆಂದುಮೆಂತುಂಬಿಡೆನಭವ ಬಿಡೆಂಶಂಕರಾ ಮೂಣೆನಾಂಬಲ್-
ವಿಡಿದೆಂ ಮತ್ತತ್ತಮಿತ್ತಂ ಚಲಿಯಿಸದೆಲೆ ಮತ್ಸ್ವಾಮಿ ನಿಮ್ಮಾಜ್ಞೆಯಿಂದಂ
ಮೃಡನೇ ಭಕ್ತಾರ್ಥಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ

ಎಂದು ಭಕ್ತಿ ಭಾವೋದ್ರೇಕದಿಂದ ಪ್ರೈಮರಿದು ಒರಲುವನು.

## "ಯಾತ್ರಿಕನ ಪುರೋಗಮನ"

ರಕ್ಷಾಶತಕವು ಸಾಧಕಾವಸ್ಥೆಯ ಜೀವನವನ್ನು ಚಿತ್ರಿಸಿದ್ದು ಆಂಗ್ಲ ಸಾಹಿತ್ಯದಲ್ಲಿ ಹೆಸರಾಂತ ಜಾನ್ ಬನಿಯನ್ ಎಂಬ ಸಾಧಕನ "Piligrim's Progress" (ಯಾತ್ರಿಕನ ಪುರೋಗಮನ) ಎಂಬ ಸುಪ್ರಸಿದ್ಧ ಗದ್ಯ ಕಾವ್ಯವನ್ನು ನೆನಪಿಗೆ ತರುತ್ತದೆ. ಆ ಗ್ರಂಥದಲ್ಲಿಯ 'ಮರಣದ ನೆರಳಿನ ಕಿಬ್ಬದಿ' (Valley of the shadow of death) ಎಂಬ ಭೀಭತ್ಸ ದೃಶ್ಯವು ಈ ಶತಕದ ಕೆಲವು ಪದ್ಯಗಳಲ್ಲಿ ಚಿತ್ರಿತವಾಗಿದೆ. "ಕಂಡೇಂ ವಿರೂಪಾಕ್ಷನಂ" ಎಂಬ ಅಪೂರ್ವವಾದ ಉದ್ಘೋಷವನ್ನು ಒಳಗೊಂಡಿರುವ ಹರಿಹರನ ಪಂಪಾ ಶತಕವು, ರಕ್ಷಾಶತಕದ ಪರಿಶಿಷ್ಟವೆಂದೇ ಹೇಳಬೇಕು. ಕರ್ಮಮಾರ್ಗದಲ್ಲಿ ಜರ್ಜಿತನಾದ ಜೀವಿಯು ಗುರುಕಾರುಣ್ಯವನ್ನು ಪಡೆದು, ಶರಣರ ಸಂಗದಿಂದ ಶಿವಾನುಭವವನ್ನು ಅಳವಡಿಸಿಕೊಂಡು, ಅಷ್ಟಾವರಣ ಷಟ್‌ಸ್ಥಲಮಾರ್ಗವನ್ನು ಹಿಡಿದು, ಶಿವನಿಗೆ ಶರಣು ಹೋಗಿ' ಮನವಾರೆ ಸ್ತುತಿಸಿ, ಪಾಡಿ, ಬೇಡಿ, ತನ್ಮಯನಾಗಿ, ಶಿವ ಸಾಕ್ಷಾತ್ಕಾರವನ್ನು ಪಡೆದು ಅದರಿಂದುಂಟಾದ ಶಾಂತಿ ಸುಖಗಳನ್ನು ಸವಿದು, ಮುಕ್ತನಾಗಿ, ಶಿವನ ಮತ್ತು ಆತನ ಶರಣರ ಪೆಂಪನ್ನು ಶಿವ ಭಕ್ತಿಯ ಇಂಪನ್ನು ಲೋಕಕ್ಕೆ ಬೋಧಿಸಿರುವನು. ಇವೆರಡೂ ಶತಕಗಳೊಂದಿಗೆ ಕವಿಯ "ಪಿಂಡೋತ್ಪತ್ತಿ ಅಥವಾ ಸಂಸಾರ ಹೇಯ ಸ್ಥಲ" ರಗಳೆಯನ್ನು ಸಹಾ ಮನನ ಮಾಡಿಕೊಳ್ಳುವುದು ಕವಿಯ ಹೃದಯವನ್ನು ಪ್ರವೇಶಿಸಲಿಕ್ಕೆ ಅನುಬಂಧರೂಪವಾಗಿ ಸೇರಿಸಿರುವುದು ಸಮಂಜಸವಾಗಿದೆ. ಶತಕದ ಭಾವಗಳೇ ರಗಳೆಯ ರೂಪವಾಗಿ ನಿರೂಪಿತವಾಗಿದ್ದು ಪಾಮರರಿಗೆ ಸಹಾ ಸುಲಭವಾಗಿ ಅರ್ಥಮಾಡಿಕೊಳ್ಳಲೂ ಶಕ್ಯವಿದೆ. ಈ ಮೂರೂ ಕೃತಿಗಳನ್ನು "ಭಕ್ತಿಯೋಗ ಪ್ರದೀಪಿಕೆ" ಎಂದು ಕರೆಯಬಹುದು.

## ಆತ್ಮ ಕಥೆಯಲ್ಲ; ಜೀವಾತ್ಮನ ಕಥೆ!

ಪಾಲ್ಕುರಿಕಿ ಸೋಮನಾಥನು ಪ್ರತ್ಯಕ್ಷ ಭೃಂಗೀಶನ ಅವತಾರನೆಂದು, ವೀರಶೈವ ಸಾಹಿತ್ಯದಲ್ಲಿ ವಿಶೇಷಿಸಲ್ಪಟ್ಟಿರುವಂತೆ, ಪವಾಡ ಪುರುಷನಾದ ಹರಿ

ಹರನು ಕಲಿಯುಗದ ಮುಕ್ಕಣ್ಣನೆಂದು ಭಾವಿಸಲ್ಪಟ್ಟಿರುವನು. ಆದರೆ ಇವರೀರ್ವರ ಸಮಗ್ರಜೀವನದ ಚರಿತ್ರೆಯನ್ನು ರಚಿಸಲಿಕ್ಕೆ ಸಾಕಷ್ಟು ಸಲಕರಣೆಗಳು ಇನ್ನೂ ದೊರೆತಿಲ್ಲ. ಸೋಮನಾಥನ ಜೀವನದ ಬಗ್ಗೆ ಆತನ ಶಿಷ್ಯ ಪ್ರಶಿಷ್ಯರಾದ ಪಿಡುಪರ್ತಿ ಕವಿಗಳ ಗ್ರಂಥದಲ್ಲಿ ತುಂಡುತುಂಡಾದ ಸಂಗತಿಗಳು ಕಂಡುಬರುತ್ತವೆ. ಅದರಂತೆ ಕನ್ನಡ ಸಾಹಿತ್ಯದಲ್ಲಿ ಹರಿಹರನ ಬಗ್ಗೆ ಹಲಕೆಲವು ಸಂಗತಿಗಳು ಸಿಗುತ್ತಿದ್ದರೂ ಅವುಗಳಲ್ಲಿ ಪವಾಡಗಳೇ ವಿಶೇಷವಾಗಿರುತ್ತವೆ. ರಾಘವಾಂಕನ ''ಹರಿಹರ ಮಹಾತ್ಮ್ಯೆ'' ಎಂಬ ಕಾವ್ಯವು ನಮಗಿನ್ನೂ ಸಿಕ್ಕಿಲ್ಲ. ಕನ್ನಡ ಸಾಹಿತ್ಯ ಚರಿತ್ರೆಯ ಗ್ರಂಥಕರ್ತರು "ಹರಿಹರನ ಎರಡೂ ಶತಕಗಳು ನೇರವಾದ ಆತ್ಮ ಕಥನವಾಗಿವೆ'' ಎಂದು ಹೇಳುತ್ತಾ, "ಸಂಸಾರ ಭಾರ, ರಾಜ ಸೇವೆ, ಇದರಿಂದ ಮುಕ್ತನಾಗಿ ಅವನು ಭಕ್ತಿಜೀವನಕ್ಕೆ ತನ್ನನ್ನು ಮೀಸಲು ಮಾಡಿದ್ದರ ಸೂಚನೆಯೂ ಅಲ್ಲಿದೆ'' ಎಂದೂ ಬರೆದಿರುವರು. ಬೇರೆ ಕೆಲವು ಪಂಡಿತರು, ಈ ಮೂರು ಕೃತಿಗಳ ಆಧಾರದ ಮೇಲೆ ಹರಿಹರನ ಜೀವನ ಚರಿತ್ರೆಯೊಂದನ್ನೇ ಕಲ್ಪಿಸಿರುವರು. ಅವನು ಕಿರುಜವ್ವನದಲ್ಲೇ ಯಾವಳೋ ಒಬ್ಬ ದೈತೆಯನ್ನು ಮದುವೆಮಾಡಿಕೊಂಡು ಬಿಟ್ಟನಂತೆ. ಇಜ್ಜೋಡಿನ ಫಲವಾಗಿ ಅವನ ಸಂಸಾರವೇ ವಿಷಮಯವಾಗಿ ಪರಿಣಮಿಸಿ ಅವನು ವೇಶ್ಯಾಲೋಲನಾಗಿ ತನ್ಮೂಲಕ ತನು ಬಲ, ಧನಬಲಗಳು ಕಡಿಮೆಯಾಗುತ್ತವೆಯಂತೆ. ಅವನ ಪ್ರೇಯಸಿಯರು ಅವನನ್ನು ಕಸದಂತೆ ಕಡೆಗಾಣಿಸಿದರಂತೆ! ದಾರಿದ್ರ್ಯದಿಂದ ಮಲಮಲಮಾಡುತ್ತಿದ್ದ ಅವನು ಬೇಸಾಯಗಾರನಾಗಿ ಕೆಲವು ದಿನಗಳೂ ಸೇವಕವೃತ್ತಿಯಲ್ಲಿ ಕೆಲವು ದಿನಗಳೂ ಯಾಚಕ ವೃತ್ತಿಯಲ್ಲಿ ಇನ್ನೂ ಕೆಲವು ದಿನಗಳೂ ಕಳೆದು ಕೊನೆಗೆ, ಹಸಿವೆಯ ಬಾಧೆಯಿಂದ ತಾಳಲಾರದೆ ಕಳವಿನ ಜೀವನಕ್ಕಿಳಿಯಲೂ ಸಿದ್ಧನಾದನಂತೆ!! ದೇಶಾಟನೆಯನ್ನು ಕೈಕೊಂಡನಂತೆ. ಕೊನೆಗೆ ರಾಜಾಸ್ಥಾನದಲ್ಲಿ ಕರಣಿಕನಾಗಿ ದುಡಿದು ಆ ಜೀವನದಲ್ಲಿ ಬೇಸರಪಟ್ಟು ಹಂಪೆಯನ್ನು ಸೇರಿಕೊಂಡನಂತೆ !

ಬಹು ಆಕರ್ಷಕವಾಗಿ ತೋರುವ ಈ ವಾದವು ತರ್ಕದ ಒರೆಗಲ್ಲಿಗೆ ಸಿಂತಲ್ಲಿ ಈ ಮೂರೂ ಕಾವ್ಯಗಳಿಗೂ ಐತಿಹಾಸಿಕ ಮಹತ್ವವು ಸಿದ್ಧಿಸುತ್ತದೆ. ಆದರೆ ಇತಿಹಾಸದ ಬಗ್ಗೆ ನಮ್ಮವರಿಗಿರುವ ಮನೋವೃತ್ತಿಯನ್ನು

ಮನನಮಾಡಿಕೊಂಡಲ್ಲಿ ಈ ವಾದವನ್ನು ಅಂಗೀಕರಿಸುವುದು ಬಹುಕಷ್ಟವೆಂದು ತೋರುತ್ತದೆ. ಕಾಳಿದಾಸ, ಭರ್ತೃಹರಿ, ವೇಮನಯೋಗಿ, ಸರ್ವಜ್ಞ, ಧೂರ್ಜಟಿ, ಮುಂತಾದವರು ತಮ್ಮ ಕೃತಿಗಳಲ್ಲಿ ಅಲ್ಲಲ್ಲಿ ಹೇಳಿರುವ ಕೆಲವು ವಾಕ್ಯಗಳನ್ನು ಆಧಾರವಾಗಿ ತೆಗೆದುಕೊಂಡು ಕೆಲವರು ಅವರ ಬಗ್ಗೆ ಅನೇಕ ಚಿತ್ರ ವಿಚಿತ್ರ ಕತೆಗಳನ್ನು ಕಲ್ಪಿಸಿರುವರು. ಪರಮವೈರಾಗ್ಯಶೀಲನಾದ ಧೂರ್ಜಟಿ ಕವಿಯು, ತನ್ನ "ಕಾಳಹಸ್ತೀಶ್ವರ ಶತಕ"ದಲ್ಲಿ ಒಂದೆಡೆ:

‹‹ಕಾಯಲ್ಗಾಜೇ, ವಧೂ ನಖಾಗ್ರಮುಲ ಜೇ ಗಾಯಂಬು''

ಎಂದು ಹೇಳಿರುವುದರಿಂದ ಆತನು ವೇಶ್ಯಾಲೋಲನಾಗಿದ್ದನೆಂದೂ ವೇಶ್ಯೆಯರ ಅಧರಾಮೃತಪಾನವೇ ಅವನ ಕವಿತ್ವದ "ಅತುಲಿ ತಮಾಧುರೀಮಹಿಮೆ'ಗೆ ಕಾರಣವಾಗಿದ್ದಿತೆಂದೂ, ಕೆಲ ಕೆಲ ಕುಚೋದ್ಯಗಾರರು ಹೇಳಿರುವರು. ಮಹಾಪುರುಷರು ಲೋಕದ ತಪ್ಪುಗಳನ್ನು ತಮ್ಮ ಮೇಲೆಯೇ ಹಾಕಿಕೊಂಡು, ಲೋಕೋದ್ಧಾರಕ್ಕಾಗಿ ಪರಮಾತ್ಮನನ್ನು ಬೇಡುವುದು ವಿಶ್ವದ ಆಧ್ಯಾತ್ಮಿಕ ಸಾಹಿತ್ಯದಲ್ಲಿ ಕಂಡುಬರುವುದು. ಏಸುಕ್ರಿಸ್ತನು ಮಾನವ ಜಾತಿಯ ಪಾಪದ ಹೊರೆಯವನ್ನೆಲ್ಲ ತನ್ನ ಮೇಲೆ ಹೊತ್ತುಕೊಂಡು, ಕೊನೆಗೆ ಲೋಕದ ಪಾಪವಿಮೋಚನೆಗಾಗಿಯೇ ಸಿಲುಬೆಗೆ ಏರಿ, ತನ್ನ ದೇಹವನ್ನೇ ಆಹುತಿಕೊಡುತ್ತಾನೆ. ಕೈವಲ್ಯ ಸಾಹಿತ್ಯದಲ್ಲಿ ಮಹಾತ್ಮರು ತಮ್ಮನ್ನು ತಾವು ಹಳಿದುಕೊಳ್ಳುವುದು, ಒಂದು ಪರಂಪರೆಯಾಗಿಯೇ ಬಂದಿದ್ದು, ಅಂಥ ಅವಹೇಳನೆಗಳನ್ನು ಅವರಿಗೇನೇ ಆರೋಪಿಸುವುದು ಅಷ್ಟೊಂದು ಸಮಂಜಸವಾಗಿ ಕಾಣುವುದಿಲ್ಲ.

ಯಾವುದಾದರೊಂದು ಭಾವನೆಯವನ್ನು ಪ್ರಖರವಾಗಿ ಮನಂಬುಗುವಂತೆ ವರ್ಣಿಸುವುದು ಹರಿಹರನ ಶೈಲಿಯ ವೈಶಿಷ್ಟ್ಯ. ಅಂತೆಯೇ ಬಾಲ್ಯದಿಂದ ಮರಣಾವಸ್ಥೆಯವರೆಗಿನ ಜೀವನದ ದುರಂತಗಳನ್ನು ಹರಿಹರನು ಬಹು ತೀಕ್ಷ್ಣವಾದ ಶೈಲಿಯಲ್ಲಿ ವರ್ಣಿಸಿರುವುದರಿಂದ ಆ ದುರಂತಗಳೆಲ್ಲವೂ ಅವನ ಜೀವನದಲ್ಲೇ ಜರುಗಿರಬಹುದೆಂದು ಊಹಿಸುವುದು ಸೂಕ್ತವಲ್ಲ. ಅಲ್ಲಿರುವ ಮಾತುಗಳೆಲ್ಲವೂ ವಿಶ್ವದ ಸಮಾನ್ಯ ಮಾನವರನ್ನು ಕುರಿತು ಹೇಳಿದವುಗಳೆಂದು ತಿಳಿಯುವುದು ಹೆಚ್ಚು ಸಮಂಜಸವು. ಜನನ, ಬಾಲ್ಯ, ಯೌವನ, ಮುಪ್ಪು, ರೋಗಗಳನ್ನು ಕುರಿತು ವರ್ಣಿಸಿರುವ ಮಾತುಗಳು ಇಹಲೋಕ ಜೀವಿಗಳೆಲ್ಲರ ಜನನ,

ಬಾಲ್ಯ, ಯೌವನ, ಮುಪ್ಪು, ರೋಗಗಳಿಗೆ ಸಮನಾಗಿ ಅನ್ವಯಿಸುತ್ತವೆ. ಕವಿ ಈ ಶತಕವನ್ನು ತನ್ನನ್ನು ಕುರಿತು ಬರೆದುಕೊಂಡ ಎಂದು ಭಾವಿಸುವುದಕ್ಕಿಂತ, ನಮ್ಮನ್ನು, ನಿಮ್ಮನ್ನು, ಎಲ್ಲರನ್ನೂ ಕುರಿತು ಬರೆದನೆಂದು ಬಗೆಯುವುದರಲ್ಲಿ ಯಾವ ತಪ್ಪಿದೆ? ಪಿಂಡ ಸ್ಥಳ ರಗಳೆಯಲ್ಲಿ ಹರಿಹರನು: ''ಮಿಸುಕದಂತಲ್ಲೊಂದು ಎಳೆ ಪುರವ ಬಿಗಿವಂತೆ ವೈತೆಯಂ ತಂದೊರ್ಬಾಳಂ ಮದುವೆಯಮಾಡಿ'' ಎಂದು ಹೇಳಿರುವ ಮಾತ್ರದಿಂದಲೇ ಅವನು ಮೊದಲು ಲಗ್ನವಾಗಿ, ಹೆಂಡತಿಯ ಕಾಟದಿಂದ ಸಂಸಾರವನ್ನು ತ್ಯಜಿಸಿದನೆಂದು ಊಹಿಸುವುದು ಯತ್ನಕೃತ (far fetched) ಎಂದು ನಾನು ಭಾವಿಸುತ್ತೇನೆ. ಒಂದುವೇಳೆ ಕವಿ ತನ್ನ ಸ್ವಾನುಭವವನ್ನೇ, ಆತ್ಮ ಕಥೆಯನ್ನೇ ಇಲ್ಲಿ ನಿರೂಪಿಸಿದನೆಂದು ವಾದಿಸುವುದಾದರೆ, ರಕ್ಷಾಶತಕದಲ್ಲಿಯ ಮುಪ್ಪು ಸಾವುಗಳ ವರ್ಣನೆಗೂ, ಪಂಪಾ ಶತಕದಲ್ಲಿ ಬರುವ ''ನವೆದೇಂ ರೋಗಂಗಳಿಂ, ಸೆಡೆದೇಂ....'' ಎಂಬ ಉದ್ಗಾರಗಳಿಗೂ ಅದೇ ಅರ್ಥವನ್ನು ಹಚ್ಚಿದರೆ, ಹರಿಹರನು ಈ ಕೃತಿಗಳನ್ನು ರಚಿಸುವುದಕ್ಕಿಂತ ಮುಂಚೆ, ರೋಗಗಳಿಂದ ಬಳಲಿ ಸತ್ತೂ ಹೋಗಿದ್ದನೆಂದು ಹೇಳುವ ಆಭಾಸಕ್ಕೆ ಗುರಿಯಾಗಬೇಕಾಗುವುದು! ಹರಿಹರನು ಹಲವುಬಾರಿ ತನಗಾಗಿಯೂ ಹಾಡಿಕೊಂಡಿದ್ದು, ಅಂಥಾ ಸಂದರ್ಭಗಳಲ್ಲಿ ''ಹಂಪೆಯ ಹರಿಹರ''ಗೆಂದೂ ತಿಳಿಸಿದ್ದಾನೆ. ಆದಕಾರಣ ಈ ಕೃತಿಗಳಲ್ಲಿ ಕವಿ ತನ್ನ ಆತ್ಮಕಥೆಯನ್ನು ಹಾಡಿಕೊಂಡಿದ್ದಾನೆಂದು ಭಾವಿಸದೆ, ಮಾನವ ಕೋಟಿಯ ಉದ್ಧಾರಕ್ಕಾಗಿ ಶಿವನನ್ನು ಪ್ರಾರ್ಥಿಸುತ್ತಾನೆ. ಈ ಕೃತಿಗಳಲ್ಲಿ ಹರಿಹರನು ತನ್ನ ಸ್ವೀಯ ಚರಿತ್ರೆಯನ್ನು ಹೆಣೆದಿರುವನೆಂದು ಹೇಳುವುದು ಸಾಹಸದ ಮಾತೇ ಸರಿ!

ಬಹುಜನ ಪಂಡಿತರು, ಘನವಿದ್ವಾಂಸರು ಈ ಕೃತಿಯ ಬಗ್ಗೆ, ಈ ಕವಿಯ ಬಗ್ಗೆ ಕಲ್ಪಿಸಿದ ತಪ್ಪುಕಲ್ಪನೆಗಳಿಂದ ದಾರಿತಪ್ಪದೆ, ದಿಕ್ಕುಗೆಡದೆ ಈ ಕೃತಿಯ ಸಂಪಾದಕರು ಸ್ವತಂತ್ರವಾದ, ಸರಿಯಾದ, ದಾರಿಯನ್ನು ಹಿಡಿದಿರುವುದು ಪ್ರಶಂಸನೀಯವಾಗಿದೆ. ರಕ್ಷಾಶತಕವು ಕವಿಯ ಆತ್ಮಕಥೆಯಲ್ಲ, ಜೀವಾತ್ಮನ ಕಥೆ ಎಂಬುದನ್ನು ಸ್ಪಷ್ಟವಾಗಿ ಮನಗಂಡು, ಸ್ಪಷ್ಟವಾಗಿ ವ್ಯಾಖ್ಯಾನ ಮಾಡಿರುವುದು, ಅವರ ದರ್ಶನ ಶಕ್ತಿಗೆ ಸಾಕ್ಷಿಯಾಗಿದೆ. ಕವಿಯ ಈ ಕೃತಿಯನ್ನು ಈ ರೀತಿಯಾಗಿ ಪರಿಚಯಮಾಡಿಕೊಟ್ಟು ಸಾಹಿತ್ಯ ಲೋಕಕ್ಕೆ, ಕನ್ನಡಿಗರಿಗೆ ಬಹುದೊಡ್ಡ ಸೇವೆ ಸಲ್ಲಿಸಿದ್ದಾರೆಂದು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ.

## ರಕ್ಷಾಶತಕದ ದರ್ಶನ ಯಾವುದು?

ರಕ್ಷಾ ಶತಕದಲ್ಲಿ ನಿರೂಪಿತವಾಗಿರುವ ದರ್ಶನ ಯಾವುದು ಎಂಬುದು ಮಹತ್ತ್ವದ ಪ್ರಶ್ನೆಯಾಗಿದೆ. ಕೆಲವರ ಮತದಲ್ಲಿ ಈ ಕವಿಯು ದ್ವೈತಮತ ಪ್ರತಿಪಾದಕನೆಂದೂ, ಬೇರೆ ಕೆಲವರು ಅದ್ವೈತಮತ ಪಂಥದವನೆಂದೂ, ಇಂಥಾ ಅಪೋಹಗಳು ವಚನಕಾರರ ಬಗೆಗೂ ಪಂಡಿತಾರಾಧ್ಯರ "ಶಿವತತ್ತ್ವಸಾರ"ದ ಬಗೆಗೂ ಬಂದಿವೆ. ಯಾವುದೊಂದು ವಾಕ್ಯವನ್ನು ಅದರ ಸಂದರ್ಭವಾವುದೆಂಬುದನ್ನು ಅರಿತುಕೊಳ್ಳದೇ, ಆ ವಾಕ್ಯದಲ್ಲಿ ಕಂಡುಬರುವ ಸ್ವರಭಾರ (Emphasis)ವನ್ನು ಮಾತ್ರ ದೃಷ್ಟಿಯಲ್ಲಿಟ್ಟುಕೊಂಡರೆ, ಇಂಥಾ ಅಪೋಹಗಳು ಹುಟ್ಟುವುದು ಸಹಜ.

ಅದ್ವೈತವಾದದ ಪ್ರಕಾರ ಬ್ರಹ್ಮವು ಕೇವಲ ನಿರ್ಗುಣ, ಅಥವಾ ನಿರ್ವಿಶೇಷ. ಜಗತ್ತು ಅವಿದ್ಯಾರೂಪಮಾಯೆಯಿಂದ ಕಲ್ಪಿತವಾಗಿದೆ: ಆ ಮಾಯೆ ಯಥಾರ್ಥವಲ್ಲ. ಪ್ರಪಂಚವು ಭ್ರಾಂತಿಜನ್ಯವಾದುದು. ಸತ್ಯವಾದುದಲ್ಲ; ಮಿಥ್ಯೆ. ಇಂಥ ಅದ್ವೈತವಾದಕ್ಕೆ ಹರಿಹರನು—"ಷಡ್ದರ್ಶನಂ ಕೀಳಾದವು, ಮೃಡದರ್ಶನಂ ಮೇಲಾದುದು"—ಎಂದು ಘೋಷಿಸಿದ ಹರಿಹರನು, ಯಾವುದಾವರೂ ಒಂದು ವಾದಕ್ಕೆ ಅದರಲ್ಲೂ ದ್ವೈತ, ಅದ್ವೈತವಾದಕ್ಕೆ ಅಂಟಿಕೊಂಡಿದ್ದನೆಂದು ಹೇಳಲು ಬರುವುದಿಲ್ಲ. ಅವನ ಮೃಡದರ್ಶನ ಅಥವಾ ಶಕ್ತಿ ವಿಶಿಷ್ಟಾದ್ವೈತ ಸಿಂದ್ಧಾಂತವು ಮಾಯೆಗೆ ನಿತ್ಯತ್ವವನ್ನೂ ಸತ್ಯತ್ವವನ್ನೂ ಶಿವನೊಡನೆ ಅವಿನಾಭಾವ ಸಂಬಂಧವನ್ನೂ ಹೇಳಿದ್ದಾನೆ. ಈದರ್ಶನ ದೃಷ್ಟಿಯಿಂದ ಯಾವ ವಸ್ತುವೂ ಮಿಥ್ಯೆಯಲ್ಲ. ಒಂದೊಂದು ವಸ್ತುವು ಒಂದೊಂದು ರೂಪದಲ್ಲಿ ಕಾಲ ಕಾಲದಲ್ಲಿ ಪರಿವರ್ತನೆ ಹೊಂದುವುದಲ್ಲದೆ, ಎಂದೆಂದಿಗೂ ನಾಶ ಹೊಂದುವುದಿಲ್ಲ.

ಮೃಡದರ್ಶನದ ರೀತ್ಯಾ, ಶಕ್ತಿ ವಿಶಿಷ್ಟವಾದ ಪರಬ್ರಹ್ಮವು "ಸ್ಥಲ"ಎಂಬ ಸಾಂಕೇತಿಕ ಶಬ್ದದಿಂದ ವ್ಯವಹರಿಸುವುದು. ಆ ವಸ್ತುವು ಆದಿಯಲ್ಲಿ "ಏಕಮೇವಾದ್ವಿತೀಯಂ" ಎಂಬಂತೆ ಒಂದೇ ಒಂದಾಗಿದ್ದು ತಾನೇ ತಾನಾಗಿದ್ದಿತು. ಆ ವಸ್ತುವಿನಲ್ಲಿ ಅವಿನಾಭಾವದಿಂದ ಇರುವ ವಿಮರ್ಶ ಶಕ್ತಿಯ ಪ್ರಭಾವದಿಂದ ಆ ಏಕಮೇವ ವಸ್ತುವು ಏಕ ಕಾಲದಲ್ಲಿ ಉಪಾಸ್ಯವೂ, ಉಪಾಸಕವೂ ಆಗಿ

''ಲಿಂಗಸ್ಥಲ'', ''ಅಂಗಸ್ಥಲ"ಗಳೆಂಬುದಾಗಿ ದ್ವಿಭಾಗವಾಯಿತು. ಅದರಂತೆ ''ಸ್ಥಲ'', ಗತವಾದ ಶಕ್ತಿಯು ಸಹಾ ಎರಡಾಗಿ, ಲಿಂಗಸ್ಥಲದಲ್ಲಿ ಕಲೆ ಎಂಬುದಾಗಿಯೂ ''ಅಂಗಸ್ಥಲ"ದಲ್ಲಿ ಭಕ್ತಿಯಾಗಿಯೂ ಪರಿಣಮಿಸಿತು. ಲಿಂಗಸ್ಥಲದ ಕಲೆಯು ಪ್ರವೃತ್ತಿ ಪರವು. ಅಂಗಸ್ಥಲದ ಭಕ್ತಿಯು ನಿವೃತ್ತಿ ಪರವು. ಇವೆರಡರ ನಡುವೆ ನಿರಂತರವೂ ಹೋರಾಟ ನಡೆಯುತ್ತಿದ್ದು, ಕೊನೆಗೆ ಅಂಗಸ್ಥಲದ ಭಕ್ತಿಗೇನೇ ಜಯವುಂಟಾಗುವುದು. ಈ ದೃಷ್ಟಿಯಿಂದ ಪ್ರವೃತ್ತಿ ಪರವಾದ ಶಿವನ ಸ್ವಭಾವಕ್ಕಿಂತಲೂ ನಿವೃತ್ತಿ ಪರವಾದ ಅಂಗದ ಸ್ವಭಾವವೇ, ಅರ್ಥಾತ್ ಭಕ್ತಿಯೇ ಶ್ರೇಷ್ಠವು. ಶಿವನಿಗಿಂತ, ಶಿವಭಕ್ತರೇ ಅಧಿಕರು, ''ಕೊಲುವೆನೆಂಬುದು ದೇವರ ಭಾಷೆ, ಗೆಲುವೆನೆಂಬುದು ಭಕ್ತನ ಭಾಷೆ''ಯಾಗಿದೆ. ಈ ಸಂಘರ್ಷಣೆಯಲ್ಲಿ ಅಂತಿಮ ವಿಜಯವು ಭಕ್ತನಿಗೇ. ಭಕ್ತನು ಸತ್ಯವೆಂಬ ನಿಶಿತಾಯುಧದಿಂದ, ಶಿವನ ಪ್ರವೃತ್ತಿಮಾರ್ಗವನ್ನು ಪ್ರತಿಭಟಿಸಿ, ವಿಜಯವನ್ನು ಹೊಂದಿ ತನ್ನ ನಿರ್ದಿಷ್ಟ ಸ್ಥಾನವನ್ನು ಸೇರುವನಾದ— ಕಾರಣ ವೀರಶೈವ ನೆನಿಸಿಕೊಳ್ಳುವನು. ಈ ಭವ್ಯ ದರ್ಶನವು ಮಾನವ ಜೀವನದ್ವಾರಾ ಪ್ರಕೃತಿ ಪುರುಷರಲ್ಲಿ ಮೇಳವನ್ನುಂಟುಮಾಡುವುದು. ಐಹಿಕ ಜೀವನವು ಮಾಯೆಯಲ್ಲ. ಮಿಥ್ಯೆಯಲ್ಲ. ಪವಿತ್ರವಾದ ಸತ್ಯವು. ಇಷ್ಟಲಿಂಗೋಪಾಸನೆಯ ಮೂಲಕ ಮಾನವ ಜೀವನವು ದಿವ್ಯ ಜೀವನವಾಗುವುದು. ಆದಿಭೌತಿಕ ಶಕ್ತಿಗಳನ್ನು ಆಧ್ಯಾತ್ಮಿಕವಾಗಿ ಪರಿವರ್ತನೆ ಗೊಳಿಸುವುದು. ಅಂಗ ಕರಣಗಳು, ಲಿಂಗಕಿರಣಗಳಾಗುವುವು. ಈ ರೀತಿ ವೀರಶೈವದಲ್ಲಿ ಭವ್ಯ ತತ್ತ್ವ ದರ್ಶನವೂ, ವೀರಭಕ್ತಿಮಾರ್ಗವೂ, ಭಕ್ತಿ ಜ್ಞಾನಕ್ರಿಯೆಗಳ ಸತ್ಯಸುಂದರ ಸಮನ್ವಯವೂ ಇರುವುದು.

ಮಲುಹಣ, ನಂಬಿಯಣ್ಣ, ಆದಯ್ಯ, ಬಸವಣ್ಣ ಇವರುಗಳ ಬಗೆ ಬರೆದ ರಗಳೆಗಳಲ್ಲೂ ಮತ್ತು ಗಿರಿಜಾಕಲ್ಯಾಣದಲ್ಲಿ ಸಂಸಾರ ಧರ್ಮದ ಶ್ರೇಷ್ಠತೆಯನ್ನು ಚಿತ್ರಿಸಿದ್ದು ರಕ್ಷಾಶತಕದಲ್ಲಿ ಸಂಸಾರ ನಿರಸನ ಅಥವಾ ಹೇಯತೆಯನ್ನು ನಿರೂಪಿಸಿರುವುದಕ್ಕೆ ಕಾರಣವೇನು ಎಂಬುದನ್ನು ವಿಚಾರಿಸಬೇಕು. ''ರಕ್ಷಾಶತಕದಲ್ಲಿ ಜೀವಿಯು ಭೂಕರ್ಮ (ಪ್ರವೃತ್ತಿ) ಮಾರ್ಗವನ್ನು ತ್ಯಜಿಸಿ, ಭಕ್ತಿ (ನಿವೃತ್ತಿ) ಮಾರ್ಗವನ್ನು ಹಿಡಿಯುವ ಸನ್ನಿವೇಶಸಂದರ್ಭಗಳು ಚಿತ್ರಿಸ

ಲ್ಪಟ್ಟಿದೆ ಎಂಬುದನ್ನು ನಾವು ಲಕ್ಷ್ಯದಲ್ಲಿ ಇಟ್ಟುಕೊಳ್ಳುವುದು ಅವಶ್ಯಕ. ''ಭಕ್ತಿಯೂ ಕರ್ಮವೂ ಎಂದೂ ಒಂದಾಗವೆಂ"ಬುದನ್ನು ಹರಿಹರನು ಬಸವರಾಜ ದೇವರ ರಗಳೆಯಲ್ಲಿ ಸ್ಪಷ್ಟಗೊಳಿಸಿರುವನು. ಇವೆರಡು ಮಾರ್ಗಗಳಲ್ಲಿ ಸಂಸಾರದ ಕಲ್ಪನೆಯು ಬೇರೆಬೇರೆಯಾಗಿವೆ. ಅನೇಕ ಜೀವನಗಳಲ್ಲಿ ಹುಟ್ಟಿ ತೊಳಲಿ ಬಳಲಿ ಸತ್ತು ''ಪುನರಪಿ ಜನನಂ ಪುನರಪಿ ಮರಣಂ" ಎಂದು ಪರಿಭ್ರಮಣ ಚಕ್ರದಲ್ಲಿ ಸಿಲುಕಿ ತಿರುಗುವುದೇ ಸಂಸಾರ. ಇದುವೇ ಕರ್ಮಮಾರ್ಗ. ಪುನರಪಿ ಹುಟ್ಟದಿರುವ ಮೋಕ್ಷವನ್ನು ಪಡೆಯುವುದು ಈ ಮಾರ್ಗದಲ್ಲಿ ಸಾಧ್ಯವಿಲ್ಲ.

ಆದರೆ, ''ದೇವಲೋಕ ಮರ್ತ್ಯ ಲೋಕವೆಂಬುದು ಬೇರಿಲ್ಲ ಕಾಣಿರೋ" ಎಂದು ಸಾರಿದ ಶಿವಶರಣರು ನಿವೃತ್ತಿ ಸಾಧಕವಾದ ಭಕ್ತಿ ಮಾರ್ಗವನ್ನು ಪ್ರತಿಪಾದಿಸಿದರು. ಸ್ವರ್ಗಕ್ಕೆ ಏಣಿಹಾಕುವ ಹವ್ಯಾಸವನ್ನು ಬಿಟ್ಟು, ಸ್ವರ್ಗವನ್ನೇ ಭೂಮಿಗೆ ಇಳಿಸುವ ಪವಾಡವನ್ನು ಕೈಕೊಂಡರು. ಇದೇ ಜನ್ಮದಲ್ಲಿ ಚಿರಂತನ ಮೋಕ್ಷವನ್ನು ಪಡೆಯ ಬಹುದೆಂದೂ ಪುನರ್ಜನವು ಇಲ್ಲವೆಂದೂ ಸಾರಿದರು. ಅದರಿಂದ ಕರ್ಮ ಮಾರ್ಗದ ಹೇಯತೆಯನ್ನು, ಭಕ್ತಿಮಾರ್ಗದ ಉತ್ಕೃಷ್ಟತೆಯನ್ನು ಹೇಳುವುದು ಪ್ರಾರಂಭವಾಯಿತು. ಸಂಸಾರ ಸಾಗರದ ಅಬ್ಬರ, ಮಾಯೆಮಾಡುವ ಇಂದ್ರಿಯ ವಿಕಾರಗಳ ಆಟೋಪಗಳು ವರ್ಣಿಸಿದ್ದು'' ಇಂತಹ ಆಟೋಪಗಳಿಂದ ನನ್ನನ್ನು ದೂರವಾಗಿರಿಸು"ಎಂದು ವಚನಕಾರರು ಶಿವನನ್ನು ಪ್ರಾರ್ಥಿಸಿಕೊಂಡಿರುವರು. ಹರಿಹರನು ಸಹಾ ಅದೇ ರೀತಿ ಹಂಬಲಿಸಿರುವನು. ಜೀವನದ ಅನಿತ್ಯತೆಯನ್ನು ಕುರಿತು ಹೇಳಿ ಆ ಅನಿತ್ಯದಿಂದ ನಿತ್ಯ ಪದವನ್ನು ದೊರಕಿಸುವ ಭಕ್ತಿಮಾರ್ಗದೆಡೆಗೆ ತನ್ನನ್ನು ಕರೆದೊಯ್ಯಬೇಕಾಗಿ ಪಂಪಾವಿರೂಪಾಕ್ಷನಿಗೆ ಮೊರೆಯಿಡುತ್ತಾನೆ. ಆತನ ಕಾವ್ಯವು ಕೇವಲ ವೈರಾಗ್ಯ ಮಾರ್ಗದ ಪ್ರತಿಪಾದನೆಯಲ್ಲ. ಕರ್ಮಮಾರ್ಗದ ಕಠೋರತೆ ಮತ್ತು ಭೀತಿಯನ್ನು ತಿಳಿಸುವ ಸಂದರ್ಭದಲ್ಲಿ ಸಂಸಾರ ನಿರಸನದ ಬಗ್ಗೆ ತನ್ನ ಸ್ವರಭಾರ (Emphasis)ವನ್ನು ಹೇರಿರುವ ನಷ್ಟೆ!

ವೀರಶೈವ ಭಕ್ತಿಯೋಗದಲ್ಲಿ ಮಾನವ ದೇಹಕ್ಕೂ, ಪ್ರಾಪಂಚಿಕ ಜೀವನಕ್ಕೂ ಅತ್ಯಂತ ಪ್ರಾಶಸ್ತ್ಯ ಕೊಡಲ್ಪಟ್ಟಿದೆ. ಸಂಸಾರ ನಶ್ವರವೆಂದು ಅದನ್ನು ತ್ಯಜಿಸಿ "ಓಡುವಾತ ಲೆಂಕನಲ್ಲ". ವೀರಶೈವ ದರ್ಶನದ ಪ್ರಕಾರ ಪ್ರತಿಯೊಬ್ಬನೂ ಲಿಂಗದಲ್ಲೇ ಹುಟ್ಟಿ ಲಿಂಗದಲ್ಲೇ ಬೆಳೆದು ಕೊನೆಗೆ ಲಿಂಗದಲ್ಲಿ ಲೀನವಾಗುವನು. ಅಂಗಲಿಂಗಗಳು ಸಾಮರಸ್ಯಹೊಂದುವುದೇ ಅದರ ಗುರಿ. ಈ ಗುರಿಯನ್ನು ಸಾಧಿಸಬೇಕಾದರೆ, ಏಕೈಕವಾಗಿದ್ದ ಮೂಲವಸ್ತುವನ್ನು ಲಿಂಗ ಮತ್ತು ಅಂಗಗಳಾಗಿ ವಿಭಾಗಮಾಡಿದ ಪ್ರವೃತ್ತಿಮಾರ್ಗವನ್ನು ನಿರೋಧಿಸಿ, ನಿವೃತ್ತಿ ಮಾರ್ಗವನ್ನು ಹಿಡಿಯಬೇಕು. ಈ ಸಾಧನೆಗೆ ಮಾನವ ಶರೀರವೇ ಪ್ರಯೋಗಶಾಲೆ. ಪರಮಾತ್ಮನೆಂಬ ಭೂಮಿಯಮೇಲೆ, ಐಹಿಕ ಜೀವನವೆಂಬ ಮರವು ಬೆಳೆಯುವುದು. ಆ ಮರದಲ್ಲಿ ಹುಟ್ಟಿದ ಜೀವಾತ್ಮನು, ಕಾಯಿ ಹೇಗೆ ವೃಕ್ಷದ ಬೇರುಗಳದ್ವಾರ ಭೂಮಿಯ ಸತ್ವವನ್ನು ಸ್ವೀಕರಿಸಿ ಪಕ್ವವಾಗಿ ಮರದಿಂದ ಬಿದ್ದು ಮತ್ತೆ ಭೂಮಿಯಲ್ಲಿ ಸೇರಿಹೋಗುವುದೋ ಹಾಗೆಯೇ ಜೀವಾತ್ಮನು ಐಹಿಕ ಜನ್ಮದ ಅನುಭವದಿಂದ ನಿಜತ್ವದ ಅರುಹನ್ನು ಪಡೆದು ಪರಿಪಕ್ವವಾಗಿ ಶಿವನನ್ನು ಸೇರುವನು. ಕಾರಣ ಪ್ರಕೃತಿಯ ರೀತಿಯಾದ ಸಂಸಾರವು ಬಂಧನವಲ್ಲ. ಜೀವಕ್ಕೆ ಅನುಭವದಮೂಲಕ ಆಧ್ಯಾತ್ಮಿಕ ಶಕ್ತಿಯನ್ನಿತ್ತು ಪರಮಾತ್ಮನನ್ನು ಸೇರುವಂತೆ ಮಾಡುವ ಸಾಧನ ಪ್ರಕ್ರಿಯೆಯು.

"ಶಿವ ನಿಮ್ಮಿಂ ಪುಟ್ಟತೀಮಾಯೆ" ಎಂದು ಹೇಳಿದ ಹರಿಹರನು "ಮೊದಲಿಂದಂ ಕೂರ್ಮರೋಮಂ" ಎಂಬ ಪದ್ಯದಲ್ಲಿ, ಮೊಲದಕೋಡು, ಆಕಾಶದ ಹೂವು, ಆಮೆಯಕೂದಲು ಇವು ಮೂರೂ ಇಲ್ಲವೆಂಬುದು ದಿಟ, ಇಲ್ಲದಿರುವ ಇವುಗಳನ್ನು ಕಲ್ಪನೆಯಲ್ಲಿ ತಂದು ಸುಮ್ಮನೆ ನಾಮನಿರ್ದೇಶ ಮಾಡಲು ಹೆಣಗಿರುವುದೇ ಹೊರತು, ಅವುಗಳ ಅಸ್ತಿತ್ವ ಮಾತ್ರ ಇಲ್ಲದುದೇ ಸತ್ಯ. ಹೀಗೆ, ತಾನೇ ಇಲ್ಲವಾದ ಮಾಯೆ, ಪ್ರಪಂಚದ ಹುಟ್ಟುವಿಕೆಗೆ ಕಾರಣವಾಗುವುದು ಹೇಗೆ ? ಮಿಥ್ಯಾಮಾಯೆ ಎಂಬುದು ಸಿದ್ಧವಾಗುವಲ್ಲಿ ಪ್ರಪಂಚವು ಅದರಿಂದ ಉಂಟಾಯಿತೆಂದು ಹೆಣಗಾಡುವುದು ವ್ಯರ್ಥವೆಂದು ಹೇಳಿ ಈ ಪ್ರಪಂಚವೇ ಶಿವನೆಂದು ಪ್ರತಿಪಾದಿಸುವ ಸಂದರ್ಭದಲ್ಲಿ ಕ್ಲಿಷ್ಟಪದಗಳಿಂದ ಕೂಡಿದ, ಗೂಢಾರ್ಥಮಯವಾದ ಈ ಕೆಳಗಿನ ವೃತ್ತವನ್ನು ಹಾಡಿರುವನು :—

ತೋಱುತ್ತಿರ್ಪೀ ಜಗಂ ತಾನಜೀವಿನ ಮುಖದೊಳ್ ತೋಱದಿರ್ಪಂತೆ
ತೋರ್ಕು
ತೋಱಲ್ ಪೇಳಲ್ಕೆ ಕೇಳಲ್ಕಸದಳವೆನಿಪಾ ಬ್ರಹ್ಮತಾ ಬ್ರಹ್ಮವಾಗು-
ತ್ತಾಱುಂ ಬಣ್ಣಕ್ಕಮೇಳುಂ ತನುವಿನ ಪೊರೆಗೆಂಟುಂ ಶರೀರಕ್ಕೆ ಮಿಕ್ಕಂ
ಮೀಱರ್ಪಂತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ"

ಮುಂದಿಗೆಯಂತಿರುವ ಈ ಪದ್ಯದ ಅರ್ಥದಬಗ್ಗೆ ಭಿನ್ನಾಭಿಪ್ರಾಯಗಳಿರುವುದು ಸಹಜ. ಈ ಕೆಳಗೆ ವಿವರಿಸಿದ ಪ್ರತಿಪದಾರ್ಥವು ಸಮಂಜಸವೆಂದು ತೋರುತ್ತದೆ.

ತೋಱುತ್ತಿರ್ಪ = ಇಂದ್ರಿಯಗಳಿಗೆ ನಾಮರೂಪಾದಿಗಳಿಂದ ಪ್ರತ್ಯಕ್ಷವಾಗಿ ಕಂಡುಬರುತ್ತಿರುವ; ಈ ಜಗಂ= ಪಂಚಭೂತಾತ್ಮಕವಾದ ಈ ಜಗತ್ತು; ತೋಱದಿರ್ಪಂತೆ= ರಾತ್ರಿ ಹಗಲುಗಳು, ಸೂರ್ಯಚಂದ್ರಾದಿಗಳು, ಪಂಚಭೂತಗಳು ಇವು ಯಾವುವೂ ವಿಕಾಸವಾಗದೇ ಇದ್ದ ಕಾಲದಲ್ಲಿ; ಅಜೀವಿನ ಮುಖದೊಳ್=ಶಿವನೊಡನೆ ಅವಿನಾಭಾವ ಸಂಬಂಧದಿಂದ ಇರುವ ಪ್ರಜ್ಞಾರೂಪದಿಂದ ತೋರುವುದು. (ಬೀಜದಿಂದ ವ್ಯಕ್ತವಾಗುವ ವೃಕ್ಷವು ಉತ್ಪತ್ತಿಗೆ ಮೊದಲು ಅವ್ಯಕ್ತ ರೂಪವಾಗಿ ನೆಲೆಸಿರುವಂತೆ, ಶಿವನ ಸತ್ಯವಾದ ಮಾಯೆಯಿಂದ ವಿಕಾಸವಾಗಿರುವ ಈ ವಿಶ್ವವು, ಹಾಗೆ ವಿಕಾಸವಾಗುವ ಮುಂಚೆ ಆ ಮಾಯೆಯಲ್ಲಿಯೇ ಅಂಕುರರೂಪದಿಂದ ನೆಲೆಸಿದ್ದಿತು) ತಾಂ=ಹೀಗೆ ಪರಬ್ರಹ್ಮದ ನಿಜಶಕ್ತಿಯಲ್ಲಿ ಅಡಗಿದ್ದ ಜಗತ್ತು ತಾನು; ತೋಱಲ್= ಚಿಚ್ಛಕ್ತಿಯ ವಿಕಾಸದಿಂದ ಚರಾಚರ ಜಗದ್ರೂಪವಾಗಿ ಪ್ರಕಟವಾಗಲು; ಪೇಳಲ್ಕೆ= ಅದರ ನಿಜವಿರುಕೆಯನ್ನು ಬಣ್ಣಿಸಲಿಕ್ಕೆ; ಅತ್ಯಸದಳವೆನಿಪ= ಅತ್ಯಂತ ಅಸಾಧ್ಯವೆನಿಸುವ; ಆ ಬ್ರಹ್ಮವು= ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನ ಎಂಬ ಪಂಚ ಬ್ರಹ್ಮವು ತಾನಾಗಿದೆ. (ಪೃಥ್ವಿಯೇ ಮೊದಲಾದ ಪಂಚಭೂತಗಳು ಸದ್ಯೋಜಾತಾದಿ ಪಂಚ ಬ್ರಹ್ಮ ಸ್ವರೂಪಗಳೇ ಆಗಿವೆ.) ಆ ಬ್ರಹ್ಮವಾಗುತ್ತ= ಪ್ರಕಟವಾದ ವಿಶ್ವವೆಲ್ಲ ಬ್ರಹ್ಮದ ಸಾಕಾರ ಸ್ವರೂಪವೇ ಆಗಿರುತ್ತ; ಆಱುಂ, ಏೞುಂ ಬಣ್ಣಕ್ಕಂ= ಶಿವನ ಅಷ್ಟತನುಗಳಲ್ಲಿ ಆರನೆಯದಾದ ಸೂರ್ಯನ, ಏಳನೆಯದಾದ ಚಂದ್ರನ ಸ್ವರೂಪಕ್ಕೂ, ತನುವಿನ ಪೊರೆಗೆ=

ಶರೀರದ ರಕ್ಷಣೆಗೆ ಎಂಟು= ಶಿವನ ಅಷ್ಟ ಶರೀರಗಳಲ್ಲಿ ಎಂಟನೆಯದಾದ ಶರೀರಕ್ಕೆ= ಆತ್ಮಕ್ಕೆ ಸಹ; (ಇಂತೀ ಭೂಮ್ಯಾದಿ ಆತ್ಮ ಪರ್ಯಂತವಾದ ಅಷ್ಟಮೂರ್ತಿ ಶರೀರಕ್ಕಿಂತಲೂ) ಮಿಕ್ಕುಂ= ಅತಿಶಯವೆನಿಸಿ; ಎಂದರೆ ಶಿವನ ಸ್ಥೂಲವಾದ ವಿಶ್ವರೂಪಕ್ಕಿಂತಲೂ ಸೂಕ್ಷ್ಮವೆನಿಸಿ; ಮೀಱಿರ್ಪಂತೆ= ನಿಷ್ಕಲ ಬ್ರಹ್ಮರೂಪದಿಂದ ಯೋಗಿಗಳ ಧ್ಯಾನಕ್ಕೂ ಮೀರಿರುವಂತೆ, =ಇತ್ತು=ಶಿವ ತತ್ತ್ವದ ಜ್ಞಾನವನ್ನು ಅನುಗ್ರಹಿಸಿ ರಕ್ಷಿಸುವುದು.

ಪಂಡಿತಾರಾಧ್ಯನು ಸಹಾ ತನ್ನ ಶಿವತತ್ತ್ವಸಾರದಲ್ಲಿ ಇಂಥಾ ಪ್ರಾರ್ಥನೆಯನ್ನೇ ಶಿವನಲ್ಲಿ ಮಾಡಿಕೊಂಡಿರುವನು. ಎಲ್ಲದೂ ತಾನಾದ ಶಿವನಿಗೆ ತನ್ನ ಹೊರತಾಗಿ ಮತ್ತೊಂದು ವಸ್ತುವಿಲ್ಲದರಿಂದ, ತನ್ನ ಜಗತ್ ಸೃಷ್ಟಿಯ ಕಾರ್ಯಕ್ಕೆ ತನ್ನಲ್ಲಿರುವ ನಿಜಶಕ್ತಿಯೊಂದೇ ಉಪಾದಾನ ಕಾರಣನಾಗಲು ಸಮರ್ಥವಾಗಿದೆ. ಆ ಶಕ್ತಿಯಿಂದಲೇ ಪ್ರಪಂಚವನ್ನು ವಿಕಾಸಪಡಿಸಿದನು. ಆ ಶಕ್ತಿಯೇ ಶಿವನಲ್ಲಿ ಪುಷ್ಪದ ಪರಿಮಳದಂತೆ, ಜಲದಶೈತ್ಯದಂತೆ ಸ್ವಾಭಾವಿಕವಾಗಿದೆ. ಮಾಯೆಯೆನಿಸಿ (ಮಂ= ಶಿವನನ್ನು; ಆಯತಿ= ಸ್ವಭಾವದಿಂದ ಹೊಂದಿಕೊಂಡಿರುವುದೇ ಮಾಯೆ) ಜಗತ್ಕಾರ್ಯಕ್ಕೆ ಉಪಾದಾನಕಾರಣವಾಯಿತು. ಮಣ್ಣೇ ಮಡಕೆಯಾದಂತೆ, ಹೊನ್ನೇ ಒಡವೆಯಾದಂತೆ ಶಿವನ ಸತ್ಯವಾದ ಮಾಯೆ ಜಗತ್ತಾಗಿ ಪರಿಣಮಿಸಿತು. ಕಾರಣ ಸತ್ಯವಾದರೆ, ಕಾರ್ಯವೂ ಸತ್ಯವೆಂಬ ನಿಯಮದಂತೆ ಜಗತ್ತಿಗೆ ಉಪಾದಾನ ಕಾರಣವಾಗಿರುವ ಮಾಯೆ ಸತ್ಯವು. ಇದರ ಕಾರ್ಯವಾದ ಸೃಷ್ಟಿಯು ಸಹಾ ಸತ್ಯವೇ ಆಗಿದೆ. ಜಗತ್ತು ಸತ್ಯವೆಂಬ ಈ ಸಿದ್ಧಾಂತವನ್ನು ಹರಿಹರನು "ಜಗದೊಳಗೆಲ್ಲಂ ನೋಡುವೊಡೆ ಸತ್ಯವಂತೀವಿ ತುಳುಕುತಿರ್ಪುದೈ" ಮುಂತಾದ ಪದ್ಯಗಳಲ್ಲಿ ನಿರೂಪಿಸಿರುವನು.

ಹೀಗೆ ಹರಿಹರನು ಈ ಶತಕದಲ್ಲಿ ನಿರೂಪಿಸಿದ ದರ್ಶನ ಕೇವಲ ದ್ವೈತವೂ ಅಲ್ಲ; ಕೇವಲ ಅದ್ವೈತವೂ ಅಲ್ಲ; ಅದು ಶಕ್ತಿ ವಿಶಿಷ್ಟಾದ್ವೈತ; ಮೃಡದರ್ಶನ; ವೀರಶೈವ ದರ್ಶನ. ಈ ದರ್ಶನವನ್ನು ಈ ಕೃತಿಯ ಸಂಪಾದಕರು ಆಯಾ ಸಂದರ್ಭಗಳಲ್ಲಿ ಉಚಿತವಾಗಿ ಎತ್ತಿತೋರಿಸುವುದು ಅವರು ಕವಿ ಹೃದಯವನ್ನು ಸರಿಯಾಗಿ ಗ್ರಹಿಸಿದ್ದಾರೆ ಎಂಬುದಕ್ಕೆ ಸಾಕ್ಷಿಯಾಗಿದೆ.

# ಅರ್ಪಣೆ

ಪೂಜ್ಯರಾದ ಕಳಾಪ್ರಪೂರ್ಣ

ಸರ್ವದರ್ಶನತೀರ್ಥ

ಆಸ್ಥಾನ ವಿದ್ವಾನ್ ಶ್ರೀ ವೈ. ನಾಗೇಶಶಾಸ್ತ್ರೀ

ಅವರಿಗೆ

ಭಕ್ತಿಪೂರ್ವಕವಾಗಿ ಅರ್ಪಿಸಿದ್ದೇನೆ

— ಕೋ. ಚೆನ್ನಬಸಪ್ಪ

# ಪರಿವಿಡಿ

# ಪಥಿಕನ ಕಥೆ

ಧಾರವಾಡದಲ್ಲಿ ೧೯೫೭ರಲ್ಲಿ ಸೇರಿದ್ದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪೀಠದಿಂದ ಮಹಾಕವಿ ಕುವೆಂಪು: "ಹಳೆಯದರ ಹಳೆಯ ಪರಿಚಯವನ್ನೂ ಹೊಸತು ಮಾಡಿಕೊಡುವ ಮತ್ತೊಂದು ಮಹತ್ತರ ಕಾರ್ಯ ಸಾಹಿತ್ಯ ಮೀಮಾಂಸಕನ ಮುಂದೆ ಗುರುತರವಾಗಿದೆ. ನಮ್ಮ ಕಾವ್ಯ ಪುರಾಣಗಳನ್ನು ಜನತೆ ಇದುವರೆಗೆ, ಒಂದು ಶ್ರದ್ಧೆಯಿಂದ, ಒಂದು ಭಕ್ತಿಯಿಂದ, ಒಂದು ಪ್ರೀತಿಯಿಂದ ಓದುತ್ತಾ ಆಸ್ವಾದಿಸುತ್ತಾ ಬಂದಿದೆ .... ಆದರೆ ಈಗ ವೈಜ್ಞಾನಿಕವಾದ ಒಂದು ವಿಚಾರದೃಷ್ಟಿ ಉದ್ದೀಪನವಾಗುತ್ತಿದೆ .... ದಿನದಿನವೂ ಬೆಳಗುತ್ತಿರುವ ವೈಜ್ಞಾನಿಕ ದೃಷ್ಟಿಯವಿಚಾರಕಾಂತಿಯಮುಂದೆ (ಹಿಂದೆ ಇಟ್ಟುಕೊಂಡಿದ್ದ ಶ್ರದ್ಧೆ, ಭಕ್ತಿ, ಗೌರವ, ಪ್ರೀತಿಗಳಿಗೆ) ಉಳಿಗತಿಯಿಲ್ಲವೆಂದು ತೋರುತ್ತದೆ .... (ಆದಕಾರಣ) ಅವುಗಳಲ್ಲಿ (ನಮ್ಮ ಪೂರ್ವದ ಕಾವ್ಯ ಪುರಾಣಗಳಲ್ಲಿ) ಇರುವ ನಿತ್ಯಾಂಶವನ್ನು ಸಹೃದಯರು ಗ್ರಹಿಸುವಂತೆ ಮಾಡಲು ಸಾಧ್ಯವೆ? .... ಈ ಮಹಾಕಾವ್ಯ ಪುರಾಣಗಳ ಕಥಾಪ್ರತಿಮೆಗಳಲ್ಲಿ ಕಾಲ ದೇಶ ಮತಾದಿಬದ್ಧವಾದ ನಶ್ವರಾಂಶವನ್ನು ಮೀರಿ ಸಾರ್ವದೇಶಿಕ ಮತ್ತು ಸಾರ್ವಕಾಲಿಕವಾದ ನಿತ್ಯಸತ್ಯಗಳಿರುವುದನ್ನು ಸಹೃದಯ ಹೃದಯ ವೇದ್ಯವನ್ನಾಗಿ ಮಾಡಲೋಸುಗ .... ಅವುಗಳನ್ನು ಪರಿವರ್ತಿಸಬಹುದೇ?" ಎಂದು ಅಪ್ಪಣೆ ಕೊಡಿಸಿದರು.

ಆ ಸಮ್ಮೇಳನ ಜರುಗಿದಾಗಲೇ ಹರಿಹರ ಮಹಾಕವಿಯನ್ನು ಕುರಿತ ಒಂದು ಕೃತಿಯೂ ಹೊರಬಂದಿತ್ತು. ಆ ಕೃತಿ ಶ್ರೀ ಕುವೆಂಪುಅವರು ಎತ್ತಿದ ಪ್ರಶ್ನೆಗೆ ಸ್ವಲ್ಪಮಟ್ಟಿಗೆ ಸಮಾಧಾನವನ್ನು ಕೊಡಲು ಪ್ರಯತ್ನಿಸುವಂತಿತ್ತು. ಆದರೆ ಅದನ್ನು ಓದಿದ ನನಗೆ ಪೂರ್ಣ ತೃಪ್ತಿಯಾಗಲಿಲ್ಲ. ಅಲ್ಲಿಂದ ಬಂದ ಮೇಲೆ, ಇದೇ ವಿಚಾರವನ್ನು ಗೆಳೆಯರೊಬ್ಬರೊಡನೆ ಮಾತನಾಡುವಾಗ ಹರಿಹರನ ರಕ್ಷಾಶತಕವನ್ನು ಹೊಸರೀತಿಯಲ್ಲಿ ಪರಿಚಯ ಮಾಡಿಕೊಡುವ ಆವಶ್ಯಕತೆಯನ್ನು ಸೂಚಿಸಿದರು. ಆ ಸೂಚನೆಯನ್ನು ಅಂಗೀಕರಿಸಿ, ಈ ಕೃತಿ ರಚನೆಯಲ್ಲಿ ತೊಡಗಿದೆ. ಅದರ ಫಲವೇ ಇದು.

— ೧ —

"ಒಂದು ಕಾಡಿನಲ್ಲಿ ಹೆಣ್ಣು ಸಿಂಹವಿತ್ತು. ಅದು ತುಂಬ ಗಬ್ಬವಾಗಿತ್ತು. ಒಂದು ದಿನ ಆ ಕಾಡಿಗೆ ಕುರಿಗಳ ಹಿಂಡೊಂದು ಬಂತು. ಆ ಸಿಂಹ, ಕುರಿಯ ಹಿಂಡಿನಮೇಲೆ ಹಾರಿ ಒಂದು ಕುರಿಯನ್ನು ಹಿಡಿದು ಹೊತ್ತೋಡಿತು. ಅದು ಕುರಿಯ ಹಿಂಡಿನಮೇಲೆ ಹಾರಿದ ರಭಸಕ್ಕೆ ಗರ್ಭದಲ್ಲಿದ್ದ ಶಿಶುಸಿಂಹ ಪತನವಾಯಿತು. ಸಿಂಹ, ತನ್ನ ಆಹಾರವನ್ನು ಹೊತ್ತೊಯ್ಯುವಾಗ, ತನ್ನ ಮರಿಯನ್ನು ಅಲ್ಲೇ ಬಿಟ್ಟುಹೋಯಿತು. ಆ ಸಿಂಹದಮರಿ, ಕುರಿಯ ಹಿಂಡಿನಲ್ಲಿ, ತಾನೂ ಒಂದು ಕುರಿಯಂತೆ ಬೆಳೆಯಿತು. ಅದೂ ಕುರಿಯಂತೆ ಹುಲ್ಲು ತಿಂದು, ನೀರು ಕುಡಿದು, ಕುರಿಯಲ್ಲಿ ಕುರಿಯಾಗಿ 'ಅಂಬೇ' ಎಂದು ಅರಚುತ್ತ ಅಲೆಯುತ್ತಿತ್ತು.

"ಒಂದು ದಿನ ಆ ಕುರಿಯ ಹಿಂಡನ್ನು ಬೆನ್ನಟ್ಟಿ ಇನ್ನೊಂದು ಸಿಂಹವು ಬಂತು. ಕುರಿಗಳೊಡನೆ, ಅವುಗಳೊಡನೆ ಇದ್ದ ಸಿಂಹವೂ ಓಡತೊಡಗಿತು. ಬೇಟೆಯಾಡಲು ಬಂದಿದ್ದ ಸಿಂಹಕ್ಕೆ, ಆ 'ಕುರಿಸಿಂಹ' ವನ್ನು ನೋಡಿ ಕನಿಕರವಾಯಿತು. ಕೂಗಿ ಕರೆದು, ಆ 'ಕುರಿಸಿಂಹ' ವನ್ನು ನಿಲ್ಲಿಸಿತು. ಆ 'ಕುರಿಸಿಂಹ' 'ನಿಜಸಿಂಹ'ದ ಗರ್ಜನೆಯನ್ನು ಕೇಳಿ ಗಡಗಡ ನಡುಗತೊಡಗಿತು. ಆಗ ನಿಜಸಿಂಹ : "ಎಲೈ ಮೃಗರಾಜ, ನೀನೂ ಈ ರೀತಿ ಕುರಿಯಂತೆ ಏಕೆ ನಡುಗಹತ್ತಿದ್ದೀಯೆ ? ನೀನೂ ನನ್ನಂತೆ ಮೃಗರಾಜನೇ !" ಎಂದು ಹೇಳಿತು. ಕುರಿಸಿಂಹನಿಗೆ ವಿಶ್ವಾಸ ಹುಟ್ಟಲಿಲ್ಲ. ಆಗ ನಿಜಸಿಂಹನು, ಆ ಕುರಿಸಿಂಹನನ್ನು ಹತ್ತಿರದ ಹಳ್ಳಕ್ಕೆ ಕರೆದುಕೊಂಡು ಹೋಗಿ, ಹರಿವ ಹಳ್ಳದ ನೀರಿನಲ್ಲಿ ಇಬ್ಬರ ಪ್ರತಿಬಿಂಬಗಳನ್ನು ತೋರಿಸಿತು. ಆಗ ಕುರಿಸಿಂಹಕ್ಕೆ ತನ್ನ ಸ್ವಸ್ವರೂಪದರ್ಶನವಾಗಿ, ತಾನೂ ಸಿಂಹನೆಂದು ನಂಬಿ, ಕುರಿತನವನ್ನು ಬಿಟ್ಟು ಸಿಂಹನಾಯಿತು".

ಹಾಗೆಯೇ ಈ ಜೀವಾತ್ಮನೂ, ಪರಮಾತ್ಮನಂತೆಯೇ ಇದೆ. ಆದರೆ ಈ ಜೀವಾತ್ಮನಿಗೆ ಆ ಅರಿವು ಇಲ್ಲದಂತಾಗಿದೆ. ಪ್ರಕೃತಿಯಲ್ಲಿ ಬಿದ್ದು, ಗುಣದೋಷಗಳಿಂದ ಬಂಧಿತನಾಗಿ, ತನ್ನ ನಿಜಸ್ವರೂಪವನ್ನು ಮರೆತು ಬಿಟ್ಟಿದೆ.

ಈ ಜೀವಾತ್ಮನಿಗೂ, ಆ ಕುರಿಸಿಂಹನಿಗೆ ಆದಂತೆ, ಸ್ವಸ್ವರೂಪದರ್ಶನ ವಾಗಬೇಕಾಗಿದೆ.

— ೨ —

“ಧನಿಕನೊಬ್ಬನು ಒಂದುದಿನ ಪ್ರಯಾಣಮಾಡುತ್ತಿದ್ದ. ದಾರಿಯಲ್ಲಿ ಒಂದು ಘೋರಾರಣ್ಯವನ್ನು ದಾಟಿ ಹೋಗಬೇಕಾಗಿತ್ತು. ಪಯಣಿಗ ಒಬ್ಬನೇ ಆ ಅರಣ್ಯವನ್ನು ಪ್ರವೇಶಿಸಿದ. ಆಗ, ಏಕಾಏಕಿ ಮೂವರು ಕಳ್ಳರು ಅವನ ಮೈಮೇಲೆ ಬಿದ್ದು ದಾಳಿಮಾಡಿ ಅವನಲ್ಲಿ ಇದ್ದುದನ್ನೆಲ್ಲ ದೋಚಿಕೊಂಡು ಬಿಟ್ಟರು. ಆ ಮೂವರು ಕಳ್ಳರಲ್ಲಿ ಮೊದಲನೆಯವನು : “ಈ ಪಯಣಿಗನನ್ನು ಕೊಂದುಹಾಕಿ ಬಿಡೋಣ” ಎಂದ. ಅದಕ್ಕೆ ಎರಡನೆಯಕಳ್ಳ : ಕೊಲ್ಲುವುದು ಬೇಡ. ಇವನಲ್ಲಿದ್ದುದನ್ನು ದೋಚಿಕೊಂಡು, ಕೈಕಾಲು ಕಟ್ಟಿ ಉರುಳುಬಿಟ್ಟು, ಹೋಗೋಣ’’ ಎಂದ. ಹಾಗೆಯೇ ಅವನನ್ನು ದೋಚಿಕೊಂಡು, ಕೈಕಾಲು ಕಟ್ಟಿ ಹೊರಟುಹೋದರು. ಆ ಇಬ್ಬರು ಕಳ್ಳರನ್ನು ಮುಂದೆಬಿಟ್ಟು, ಮೂರನೆಯಕಳ್ಳ : “ಪಾಪ, ಅವನನ್ನು ಹಾಗೆ ಕಟ್ಟಿಹಾಕಿ ಬಂದರೆ, ನಮಗೇನು ಲಾಭ.” ಎಂದು ವಾಪಾಸು ಹೋದ. ಪಯಣಿಗನ ಕಟ್ಟುಗಳನ್ನು ಬಿಚ್ಚಿದ. “ಬಾ, ಇಲ್ಲಿ, ನಿನಗೆ ದಾರಿತೋರಿಸುತ್ತೇನೆ” ಎಂದು ಅಡವಿಯ ಅಂಚಿನವರೆಗೂ ಕರೆದು ತಂದುಬಿಟ್ಟ. ಆಗ ಆ ಪಯಣಿಗ :” ಅಯ್ಯಾ, ನೀನು ತುಂಬ ಉಪಕಾರಮಾಡಿದೆ. ದಯೆವಿಟ್ಟು ನನ್ನೊಡನೆ ಪಟ್ಟಣಕ್ಕೆ ಬಾ. ನಿನ್ನ ಉಪಕಾರವನ್ನು ತೀರಿಸುವೆನು” ಎಂದ. ಅದಕ್ಕೆ ಆ ಮೂರನೆಯ ಕಳ್ಳ : “ಓ ! ನಾನು ಬರಲಾರೆ, ಬಂದರೆ ಪೋಲೀಸರು ಹಿಡಿಯುತ್ತಾರೆ’’ ಎಂದ. ಅರಣ್ಯದ ಮಧ್ಯದಲ್ಲಿ ಕಣ್ಮರೆಯಾದ.

ಜೀವಾತ್ಮನನ್ನು ಪಯಣಿಗನಿಗೆ ಹೋಲಿಸುವುದು, ಆಧ್ಯಾತ್ಮ ವಿದ್ಯೆಯಲ್ಲಿ ಎಲ್ಲರಿಗೂ ಗೊತ್ತಿರುವ ಮಾತು. ಈ ದೃಷ್ಟಾಂತ ಕಥೆಯಲ್ಲಿ ಬರುವ ಪಯಣಿಗನೇ ಜೀವಾತ್ಮ. ಆ ಮೂವರು ಕಳ್ಳರೇ ತ್ರಿಗುಣಗಳು : ತಮಸ್ಸು, ರಜಸ್ಸು, ಸತ್ವ. ಈ ಮೂವರೂ ಜೀವಾತ್ಮನ ಜ್ಞಾನವೆಂಬ ಸಂಪತ್ತನ್ನು ಸೂರೆಮಾಡಿ, ದಾಳಿಯಿಡುತ್ತವೆ. ತಮೋಗುಣ ಜೀವಾತ್ಮನನ್ನು ಕೊಂದೇನು ಎನ್ನುತ್ತದೆ. ರಜೋಗುಣ, ಎರಡನೆಯ ಕಳ್ಳನಂತೆ, ಜೀವಾತ್ಮನನ್ನು

ಕರ್ಮಕ್ಕೆ ಕಟ್ಟಿಹಾಕುತ್ತೇನೆ - ಎನ್ನುತ್ತದೆ. ಸತ್ವಗುಣ, ಮೂರನೆಯ ಕಳ್ಳ ನಂತೆ, ನಮ್ಮ ಬಂಧನವನ್ನು ಕಳಚುತ್ತದೆ. ಆದರೆ, ಅವನೂ ದೇವರ ಹತ್ತಿ ರ ಕರೆದೊಯ್ಯಲಾರ. ದೂರದಿಂದಲೇ ಆ ಕಳ್ಳನಂತೆ, ಊರಿಗೆ ದಾರಿತೋ ರಿಸಿ ಯಃಫಲಾಯನ ಮಾಡುತ್ತಾನೆ. ಈ ಮೂವರು ಕಳ್ಳರಿಂದಲೂ ಪಾ ರಾಗಿ ಹೋದಾಗ ದೇವನಗರಿ ಸಿಗುತ್ತದೆ. ಅಲ್ಲಿ ಅದರೊಡೆಯ - ದೊರೆಯ ದರ್ಶನವಾಗುತ್ತದೆ.

— ೩ —

ಹರಿಹರ ಮಹಾಕವಿ ಈ ರಕ್ಷಾಶತಕದಲ್ಲಿ ಜೀವಾತ್ಮದ ಪ್ರಯಾಣದ ಕಥೆಯನ್ನೇ ಹೇಳಿದ್ದಾನೆ. ಆ ಗರ್ಭಿಣಿಯಾದ ಹೆಣ್ಣು ಸಿಂಹದ ಗರ್ಭದಿಂದ ಜಾರಿದ ಶಿಶುಸಿಂಹದಂತೆ, ಪುರುಷನೊಡನೆ ಇದ್ದು ಸ್ವಯಂಭುವಾಗಿದ್ದ ಪ್ರಕೃತಿ, ಪಂಭುವಾಗಿ ಪುರುಷನಿಂದಃ ಪ್ರತ್ಯೇಕಗೊಂಡು, ಭೂಮಿಯಲ್ಲಿ ಜನ್ಮ ತಾಳುತ್ತದೆ. ಈ ಪ್ರಕೃತಿಯ ಸಹವಾಸದಲ್ಲಿ ತನ್ನ ಸ್ವಸ್ವರೂಪವನ್ನು ಮರೆತು "ಕುರಿಸಿಂಹ" ವಾಗುತ್ತದೆ. ಆ ಕುರಿಸಿಂಹನಿಗೆ ಸ್ವಸ್ವರೂಪ ದರ್ಶನ ಕೊಡು ವ "ನಿಜಸಿಂಹ" ನಂಥ ಒಬ್ಬ ಗುರುಬೇಕು. ಗುರುದೊರೆತ ಎಂದರೆ, ಮುಕ್ತಿ ಅಂಗೈಯೊಳಗಿನ ನೆಲ್ಲಿಯಂತೆ!

ಆದರೆ, ಗರ್ಭದಿಂದ ಜಾರಿದ "ಶಿಶುಸಿಂಹ" "ಕುರಿಸಿಂಹ" ನಾಗಿ ಬೆಳೆದು "ನಿಜಸಿಂಹನ" ಗುರುತ್ವ ಸಿಕ್ಕುವವರೆಗೆ ಅನೇಕಾನೇಕ ಅವಸ್ಥೆಗಳ ನ್ನು ದಾಟಿ ಬರಬೇಕು. ಜೀವಾತ್ಮ ಪ್ರಕೃತಿಯಾಗಿ ಬಿದ್ದೊಡನೆಯೇ ಆರು ಭಾವಗಳನ್ನು - ಜನನ, ಬಾಲ್ಯ, ಯೌವನ, ಮುಪ್ಪು, ರೋಗ, ಮರಣ ಎಂಬ ಷಡ್ಭಾವಗಳನ್ನು - ಹೊಂದಲೇಬೇಕು. ಜನನಿ ಗರ್ಭಾಂಡದಿಂದ ಬರುವ ಅತಿವಿಷಮತರ ಕ್ಲೇಶವನ್ನು ಈ ಶತಕದ ೩ನೆಯ ವೃತ್ತದಲ್ಲೂ, ಬಾ ಲ್ಯದಲ್ಲಿ ಮಾಡುವ, ಮಾಡಬಾರದ ಕೃತ್ಯಗಳ ಬಾಲ್ಯಚೇಷ್ಟೆಯನ್ನು ೪ನೆಯ ವೃತ್ತದಲ್ಲೂ, ಯೌವನದಿಂದ ಉಂಟಾದ ಮತಿವಿಕಲತೆಯನ್ನು ೫ನೆಯ ವೃತ್ತ ದಲ್ಲೂ ಕವಿ ವರ್ಣಿಸಿದ್ದಾನೆ. ಯೌವನದಲ್ಲಿ ಕಾಲಿಟ್ಟಮೇಲೆ, ಮುಖಕ್ಕೆ ಮೀಸೆ ಬರುವಂತೆ ಅನಿವಾರ್ಯವಾಗಿಯೂ ಕಾಮ, ಕ್ರೋಧ, ಲೋಭ

ಮೋಹ, ಮದ, ಮತ್ಸರ ಎಂಬ ಆರು ಶತ್ರುಗಳು ಜೀವಾತ್ಮನಮೇಲೆ ಮಾಡುವ ದಾಳಿಯನ್ನು ೬ ರಿಂದ ೧೧ನೆಯ ವೃತ್ತದಲ್ಲಿ ಕವಿ ವರ್ಣಿಸುತ್ತಾನೆ. ಈ ಜೀವಾತ್ಮ ಹೇಗೆ, ತನ್ನ ನೈಜ ನಿರ್ಮಲ ಶುದ್ಧ ಗುಣವನ್ನು ಮರೆಮಾಜಿಕೊಂಡು, ಮಲಕೂಪದಲ್ಲಿಯೇ ರಮಿಸುವ ಯಾತನೆಯನ್ನು, ಕವಿ ಮನೋಜ್ಞವಾಗಿ ಎತ್ತಿ ತೋರಿಸುತ್ತಾನೆ. ಈ ಆರು ಶತ್ರುಗಳ ದಾಳಿಯೇ ಅಲ್ಲದೆ, ಮನಸ್ಸೆಂಬ ಮರ್ಕಟನ ಚಂಚಲ ಸ್ವಭಾವವನ್ನೂ, ತನ್ನ ಯೋಗ್ಯತೆಗೆ ಮೀರಿದ ವಿಚಾರದಬಗ್ಗೆ ಮಂಗತನವನ್ನು ಪ್ರದರ್ಶಿಸುವ ಈ ಬುದ್ಧಿಯ ಅಡ್ಡಬುದ್ಧಿಯನ್ನೂ, ಅಹಂಕಾರದ ಕೋಟಲೆಯನ್ನೂ ೧೨ ರಿಂದ ೧೬ನೆಯ ವೃತ್ತವವರೆಗೆ ಕವಿ ವರ್ಣಿಸಿದ್ದಾನೆ.

— ೪ —

ಜನನ, ಬಾಲ್ಯಾವಸ್ಥೆಯನ್ನು ದಾಟಿದ ಜೀವ, ಯೌವನದಲ್ಲಿ ಅರಿಷಡ್ವರ್ಗಗಳಿಂದ ಬಂಧಿತನಾಗಿ, ಧನ, ಧಾನ್ಯ, ಭೂಷಣ, ಪುತ್ರಸಂತಾನ, ಕಾಂತೆಯರ ತನುಸುಖ - ಮುಂತಾದ ಅನಂತ ಕಾರ್ಪಣ್ಯಗಳಿಗೆ ಸಿಕ್ಕು ಒದ್ದಾಡಿ ಹೋಗುತ್ತದೆ. ಆಗ ಸಂಸಾರದ (೧೭-೧೮) ಗುದ್ದೆ ಕೊರಳಿಗೆ ಬೀಳುತ್ತದೆ. ಆ ಸಂಸಾರವನ್ನು ಪೊರೆಯುವ ಕಷ್ಟಪರಂಪರೆ, ಸತಿಸುತ ಮಾತೆಪಿತರನ್ನು ಸಲಹುವ ಭರದಲ್ಲಿ ಕೈಕೊಳ್ಳುವ ವ್ಯವಹಾರ (೧೯) ಪರಸೇವೆ, (೨೦) ದೈನ್ಯತೆ (೨೧) ತಾಪತ್ರಯ, (೨೨) - ಒಟ್ಟು ವಿವಾಹ ಮತ್ತು ಅದರಿಂದ ಉಂಟಾಗುವ ಅನಂತ ಸಂಸ್ಕಾರಗಳ ಕುಲುಮೆಯಲ್ಲಿ ಬೆಂದು, ಚಮ್ಮಟಿಗೆಯ ಏಟು ತಿಂದು ಪಡಬೇಕಾದ ಕಷ್ಟ ಪರಂಪರೆಯನ್ನು ೧೭ ರಿಂದ ೨೨ನೆಯ ವೃತ್ತದ ವರೆಗೆ, ಈ ಶತಕದಲ್ಲಿ ಕವಿ ಓದುಗರ ಮೈನವಿರೇಳುವಂತೆ, ವರ್ಣಿಸುತ್ತಾನೆ. ೨೩ ರಿಂದ ೩೬ನೆ ವೃತ್ತದ ವರೆಗೆ ಜೀವ ಯೌವನಾವಸ್ಥೆಯಲ್ಲಿ, ಗೃಹಸ್ಥಾಶ್ರಮದಲ್ಲಿ ಸಂಸಾರದ ಕಷ್ಟ ಕಾರ್ಪಣ್ಯದಿಂದ ಬೆಂದು, ಅನಿತ್ಯವಾದುದರ ಬೆನ್ನು ಹತ್ತಿ ಆಳವಾದ ಕೂಪಕ್ಕೆ ಎಳೆದೊಯ್ಯುವ ಈ ಮಾಯೆಯಿಂದ, ಕಾಮದಿಂದ ವಿಷಯವಾಸನೆಯಿಂದ, ಕಂಟಕಸ್ತೋಮದಿಂದ, ಜರ್ಜರಿತವಾದ ಜೀವಾತ್ಮದ ಮೊರೆಯನ್ನು ವರ್ಣಿಸುತ್ತಾನೆ.

ಆ ಮೇಲೆ ಜೀವಾತ್ಮದ ನಾಲ್ಕನೆಯ ಅವಸ್ಥೆ, ಮುಪ್ಪು (೩೮)

ಮುಪ್ಪಿನ ಮುಂದಿನ ಆವಸ್ಥೆ ರೋಗ (೩೯-೪೦) ಆ ಮೇಲೆ ಸಾವ (೪೧) ನ್ನು ಕುರಿತು ಹೇಳುತ್ತಾನೆ. ೪೨ನೆಯ ವೃತ್ತದಲ್ಲಿ, ೨ ರಿಂದ ೪೧ರ ವರೆಗೆ ಕ್ರಮಿಸಿದ ದಾರಿಯನ್ನು ಸಂಕ್ಷಿಪ್ತವಾಗಿ ಸಾರಾಂಶದೋಪಾದಿಯಲ್ಲಿ (Summing up) ಹೇಳಿ ಜೀವಾತ್ಮದ ಪಯಣದ ಕಥೆಯನ್ನು ಮುಂದುವರಿಸುವನು.

ಅಂತೂ ಜೀವಾತ್ಮನು ಜನನ, ಬಾಲ್ಯ, ಯೌವನ, ರೋಗ, ಮುಪ್ಪು, ಮರಣ ಎಂಬ ಷಡ್ಭಾವಗಳದ್ದು ಹೊಂದಲೇಬೇಕು. ಅವುಗಳ ಬೆನ್ನಹಿಂದೆಯೇ ಬರುವ ಆರಿಷಡ್ವರ್ಗ, ತ್ರಿಗುಣಗಳಿಂದ ಬಂಧಿತನಾಗಲೇಬೇಕು. ಆ ಮೂವರುಕಳ್ಳರ ಕೈಗೆ ಸಿಕ್ಕದೆ, ಯಾರೂ ಈ ಪ್ರಪಂಚವೆಂಬ ಘೋರಾರಣ್ಯವನ್ನು ದಾಟಿ ಹೋಗಲು ಸಾಧ್ಯವೇಯಿಲ್ಲ ! ಆದರೂ, ಈ ಜೀವಾತ್ಮ ಸುಮ್ಮನಿರುವುದಿಲ್ಲ. ಆ ಮರದಮೇಲೆ ಕೆಳಗಿನ ಕೊಂಬೆಯಲ್ಲಿ ಕುಳಿತ ಹಕ್ಕಿಯಂತೆ ಮೇಲಕ್ಕೂ ಕೆಳಕ್ಕೂ ಹಾರಾಡಿ ಪರದಾಡುತ್ತದೆ. ತಾನೂ ಮೇಲಿನ ಹಕ್ಕಿಯೊಡನೆ ಸೇರಬೇಕೆಂದು ಹಾರೈಸಿಯೇ ಹಾರೈಸುತ್ತದೆ. ಇಲ್ಲದಿದ್ದರೆ, ಅದಕ್ಕೆ ಏನಿದ್ದರೂ ನೆಮ್ಮದಿಯೇಯಿಲ್ಲ. ಒಂದಲ್ಲ ಒಂದುದಿನ ವೈರಾಗ್ಯ ಬಂದೇ ಬರುತ್ತದೆ. ಆ ವೈರಾಗ್ಯವನ್ನು ತೋರಿಸುವ ದೇವದೂತನೇ ಮರಣ ! ಹೀಗೆ ಆತ್ಮ ಪರಮಾತ್ಮನಿಗಾಗಿ ತಳಮಳಿಸುವ ಹೃದಯ ವೇದನೆಯನ್ನೇ ಹರಿಹರ ಮಹಾಕವಿ ೪೩ ರಿಂದ ೪೭ನೆಯ ವೃತ್ತದವರೆಗೆ ವರ್ಣಿಸಿದ್ದಾನೆ. ಹೀಗೆ ಹಾರೈಕೆ ಪ್ರಬಲವಾಗಿ, ಕಾತರ ಅಧಿಕವಾಗಿ, ವ್ಯಾಕುಲ ಉಲ್ಬಣಾವಸ್ಥೆಗೆ ಏರಿದಾಗ ಭಕ್ತಿ ಅಂಕುರಿಸುತ್ತದೆ ! ಆಗ ಜೀವಾತ್ಮನಿಗೆ ದಾರಿಸಿಕ್ಕುತ್ತದೆ.

— ೫ —

ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ - ಎಂಬ ಷಟ್‌ಸ್ಥಲಗಳನ್ನು ಆಶ್ರಯಿಸಿ, ಜೀವಾತ್ಮ ತನ್ನ ಸ್ವಸ್ವರೂಪದರ್ಶನ ಮಾಡಿಕೊಳ್ಳುತ್ತದೆ. ಜೀವಾತ್ಮ ಅನಿವಾರ್ಯವಾಗಿಯೂ : ಅಷ್ಟಾವರಣವೇ ಅಂಗವಾಗಿ, ಪಂಚಾಚಾರವೇ ಪ್ರಾಣವಾಗಿ, ಷಟ್‌ಸ್ಥಲಮಾರ್ಗದಲ್ಲಿ ನಡೆದರೆ ಲಿಂಗಾಂಗ ಸಾಮರಸ್ಯವು ಸಿದ್ಧಿಸುವುದು," ಎಂಬ ವೀರಶೈವಮತದ ನಂಬುಗೆಗೆ ಅನುಸಾರವಾಗಿ ಹರಿಹರಮಹಾಕವಿ, ೫೪ ರಿಂದ ೬೪ನೆಯ ವೃತ್ತದವರೆಗೆ

ಈ ಷಟ್‌ಸ್ಥಲ ಮಾರ್ಗವನ್ನು, ಬಹು ಮನೋಜ್ಞವಾಗಿ, ವೈಜ್ಞಾನಿಕವಾಗಿ ಬಣ್ಣಿಸಿದ್ದಾನೆ. ಜೀವಾತ್ಮ ಹಿಡಿಯಬೇಕಾದ ದಾರಿಯನ್ನು, ಆ ದಾರಿಯಲ್ಲಿ ನಡೆಯುವಾಗ ಒದಗುವ ಸ್ಥಿತಿಯನ್ನು ಕಣ್ಣಾರೆಕಂಡ ಸಾಕ್ಷಿಯಂತೆ ಕವಿ ಮೂಡಿಸಿದ್ದಾನೆ. ಸಾಧಕನನ್ನು ಕೈಹಿಡಿದುಕೊಂಡು, ಹೆಜ್ಜೆಹೆಜ್ಜೆ ಇಟ್ಟು ಮೆಟ್ಟಲುಮೆಟ್ಟಲು ಹತ್ತಿಸಿ ಕರೆದುಕೊಂಡು ಹೋಗುತ್ತಾನೆ. ಈ ಶತಕದ ರಚನೆಯಲ್ಲಿ ಈ ಕವಿ ಇಟ್ಟುಕೊಂಡ ದೃಷ್ಟಿ ನಿಜವಾಗಿಯೂ ಅದ್ಭುತವಾಗಿವೆ. ಇಂಥ ಭಕ್ತ ಮಹಾಕವಿಯ ಈ ಶತಕ ಎಂಟುನೂರು ವರ್ಷಗಳಿಂದಲೂ ಸಾಧಕಕ ಕೈ ಗಂಬವಾಗಿ, ಊರುಗೋಲಾಗಿ, ದಾರಿಯ ದೀಪವಾಗಿ ಬೆಳಗುತ್ತ ಬಂದಿದೆ. ಇನ್ನೂ ಸೂರ್ಯಚಂದ್ರರು ಇರುವವರೆಗೂ ಇದು ಹಾಗೆಯೇಬೆಳಗುತ್ತದೆ. ಅದರಲ್ಲಿ ಅನುಮಾನವೇನೂ ಇಲ್ಲ. ಕಣ್ಣಿದ್ದವರಿಗೆ ಅದರಿಂದ ಪ್ರಯೋಜನವೂ ಉಂಟು.

— ೬ —

ಈ ಶತಕದಲ್ಲಿ ಲೆಕ್ಕಕ್ಕೆ ೦೦೧ ವೃತ್ತಗಳಿವೆ ಅಚ್ಚಿನಲ್ಲಿ ೨೦ ಪುಟಗಳಿಗೂ ಮೀರದ ಕಾವ್ಯ ಆದರೆ, ಸ್ವಲ್ಪ ಕಣ್ಣುಬಿಟ್ಟು ನೋಡಿದರೆ ಇದರಲ್ಲಿ ಬ್ರಹ್ಮಾಂಡವೇ ಅಡಗಿದೆ! ಇದು ಭಕ್ತರ, ನಿಕ್ಷೇಪ! ಗುರಿತಪ್ಪದೆ ದಾರಿತೋರಿಸಿ, ಗುರಿಮುಟ್ಟಿಸುವ ಮಹಾಗುರು! ಇದು ಪ್ರಾಧಾನ್ಯವಾಗಿ ಭಕ್ತಿಕಾವ್ಯ. ಅದರಲ್ಲಿ ದರ್ಶನಾಂಶಕ್ಕೂ, ಕಾವ್ಯಾಂಶಕ್ಕೂ ಯಾವ ಕೊರತೆಯೂ ಇಲ್ಲ. ಇದರಲ್ಲಿ ಸಾಧಕರಿಗೆ ದರ್ಶನವೂ, ಕಾವ್ಯಾಭ್ಯಾಸಿಗಳಿಗೆ ಸಾಹಿತ್ಯವೂ, ಪಂಡಿತರಿಗೆ ರಸದೌತಣವೂ ಇದೆ! ಅದನ್ನು ಸವಿಯುವಂಥ ಭಾಗ್ಯ ಈ ಜನ್ಮದಲ್ಲಿ ನನ್ನದಾಗಿದೆ. ಅದಕ್ಕಿಂತ ಘನತರವಾದ ಲಾಭ ಇನ್ನು ಯಾವುದಿದೆ?

ಈ ಕೃತಿಯನ್ನು ರಚಿಸಲು ಕೈಯಿಟ್ಟಾಗ ಇದರ ಮಹತ್ವನನಗೆ ಹೊಳೆದಿರಲಿಲ್ಲ. ಇದರಲ್ಲಿ ದಿನದಿನವೂ ಕೃಷಿಮಾಡಿದಾಗ, ಕಲ್ಲಿಗೆ ಉಜ್ಜಿದ ಚಾಕು ತಾನೂ ಚೂಪಾಗಿ, ಕಲ್ಲನ್ನೂ ನಯಗೊಳಿಸುವಂತೆ, ನಾನೂ ನಯವಾಗಿದ್ದೇನೆ, ಕಾವ್ಯವೂ ಪ್ರಕಾಶಮಾನವಾಗಿದೆ. ಇಲ್ಲಿ ಈ ಕಾವ್ಯದ ಹೃದಯವನ್ನು ಪರಿಪೂರ್ಣವಾಗಿ ತೆರೆದಿಟ್ಟಿದ್ದೇನೆ ಎಂಬ ಅಹಂಕಾರ ನನಗಿಲ್ಲ. ಇಲ್ಲಿ ಕಂಡುಬರುವುದು, ನಾನು ಕಂಡುದಕ್ಕಿಂತ ಹೆಚ್ಚೇನೂ ಇಲ್ಲ ನಾನು ಕಂಡದ್ದು ಎಷ್ಟು ಅಲ್ಪ ಎಂಬುದಕ್ಕೆ ಸಾಕ್ಷಿಬೇಕೆಂದರೆ ಈ ಪುಸ್ತಕದ ಪುಟದ ಹಾಳೆಯನ್ನು ತಿರುವಿಹಾಕಿದರೆ ತಾನೇ ಗೊತ್ತಾಗುತ್ತದೆ.

ಈ ಕೃತಿರಚನೆಯನ್ನು ಯಾರಾದರೂ ಬಲ್ಲ ವಿದ್ವಾಂಸರು, ಘನಪಂಡಿತರು, ಮಹಾಲಾಕ್ಷಣಿಕರು ಮಾಡಿದ್ದರೆ ಹೆಚ್ಚು ಸಮರ್ಪಕವಾಗಿರುತ್ತಿತ್ತೊ ಏನೋ. ಆದರೆ ನನಗೆ ಪಾಂಡಿತ್ಯದಕೊರತೆ ಹೇರಳವಾಗಿರುವುದರಿಂದ ನನ್ನ ವ್ಯಾಖ್ಯಾನದಲ್ಲಿ ತಪ್ಪುಗಳಿರಬಹುದು ಅಂಥ ತಪ್ಪುಗಳಿದ್ದರೆ ಅವುಗಳನ್ನು ತಿದ್ದಿಕೊಳ್ಳುವ ಸೌಜನ್ಯಯೂವಾಗಲೂ ನನಗಿದೆ. ಅವುಗಳನ್ನು ಸಹೃದಯರು ತೋರಿಸಿಕೊಟ್ಟರೆ ಕೃತಜ್ಞನಾಗುತ್ತಾನೆ ಇದರ ರಚನೆಯಲ್ಲಿ ನನಗೆ ಅನಿವಾರ್ಯವಾಗಿ ಬಂದೊದಗಿದ ಸಮಸ್ಯೆಗಳಿಗೆ ಪರಮಪೂಜ್ಯರಾದ, ಸರ್ವದರ್ಶನ ತೀರ್ಥ, ಕಳಾಪ್ರಪೂರ್ಣ ಗುರು ಶ್ರೀ ವೈ. ನಾಗೇಶಶಾಸ್ತ್ರಿಗಳು ಸಮಾಧಾನವನ್ನು ಕೊಟ್ಟು ನನ್ನನ್ನು ಕೈಹಿಡಿದುನಡೆಸಿದ್ದಾರೆ. ಹಾಗೆಯೇ ಉಳಿದ ಮಿತ್ರರೂ ಸಹಾಯಮಾಡಿದ್ದಾರೆ. ಅವರಿಗೆಲ್ಲ ನನ್ನ ಅನಂತ ಕೃತಜ್ಞತೆಗಳು. ಹಾಗೆಯೇ ಇದಕ್ಕೆ ವಿದ್ವತ್ಪೂರ್ಣವಾದ ಮುನ್ನುಡಿಯನ್ನು ಬರೆದುಕೊಟ್ಟು ಉಪಕರಿಸಿದ ಶ್ರೀ ಟಿ. ಎಚ್. ಎಂ, ಸದಾಶಿವಯ್ಯನವರಿಗೆ ನಾವು ಅತ್ಯಂತ ಋಣಿಯಾಗಿದ್ದೇವೆ.

ಎಷ್ಟೇ ಎಚ್ಚರಿಕೆ ವಹಿಸಬೇಕೆಂದರೂ, ನನ್ನ ಶಕ್ತಿಗೂ, ಜಾಗ್ರತೆಗೂ ಮೀರಿ ಕೆಲವು ಅಚ್ಚಿನ ದೋಷಗಳು ನುಸುಳಿಕೊಂಡಿವೆ. ಕೆಲವುಬಾರಿ ನಾನು ಕರಡನ್ನು ತಿದ್ದಲು ಸಾಧ್ಯವಾಗಲಿಲ್ಲ. ಆಗ ಕೆಲವು ಅಸಾಧು ಪ್ರಯೋಗಗಳೂ, ಅಶುದ್ಧ ಪ್ರಯೋಗಗಳೂ ತುಂಬಿವೆ. ಅವುಗಳ ಒಂದು ಪಟ್ಟಿಯನ್ನು ಕೊನೆಗೆ ಕೊಟ್ಟಿದ್ದೇವೆ.

ಇಷ್ಟೆಲ್ಲ ಪರಿಮಿತ ಶಕ್ತಿಯಿಂದ ರಚಿಸಿದರೂ, ಎಷ್ಟೇದೋಷಗಳಿದ್ದರೂ ಈ ಕೃತಿರಚನೆಯಿಂದ ನನಗೆ ತೃಪ್ತಿಯುಂಟಾಗಿದೆ. ಇಪ್ಪತ್ತು ವರ್ಷಗಳಿಂದಲೂ ಸಾಹಿತ್ಯಕ್ಷೇತ್ರದಲ್ಲಿ ಕೃಷಿಮಾಡುತ್ತಿದ್ದರೂ, ಇಂಥ ತೃಪ್ತಿಯನ್ನು ಇನ್ನಾವ ಕೃತಿಯೂ ಕೊಟ್ಟಿರಲಿಲ್ಲ. ಅಷ್ಟರ ಮಟ್ಟಿಗಾದರೂ ನನಗೆ ಪ್ರಯೋಜನವಾಗಿದೆ. ಇತರರಿಗೂ ಪ್ರಯೋಜನವಾದರೆ ಸಂತೋಷ.

ಬಳ್ಳಾರಿ<br>ವಿಕಾರಿ ಸಂ॥ರದ ಶಿವರಾತ್ರಿ }

ಕೋ. ಚನ್ನಬಸಪ್ಪ



# ರಕ್ಷಾಶತಕಂ

## ವೃತ್ತ: ೧

ಶ್ರೀಮದ್ ಗಂಗಾತರಂಗಾವೃತ ವಿಮಲ ಜಟಾಜೂಟ ಸರ್ವೇಶ ಗೌರೀ-
ವಾಮಾಂಗಾಲಿಂಗನಾಲಿಂಗಿತ ಘನಮಹಿಮೋದಾರ ಚಾರಿತ್ರ ಚಂಚತ್-
ಸೋಮಾರ್ಧೋತ್ತಂಸ ಸಂಸಾರಜಲಧಿವಡಬಾಕಾರ ಸಾಕಾರ ಭಕ್ತಿ-
ಪ್ರೇಮಾಂಭೋರಾಶಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೧

ಅರ್ಥ: ಶ್ರೀಃ= ಮಂಗಳ; ಮತ್= ಮಹತ್ತಾದ; ಗಂಗಾತರಂಗಾವೃತ= ಗಂಗೆಯ ತರಂಗ (ಅಲೆ)ಗಳಿಂದ ಸುತ್ತುವರಿಯಲ್ಪಟ್ಟ; ವಿಮಲ= ಶುಭ್ರವಾದ; ಜಟಾಜೂಟ= ಜಟಾಧಾರಿ; ಸರ್ವೇಶ= ಸರ್ವಕ್ಕೂ ಒಡೆಯನಾದವನು; ಗೌರೀವಾಮಾಂಗಾಲಿಂಗನಾಲಿಂಗಿತ= ಗೌರಿಯನ್ನು (ತನ್ನ ದೇಹದ) ಎಡಭಾಗದಲ್ಲಿ (ಕುಳ್ಳಿರಿಸಿ ಕೊಂಡು) ಆಲಿಂಗನಮಾಡಿಕೊಂಡ; ಘನ ಮಹಿಮ= ಅನಂತ ಮಹಿಮೆಯುಳ್ಳವನು; ಉದಾರ ಚಾರಿತ್ರ= ಉದಾರವಾದ ಚರಿತ್ರೆಯುಳ್ಳವನು; ಚಂಚತ್= ಥಳಥಳಿಸುವ; ಸೋಮಾರ್ಧ= ಅರ್ಧಚಂದ್ರನನ್ನು; ಉತ್ತಂಸ= ಧರಿಸಿದವನು; ಸಂಸಾರ= ಹುಟ್ಟು ಸಾವು ಎಂಬ (ಜಗತ್ತಿನ ಜಂಜಡವೆಂಬ) ಜಲಧಿ= ಸಮುದ್ರ; ವಡಬಾಕಾರ= ಬೆಂಕಿಯ ಆಕಾರನೂ; ಸಾಕಾರ= ಸಾಕಾರನು; ಭಕ್ತಿ ಪ್ರೇಮ= ಭಕ್ತಿ ಮತ್ತು ಪ್ರೇಮ (ಎಂಬ) ಅಂಭೋರಾಶಿ= ಸಮುದ್ರದೋಪಾದಿಯಲ್ಲಿರುವವನೂ ಆದ; ಪಂಪಾ ಪುರದರಸ= ಹಂಪೆಯ ರಾಜನಾದ; ವಿರೂಪಾಕ್ಷ= ವಿರೂಪಾಕ್ಷಸ್ವಾಮಿಯೇ; ಎನ್ನಂ= ನನ್ನನ್ನು; ರಕ್ಷಿಪ್ಪುದು= ರಕ್ಷಿಸುವುದು.

ಭಾವಾರ್ಥ : ಮಂಗಳಕರವಾದ ಗಂಗೆಯ ತರಂಗಗಳಿಂದ ಸುತ್ತುವರಿಯಲ್ಪಟ್ಟ ಶುಭ್ರವಾದ ಜಟಾಧಾರಿಯೂ, ಸರ್ವಲೋಕಗಳಿಗೂ ಒಡೆಯನೂ, ಗೌರಿಯನ್ನು ತನ್ನ ವಾಮಭಾಗದಲ್ಲಿ ಕುಳ್ಳಿರಿಸಿಕೊಂಡು, ಅನಂತ ಮಹಿಮೆಯುಳ್ಳವನೂ, ಉದಾರಚರಿತನೂ, ಮಿನುಗುವ ಬಿದಿಗೆಯ ಚಂದ್ರನನ್ನು ಧರಿಸಿದವನೂ, ಸಂಸಾರವೆಂಬ ಸಮುದ್ರಕ್ಕೆ ವಡಬಾಗ್ನಿಯಂತಿರುವವನೂ, ಸಾಕಾರನೂ, ಭಕ್ತಿ ಮತ್ತು ಪ್ರೇಮಗಳ ಸಾಗರದಂತಿರುವ ಪಂಪಾಪುರದರಸನಾದ ಶ್ರೀ ವಿರುಪಾಕ್ಷಸ್ವಾಮಿಯು ನನ್ನನ್ನು ರಕ್ಷಿಸಲಿ.

**ಟಿಪ್ಪಣಿ :** ಹರಿಹರಮಹಾಕವಿ ತನ್ನ ಇಷ್ಟದೈವವಾದ ಹಂಪೆಯ ವಿರುಪಾಕ್ಷನ ಸ್ತುತಿಯಿಂದ ರಕ್ಷಾಶತಕದ ಕಾವ್ಯಾರಂಭಮಾಡುತ್ತಾನೆ. ಈ ಕವಿಗೆ ಪಂಪಾಪುರಹರಸನನ್ನು ಎನಿತೆನಿತು ಬಗೆಯಿಂದ ಎನಿತೆನಿತು ಮಾತು ಗಳಿಂದ ಬಣ್ಣನೆಯಿಂದ ಸ್ತುತಿಸಿದರೂ ಇನ್ನೂ ಕಡಮೆಯೇ! ಹರಿಹರ ದೇವನ ೧೦೮ ರಗಳೆಗಳ ಆದಿ ಅಂತ್ಯದ ಕಂದಗಳಲ್ಲೂ ಬಗೆಬಗೆಯಿಂದ ಪಂಪಾಪುರದರಸನನ್ನು ನುತಿಸಿದ್ದಾನೆ. ಬಸವರಾಜದೇವರ ರಗಳೆ, ಗಿರಿಜಾ ಕಲ್ಯಾಣದ ಪ್ರಾರಂಭದಲ್ಲೂ, ಪ್ರತಿಯೊಂದು ಆಶ್ವಾಸದ ಆದಿಅಂತ್ಯದಲ್ಲೂ ಹೀಗೆಯೇ ಪಂಪಾಪತಿಯ ಸ್ತುತಿಮಾಡಿದ್ದಾನೆ. ಇಷ್ಟೆಲ್ಲ ಸಾವಿರಾರು ಕಂದ, ವೃತ್ತ, ವಚನಗಳಲ್ಲಿ ವಿರುಪಾಕ್ಷನ ಸ್ತುತಿಮಾಡಿದ್ದರೂ ಒಂದು ಇನ್ನೊಂದ ರಂತೆ ಇಲ್ಲ, ಭಕ್ತಿಯಜೊತೆಗೆ ಪಾಂಡಿತ್ಯವೂ ಇತ್ತೆಂಬುದಕ್ಕೆ ಇವು ಸಾಕ್ಷಿ

## ವೃತ್ತ: ೨

ತಿರುಗುತ್ತೆಂಬತ್ತು ನಾಲ್ಕುಂ ದಶಶತಶತಜನ್ಮಂಗಳೊಳ್ ಪುಟ್ಟಿ ನಿಮ್ಮೊಂ-
ದಿರವಂತಿಂತುಟೇಂವೇನುಮನಱಿಯದೆ ಮಣ್ಣಾಗಿ ಕಲ್ಲಾಗುತುಂ ದು-
ರ್ಧರಗುಲ್ಮಂ ಭೂರಿಭೂಜಂ ಪುಳು ಖಗ-ಮೃಗವಾಗುತ್ತು ಮೆಂತಕ್ಕೆ ಬಂದೆಂ
ನರಜನ್ಮಕ್ಕಯ್ಯ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೨

ಅರ್ಥ : ಎಂಬತ್ತುನಾಲ್ಕುಂ=ಎಂಬತ್ತುನಾಲ್ಕು; ದಶಶತಶತ=ಹತ್ತುಮೂರು ನೂರು (ಲಕ್ಷ); ಜನ್ಮಂಗಳೊಳ್= ಜನ್ಮಗಳಲ್ಲಿ; ಪುಟ್ಟಿ=ಹುಟ್ಟಿ; ತಿರುಗುತ್ತುಂ=ಗರಗರನೆ ತಿರುಗುತ್ತ; ನಿಮ್ಮ=ನಿಮ್ಮ; ಒಂದಿರವು=ಇರುವಿಕೆಯು; ಇಂತಿಂತು=ಹೀಗೆಹೀಗೆ; ಎಂತುಟು= ಹೇಗೆಹೇಗೆ (ಎಂಬುದನ್ನು) ಏನುಮಂ= ಏನನ್ನೂ; ಅಱಿಯದೆ= ತಿಳಿ ಯದೆ; ಮಣ್ಣಾಗಿ ಕಲ್ಲಾಗುತುಂ= ಮಣ್ಣಾಗಿ, ಕಲ್ಲಾಗಿ; ದುರ್ಧರ= ಸಹಿಸಲಸದಳ ವಾದ; ಗುಲ್ಮಂ= ಗಿಡಗಂಟೆಗಳಾಗಿ; ಭೂರಿಭೂಜಂ= ದೊಡ್ಡದೊಡ್ಡ ಮರಗಳಾಗಿ; ಪುಳು= ಹುಳುವಾಗಿ; ಖಗ= ಪಕ್ಷಿಯಾಗಿ; ಮೃಗವಾಗುತ್ತ= ಮೃಗಗಳಾಗುತ್ತ ಎಂತಕ್ಕೆ= ಹೇಗೋ; ನರಜನ್ಮಕ್ಕೆ= ಮನುಷ್ಯಜನ್ಮಕ್ಕೆ; ಬಂದೆಂ= ಬಂದೆನು; ಅಯ್ಯಾ ಪಂಪಾಪುರದರಸ= ಸ್ವಾಮಿಯಾದ ಹಂಪೆಯ ಒಡೆಯನೇ ವಿರೂಪಾಕ್ಷ= ವಿರುಪಾಕ್ಷಸ್ವಾ ಮಿಯೇ; ಎನ್ನಂ= ನನ್ನನ್ನು; ರಕ್ಷಿಪ್ಪುದು= ರಕ್ಷಿಸುವುದು.

**ಭಾವಾರ್ಥ:** ಎಂಬತ್ತುನಾಲ್ಕು ಲಕ್ಷ (ಜೀವರಾಶಿಗಳ) ಜನ್ಮಗಳಲ್ಲಿ ಹುಟ್ಟಿ ಜನನಮರಣಗಳ ಚಕ್ರದಲ್ಲಿ ಗರಗರನೆ ತಿರುಗುತ್ತಿದ್ದರೂ ಕೂಡ, ನಿಮ್ಮ ಸ್ವರೂಪ ಹೀಗಿದೆ, ಇಂತಿದೆ ಎಂಬುದನ್ನು ಏನೊಂದೂ ತಿಳಿಯದೆ ಮಣ್ಣಾಗಿ, ಕಲ್ಲಾಗಿ, ಸಹಿಸಲಸದಳವಾದ ಗಿಡವಾಗಿ, ಮರವಾಗಿ, ಪಕ್ಷಿಯಾಗಿ, ಮೃಗನಾಗಿ - ಕೊನೆಗೆ ಹೇಗೊ ನರಜನ್ಮಕ್ಕೆ ಬಂದೆ. ಹೇ ಸ್ವಾಮಿ, ಪಂಪಾಪುರದ ಒಡೆಯನಾದ ವಿರೂಪಾಕ್ಷ ಸ್ವಾಮಿಯೇ ಎನ್ನನ್ನು ರಕ್ಷಿಸು.

**ಟಿಪ್ಪಣಿ:** ಈ ವೃತ್ತದಲ್ಲಿ ಹರಿಹರದೇವನು ಇಡೀ ಸೃಷ್ಟಿಕ್ರಮವನ್ನೇ ಸಂಕ್ಷಿಪ್ತವಾಗಿ ವಿವರಿಸಿದ್ದಾನೆ. "ಈಶಾವಾಶ್ಯ ಮಿದಂ ಸರ್ವಂ" 'ಸರ್ವಂ ಖಲ್ವಿದಂ ಬ್ರಹ್ಮಂ' ಎಂಬ ಉಪನಿಷತ್‌ವಾಣಿಯನ್ನು ಎಲ್ಲರೂ ನುಡಿಯುತ್ತಾರೆ. ಮಣ್ಣಿನಿಂದ ಹಿಡಿದು ಮಾನವನವರೆಗೆ ಎಲ್ಲವೂ ಅವನಿಂದಲೇ ಆಗಿದೆ ಎಂಬ ಸತ್ಯ ಬಹುಜನಗಳಿಗೆ ಇನ್ನೂ ಬಾಯಿಮಾತಾಗಿಯೇ ಇದೆ. ಆದರೆ,ಮಣ್ಣಿನಿಂದ ಹಿಡಿದು, ಮಣ್ಣಿನಿಂದಲೇ, ಮಾನವನವರೆಗೆ ಮಾನವನಾಗಿದ್ದಾನೆ ಎಂಬ ನಿತ್ಯ ಸತ್ಯವನ್ನು ಹರಿಹರಮಹಾಕವಿ ಅನುಭವಿಸಿದ್ದನಾಗಿ ಈ ವೃತ್ತದಿಂದಲೇ ಕಾವ್ಯಾರಂಭವಾಗುವುದು ಕೇವಲ ವೈಜ್ಞಾನಿಕ ಸತ್ಯವಾಗಿದೆ.

ಶುದ್ಧ ಚೈತನ್ಯವಾದ ಪುರುಷ, ಪರಾತ್ಪರವಸ್ತು ತನ್ನ ಲೀಲೆಯಿಂದ ಮಣ್ಣಾಗಿ ಕಲ್ಲಾಗಿ ಗಿಡವಾಗಿ ಮರವಾಗಿ ಹುಳುವಾಗಿ ಪಕ್ಷಿಯಾಗಿ ಮೃಗವಾಗಿ ಮನುಷ್ಯನಾದಾಗ ಮನಸ್ಸನ್ನು ಹೊಂದಿ ವಿಕಸನಗೊಳ್ಳುವುದು. ಅತ್ಯಂತ ಜಡದಿಂದ ಜೀವ ಹುಟ್ಟುತ್ತದೆ; ಆ ದೇಹದ ಆಧಾರದಮೇಲೆ ಜೀವ ಮತ್ತು ಅವೆರಡರಮೇಲೆ ಮನಸ್ಸು ಉಂಟಾಗುತ್ತದೆ. ಜೀವ ಹೇಗೋ ಅಕಸ್ಮಾತ್ ಸೃಷ್ಟಿಯಾಗಲಿಲ್ಲ. ಜಡದಲ್ಲಿ ಸುಪ್ತವಾಗಿದ್ದ ಜೀವ, ಗಿಡಮರಗಳಲ್ಲಿ ಜಾಗ್ರತವಾಗಿ ಕಾಣುತ್ತದೆ; ಗಿಡಮರಗಳಲ್ಲಿ ಸುಪ್ತವಾಗಿದ್ದ ಮನಸ್ಸು ಮನುಷ್ಯನಲ್ಲಿ ಪ್ರಕಟವಾಗುತ್ತದೆ. ಇಲ್ಲಿಯಾದರೂ ಆ ಮನಸ್ಸುಪೂರ್ಣ ಪ್ರಕಟಗೊಂಡಿಲ್ಲ. ಅದಕ್ಕಿಂತ ಉನ್ನತವಾದ ಮನಸ್ಸು ಈಗ ಮಾನವನಲ್ಲಿರುವ ಮನಸ್ಸಿನಲ್ಲಿಯೇ ಅಡಗಿಕುಳಿತಿದೆ. ಆದ್ದರಿಂದಲೇ ಮಾನವ ಜನ್ಮವು ದೊಡ್ಡದು. ಗಿಡ, ಖಗ ಮೃಗಗಳಿಗಿಲ್ಲದ ವಿಶೇಷಸೌಲಭ್ಯ ಅವನಿಗಿದೆ. ಶ್ರೀ ಅರವಿಂದರು ಹೇಳ

ವಂತೆ: "Man is nature's great term of transition in which she grows conscious of her aim; in him she looks up from the animal with open eyes towards her divine ideal". ಮಾನವ ಅತಿಮಾನವನಾಗಬೇಕೆಂಬುದೇ ಮಾನವ ಹುಟ್ಟಿದಂದಿನಿಂದಲೂ ನಡೆದಿರುವ ಘೋರ ಸಂಗ್ರಾಮ. ಮುಂದಿನ ವೃತ್ತಗಳಲ್ಲಿ ಆ ಘೋರ ಸಂಗ್ರಾಮದ ಕತೆಯನ್ನು ಕವಿ ಬಣ್ಣಿಸುತ್ತಾನೆ.

ಇದೇ ವಿಚಾರವನ್ನೇ ತೈತ್ತರೀಯ ಉಪನಿಷತ್ತಿನ ಒಂದು ಋಕ್ಕಿನ ಭಾಷ್ಯದಲ್ಲಿ ಶ್ರೀ ಶಂಕರಾಚಾರ್ಯರು ಹೀಗೆ ಕೇಳುತ್ತಾರೆ: "ಎಲ್ಲದೂ ಬ್ರಹ್ಮನೇ ಎಂದು ಹೇಳುವಾಗ ಮನುಷ್ಯನಿಗೇಕೆ ಈ ಪ್ರಾಧಾನ್ಯತೆ ?" ಈ ಪ್ರಶ್ನೆಗೆ ಉತ್ತರ ಕೊಡುತ್ತಾ: "ಮನುಷ್ಯ ಇನ್ನೆಲ್ಲರಿಗಿಂತ ಮುಖ್ಯವಾಗಿದ್ದಾನೆ. ಆವನ ಪ್ರಾಮುಖ್ಯತೆ ಯಾವುದರಲ್ಲಿದೆ ? ಮನುಷ್ಯನಿಗೆ ಜ್ಞಾನವೆಂಬುದಿದೆ. ಆವನು ತನ್ನ ಕರ್ಮಗಳಿಗೆ ಭಾಗಿಯಾಗುವಂತೆ ಕರ್ಮಮಾಡಬಲ್ಲ .... .... ನಿತ್ಯವೂ ಕಾಲನೂ ಸಂಧಿಸುವ ಬಿಂದು ಈ ಮನುಷ್ಯ"*.

ವೃತ್ತ : ೩

ಬಸಿಱೊಳ್ ಮಾಸೊತ್ತಿ ನೆತ್ತರ್ ಪಸರಿಸಿ ಕರುಳಿಂಸುತ್ತಿ ಮೂತ್ರಂ ಪುರೀಷಂ
ಮುಸುಕಿಟ್ಟೆಲ್ಲಂಗದೊಳ್ ಕೆತ್ತಿರ ಲುದರಶಿಖಿಜ್ವಾಲೆಯಿಂದತ್ತಮಿತ್ತಂ
ಕುಸಿಯುತ್ತುಂ ಪುಟ್ಟುವೊಂದುಜ್ಜುಗದೊಳೆ ಮರಣಾವಸ್ಥೆಯಂ ತಾಳ್ದಿ ಬಂದಾ
ಯಸಮಂ ಚಿತ್ತಯಿಸ್ಸಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೩

ಅರ್ಥ : ಬಸಿಱೊಳ್= ಗರ್ಭದಲ್ಲಿ; ಮಾಸೊತ್ತಿ= ಕೂಸನ್ನು ಸುತ್ತಿಕೊಂಡಿರುವ ಚೀಲದಲ್ಲಿ ಸುತ್ತುವರಿಯಲ್ಪಟ್ಟು; ನೆತ್ತರ್= ರಕ್ತ; ಪಸರಿಸಿ= ಹರಡಿ; ಕರುಳಿಂಸುತ್ತಿ= ಕರುಳಿನಿಂದ ಸುತ್ತುವರಿಯಲ್ಪಟ್ಟು; ಮೂತ್ರಂ= ಮೂತ್ರವೂ; ಪುರೀಷಂ=

*ಪ್ರಬುದ್ಧ ಭಾರತ Vol. LXII No. 5 P 184 "Essentials of Hinduism" by Dr. P. Nagaraja Rao,

ಮಲವೂ; ಎಲ್ಲಿಂಗರೊಳ್= ಸಕಲ ಅಂಗಾಂಗಗಳಿಗೂ; ಮುಸುಕಿಟ್ಟು= ಮುತ್ತಿಕೊಂ ಡಿದ್ದು; ಕೆತ್ತಿರಲ್= ಮೆತ್ತಿಕೊಂಡಿರಲು; ಉದರ= ಗರ್ಭದ; ಶಿಖಿಜ್ವಾಲೆ= ಅಗ್ನಿ ಜ್ವಾಲೆಯಿಂದ; ಅತ್ತಂಮಿತ್ತಂ= ಅತ್ತಲೂ ಇತ್ತಲೂ; ಕುಸಿಯುತ್ತುಂ= ಒದ್ದಾಡುತ್ತ; ಪುಟ್ಟುವೊಂದು= ಹುಟ್ಟುವ ಒಂದು; ಉಜ್ಜುಗದೊಳ್= ಪ್ರಯತ್ನದಲ್ಲಿ; ಮರಣಾವಸ್ಥೆ ಯುಂ= ಮರಣದ ಅವಸ್ಥೆಯನ್ನು; ತಾಳ್ದು= ಅನುಭವಿಸಿ; ಬಂದಾಯಸವುಂ= ಬಂದ ಆಯಾಸವನ್ನು; ಚಿತ್ತೈಸಿ= ಮನಸ್ಸಿಗೆ ತಂದುಕೊಂಡು; ಪಂಪಾಪುರದರಸ= ಹಂಪೆಯ ಒಡೆಯನಾದ; ವಿರೂಪಾಕ್ಷ= ವಿರುಪಾಕ್ಷಸ್ವಾಮಿಯೇ; ಎನ್ನಂ= ನನ್ನನ್ನು ರಕ್ಷಿಪ್ಪುದು= ರಕ್ಷಿಸುವುದು.

**ಭಾವಾರ್ಥ:** ಶಿಶುಗರ್ಭದಲ್ಲಿದ್ದಾಗ ರಕ್ತಮಾಂಸ ಮಜ್ಜನ ಮಲ ಮೂತ್ರಗಳಲ್ಲೇ ಒದ್ದಾಡಿ; ಗರ್ಭದ ಶಾಖಾಗ್ನಿಯಲ್ಲಿ ಬೆಂದು ಅತ್ತ ಇತ್ತ ಒದ್ದಾಡಿ, ಹುಟ್ಟುವಾಗಲೇ ಸಾವಿನ ಸವಿಯನ್ನುಂಡು ಆಯಾಸದಿಂದ ಹುಟ್ಟಿ ಬಂದ ಈ ಕಷ್ಟವನ್ನು ಮನಸ್ಸಿಗೆ ತಂದ ಕೊಂಡು, (ನನ್ನಮೇಲೆ ಕನಿಕರಿಸಿ) ಹೇ ಪಂಪಾಪುರದ ಒಡೆಯನಾದ ವಿರೂಪಾಕ್ಷ ಸ್ವಾಮಿಯೇ ನನ್ನನ್ನು ರಕ್ಷಿಸು.

**ಟಿಪ್ಪಣಿ:** ಮಾನವಜನ್ಮಕ್ಕಿಂತ ಹಿಂದಿನ ಎಂಬತ್ತುನಾಲ್ಕು ಲಕ್ಷ ಜನ್ಮಂಗಳ ಹುಟ್ಟು ಹೇಗಾಗುತ್ತದೆಯೋ, ಅದರ ಕಷ್ಟವೆಂತಹುದೋ ಅದನ್ನು ಅರಿಯುವ, ಅನುಭವಿಸುವ ಮನಸ್ಸು ವಿಕಸಿತವಾಗಿಲ್ಲದುದರಿಂದ ಆ ಕಷ್ಟವೆಲ್ಲ ತಿಳಿಯುವುದಿಲ್ಲ. ಆದರೆ, ಮನಸ್ಸಿನಿಂದ ಯುಕ್ತವಾದ ಪ್ರಥಮಪ್ರಾಣಿ ಮಾನವನ ಹುಟ್ಟು ಅಷ್ಟೇನೂ ಸುಲಭಸಾಧ್ಯವಲ್ಲ. ಹೆರುವ ತಾಯಿಗೊಂದು ಬಗೆಯ ವೇದನೆಯಾದರೆ ಬರುವ ಶಿಶುವಿನ ವೇದನೆಯೊಂದು ಬಗೆಯದು. ಪುರುಷನೊಡನಿದ್ದು, ಐಕ್ಯವಾಗಿರುವ ಪ್ರಕೃತಿ, ಸ್ವಯಂಭುವಾಗಿ ಅಖಂಡ ಆನಂದದಲ್ಲಿದ್ದುದು ಪುರುಷನಿಂದ ಬೇರೆಯಾಗಿ, ಪ್ರಕೃತಿಯಾಗಿ ಅವತರಿಸಬೇಕಾದರೆ ಎಂಥ ಸಂಕಟವಿದೆಯೋ ! ಹಾಗೆಯೇ ತಾಯ ಗರ್ಭದಲ್ಲಿ ಸುಖವಾಗಿ ಸಕಲ ರಕ್ಷಣೆಗಳಿಂದಿದ್ದ ಶಿಶು ತನ್ನ ಸ್ವಸ್ಥಾನವನ್ನು ಬಿಟ್ಟು ಬರುವುದರಲ್ಲೂ ಅಷ್ಟೇ ಯಾತನೆಯಿದೆ. ಅಷ್ಟೆಲ್ಲ ಯಾತನೆಯನ್ನು ಪಟ್ಟುಕೊಂಡು ಮಾನವಜನ್ಮ ಏಕಾಗುತ್ತದೆ ? ಪುರುಷ ತನ್ನ ಲೀಲೆಯಲ್ಲಿ ತೊಡಗಿದಾಗ ಪರಿಶುದ್ಧ ಚೈತನ್ಯ ಜಡವಾಗಿ ಮತ್ತೆ ಅನಂತ ಸಂಸ್ಕಾರಗಳನ್ನು

ಪಡೆದು ಅವನಲ್ಲೇ ಆಗಬೇಕಾಗಿದೆ. ಲಿಂಗಾಂಗ ಸಾಮರಸ್ಯವಾಗಬೇಕೆಂಬ ಮಾತಿನಲ್ಲಿ ಇದೇ ಸತ್ಯ ಅಡಗಿದೆ. ಮಾನವಜನ್ಮಕ್ಕೆ ಬರುವ ಹೊತ್ತಿಗೆ ಎಂತೆಂಥ ನಾಮರೂಪಗಳನ್ನು ಹೊದ್ದು ಬಂದಿದೆಯೋ ಈ ವ್ಯಕ್ತಿಸೃಷ್ಟಿ ! ಈಗ ಮಾನವನಾಗಿ ಹುಟ್ಟುವ ಅಪೂರ್ವ ಸುಸಂಧಿ, ಸುಯೋಗ ದೊರೆತಿದೆ. ಅದು ಸಾರ್ಥಕವಾಗಲೇಬೇಕಾದರೆ ಹರಕರುಣೆ ಆಗಬೇಕು. ಇಷ್ಟೆಲ್ಲ ಆಯಾಸವನ್ನು ಹೊಂದಿ ಭುವಿಗಿಳಿದು ಬಂದ ಈ ಮಾನವನಮೇಲೆ ಕರುಣೆಗೊಂಡು ಭಗವಂತ ಕೃಪೆಗೈದು, ಕೆಳಗಿಳಿದು ಬಂದರೇನೇ ಅವನ ಹಾರೈಕೆ ಸಾರ್ಥಕವಾದೀತು.

ಹರಿಹರ ಮಹಾಕವಿ ೩ನೆಯ ಪದ್ಯದಲ್ಲಿ ಸೃಷ್ಟಿಕ್ರಿಯವನ್ನು ನಿರೂಪಿಸಿದುದು ಹೇಗೆ ಆಕಸ್ಮಿಕವಲ್ಲವೋ ಹಾಗೆಯೇ ಇಲ್ಲಿ ಮಾನವನ ಸೃಷ್ಟಿಯನ್ನು ಚಿತ್ರಿಸಿರುವುದೂ ಆಕಸ್ಮಾತ್ ಅಲ್ಲ. ಒಂದೊಂದೇ ಮೆಟ್ಟಿಲು ಮೆಟ್ಟಲಾಗಿ ಭಗವಂತನ ರಕ್ಷಣೆಯನ್ನು ಹಾರೈಸುವ ವೈಜ್ಞಾನಿಕ ಪದ್ಧತಿ ಗೋಚರವಾಗುತ್ತದೆ.

ವೃತ್ತ : ೪

ಏನೆಂಬೆಂ ಬಾಲ್ಯದೊಳ್ ಮೇಲಱಿಯದೆ ಮಲದಿಂ ಮೂತ್ರದಿಂ ಶ್ಲೇಷ್ಮದಿಂ ತೊ-
ಯ್ದಾನಾರೆಂದೇನುಮಂ ಭಾವಿಸದೆ ಬಧಿರನಂತಂಧನಂತಿರ್ದು ಮತ್ತಂ
ನಾನಾಭೋಜ್ಯಕ್ಕೆ ಪಕ್ಕಾಗುತೆ ಚರಿಸಿದೆನಿನ್ನಾಱಿನಿನ್ನಾಱಿನಯ್ಯೋ
ಆನಂದಾಂಭೋಧಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೪

ಅರ್ಥ : ಏನೆಂಬೆಂ= ಏನೆಂದು ಹೇಳಲಿ; ಬಾಲ್ಯದೊಳ್= ಬಾಲ್ಯದಲ್ಲಿ; ಮೇಲಱಿಯದೆ= ಒಳ್ಳೆಯದು ಕೆಟ್ಟುದೆಂಬುದನ್ನು ಅರಿಯದೆ; ಮಲದಿಂ= ಮಲದಿಂದ; ಮೂತ್ರದಿಂ= ಮೂತ್ರದಿಂದ; ಶ್ಲೇಷ್ಮದಿಂ= ಕಫದಿಂದ; ತೋಯ್ದು= ಒದ್ದೆಯಾಗಿ; ಆನಾರೆಂದೇನುಮಂ= ನಾನು ಯಾರು ಎಂದು ಏನನ್ನೂ; ಭಾವಿಸದೆ= ಯೋಜನೆಮಾಡದೆ; ಬಧಿರ= ಕಿವುಡ; ಅನಂತಂಧ= ಪಾರವಿಲ್ಲದ ಹುಟ್ಟು ಕುರುಡ; ಅಂತಿರ್ದು= ಅಂತೆ ಇದ್ದು; ಮತ್ತಂ= ಮತ್ತು; ನಾನಾಭೋಜ್ಯಕ್ಕೆ= ವಿಧವಿಧವಾದ ಆಹಾರ ಮತ್ತು

ಭೋಗವಸ್ತುಗಳಿಗೆ ಸಕ್ಕಾಗುತೆ= ಸೋರುಹೋಗುತ್ತ, ಎಳಸುತ್ತ; ಚರಿಸಿದೆನ್= ಜೀವಿಸಿದೆ; ಇನ್ನಾಱೆನಿನ್ನಾಱೆನ್= ಇನ್ನು ನಾನು ಸಹಿಸಲಾರೆ ಸಹಿಸಲಾರೆ; ಅಯ್ಯೋ, ಆನಂದಾಂಭೋಧಿ= ಆನಂದ ಸಮುದ್ರವೇ ಆದ ಪಂಪಾಪುರದರಸ= ಹಂಪೆಯ ಒಡೆಯನೇ ವಿರೂಪಾಕ್ಷಸ್ವಾಮಿಯೇ; ಎನ್ನಂ= ನನ್ನನ್ನು; ರಕ್ಷಿಪ್ಪುದು= ರಕ್ಷಿಸುವುದು.

**ಭಾವಾರ್ಥ:** ಏನೆಂದು ಹೇಳಲಿ? ಬಾಲ್ಯದಲ್ಲಿ ಒಳ್ಳೆಯದು ಕೆಟ್ಟದು ಎಂಬ ವಿವೇಕವಿಲ್ಲದೆ ಮೂಲಮೂತ್ರ ಶ್ಲೇಷ್ಮಗಳಲ್ಲಿ ಹೊರಳಾಡಿ, ನಾನು ಯಾರು ಎಂಬುದನ್ನು ಎಷ್ಟೂ ಯೋಚನೆಮಾಡದೆ ಕಿವುಡನಂತೆ ಹುಟ್ಟುಕುರುಡನಂತೆ ಇದ್ದು, ನಾನಾಬಗೆಯ ಆಹಾರ ಭೋಗವಸ್ತುಗಳಿಗೆ ನಾಲಗೆ ಚಾಚಿ, (ಪಶುವಿನಂತೆ) ಅಡ್ಡಾಡಿದೆ ಇನ್ನು ನಾನು ಸಹಿಸಲಾರೆನು. ಅಯ್ಯೋ ಹಂಪೆಯೊಡೆಯ ವಿರೂಪಾಕ್ಷಸ್ವಾಮಿಯೇ, ನನ್ನನ್ನು ರಕ್ಷಿಸು

ವೃತ್ತದ ಮೂರನೆಯ ಪಾದದಲ್ಲಿ ಬರುವ 'ಚರಿಸಿದೆನ್' ಎಂಬ ಪದದ ಧ್ವನಿ, ಮನುಷ್ಯನಾಗಿ ಹುಟ್ಟಿದರೂ ಪಶುವಿನ ಗುಣದಿಂದ ಕೂಡಿ, ಕೇವಲ ಪಶುವಿನಂತೆ ಬದುಕಿದೆನು ಎಂಬುದು. ಹೀಗಲ್ಲದೆ, ಇನ್ನಾವ ಅರ್ಥದಲ್ಲೂ "ಚರಿಸಿದೆನ್" ಎಂಬ ಪದವನ್ನು ಕವಿ ಉಪಯೋಗಿಸಿರಲಾರ.

**ಟಿಪ್ಪಣಿ:** ೧ನೆಯ ವೃತ್ತದಲ್ಲಿ ಮಾನವಜನ್ಮ ಉತ್ಪತ್ತಿಯಾಗುವುದನ್ನು ಕವಿ ವರ್ಣಿಸಿದ್ದಾನೆ. ಈ ಪದ್ಯದಲ್ಲಿ ಮಾನವನ ಬಾಲಲೀಲೆಯನ್ನು ವಿವರಿಸಿದ್ದಾನೆ. ಮಾನವನಾಗಿ ಹುಟ್ಟಿದರೂ ಬಾಲ್ಯದಲ್ಲಿ ತಾರತಮ್ಯ ಬುದ್ಧಿಯಿಲ್ಲದೆ ಕುರುಡು ಜೀವನವನ್ನು ಜೀವಿಸುತ್ತೇವೆ. ಈ ಮುಂದೆ ಬರುವ ಪದ್ಯದಲ್ಲಿ ಯೌವನದ ಮತಿವಿಕಲತೆಯನ್ನು ಕುರಿತು ದುಃಖಿಸಿದ್ದಾನೆ.

**ವೃತ್ತ: ೩**

ಸಿರಿದೊಂದಜ್ಞಾನದಿಂ ಯೌವನವಿಕಳತೆ ಮೈದೋಱೆ ಕಾಂತಾನಿವಾಸಾಂ-
ತರದೊಳ್ ಶ್ವಾನಂಗೆ ಹೀಹಂದಿಗೆ ಕಪಿಗೆಣೆಯಾಗಿರ್ದು ಬೇಳಾಗುತುಂ ತತ್-
ಕರಣಕ್ಕಾಳಾಗಿ ಹಾಳಾಗುತೆ ಒಱುದೊಱೆವ್ರೋದೆಂ ಬಳಲ್ದೆಂ ಬಿಗುರ್ತೆಂ
ನುರುಳಾಡೆಂ ದೇವ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ

ಅರ್ಥ: ಪಿರಿದೊಂದುಂ= ಹಿರಿದಾದ ಒಂದು; ಅಜ್ಞಾನದಿಂ= ಅಜ್ಞಾನದಿಂದ; ಯೌವನದ ವಿಕಳತೆ= ಚಂಚಲತೆ; ದುಃಖ ದುಮ್ಮಾನಗಳು; ಪ್ಪುದೋಚಿ= ಕಾಣಿಸಿ ಕೊಳ್ಳಲು; ಕಾಂತಾನಿವಾಸಾಂತರದೊಳ್= ಕಾಂತೆಯರ ತನುಸುಖದಲ್ಲಿ; ಶ್ವಾನಂಗೆ= ನಾಯಿಗೆ; ಹೀಹಂದಿಗೆ= ಹೀನಾಯವಾದ ಹಂದಿಗೆ; ಕಪಿಗೆ; ಎಣೆಯಾಗಿರ್ದು= ಸಮನಾಗಿದ್ದು; ಬೇಳಾಗುತುಂ= ಹುಚ್ಚನಾಗುತ್ತ; ತತ್ಕರಣಕ್ಕೆ = ಆ ಪಂಚೇಂದ್ರಿಯಗಳಿಗೆ; ಆಳಾಗಿ= ದಾಸನಾಗಿ; ಪಾಳಾಗುತೆ= ಹಾಳಾಗಿಹೋಗಿ; ಬಱುದೊಱೆವೊಲ್= ಬತ್ತಿದ ತೊರೆಯಂತೆ (ಒಣಗಿಹೋದ ಹೊಳೆಯಂತೆ) ಆಗಿಹೋದೆ; ಬಳಲ್ದೆಂ= ಬಳಲಿದೆ; ಬೆಗಡ್ತೆಂ= ಭಯಗೊಂಡೆ; ಮರುಳಾದೆ= ಹುಚ್ಚನಾದೆ ದೇವ ಹಂಪಾಪುರದರಸ ವಿರೂಪಾಕ್ಷ ಎನ್ನನ್ನು ರಕ್ಷಿಸು.

ಭಾವಾರ್ಥ: ಯೌವನದ ಚಿತ್ತಚಾಂಚಲ್ಯವು ಕಾಣಿಸಿಕೊಳ್ಳಲು ಅಧಿಕವಾದ ಅಜ್ಞಾನದಿಂದ ಹೆಣ್ಣಿನ ಸಂಗದಲ್ಲಿ ನಾಯಿಯಂತೆ ಹೀನವಾದ ಹಂದಿಯಂತೆ, ಕಪಿಯಂತೆ ವರ್ತಿಸುತ್ತ ಹುಚ್ಚನಾಗುತ್ತಾ, ಪಂಚೇಂದ್ರಿಯಗಳಿಗೆ ದಾಸನಾಗಿ ಹಾಳಾಗಿಹೋಗಿ ಬತ್ತಿದ ತೊರೆಯಂತೆ ಬಳಲಿದೆ, ಭಯಗೊಂಡೆ, ಹುಚ್ಚನಂತಾದೆ, ದೇವ ಹಂಪೆಯೊಡೆಯ ಶ್ರೀ ವಿರೂಪಾಕ್ಷಸ್ವಾಮಿಯೇ ನನ್ನನ್ನು ರಕ್ಷಿಸು.

ಟಿಪ್ಪಣಿ: ಬಾಲ್ಯ ಕೌಮಾರ್ಯಗಳನ್ನು ದಾಟಿ ಮನುಷ್ಯ ಯೌವನಾವಸ್ಥೆಯನ್ನು ಹೊಂದುತ್ತಾನೆ. ಆಗಲೇ ಅವನ ಇಂದ್ರಿಯಗಳು ವಿಷಯಸುಖಕ್ಕೆ ಎಳಸಿ ಅವನನ್ನು ಸಂಪೂರ್ಣ ಅಧಃಪತನಕ್ಕೆ ಎಳೆಯಲು ಹವಣಿಸುತ್ತವೆ. ಈ ಯೌವನಾವಸ್ಥೆಯಲ್ಲಿಯೇ, ತನ್ನಲ್ಲಿ ಸುಪ್ತವಾಗಿರುವ ಆತ್ಮ ಪಂಚೇದ್ರಿಯಗಳಿಗೆ, ಅರಿಷಡ್ವರ್ಗಗಳಿಗೆ, ಮನದ ಭ್ರಾಂತಿಗೆ, ಬುದ್ಧಿಯ ವಿಕಾರಕ್ಕೆ, ಅಹಂಕಾರಕ್ಕೆ ವಶವರ್ತಿಯಾಗಿ ತನ್ನ ಸ್ವಸ್ವರೂಪವನ್ನು ಸಂಪೂರ್ಣಮರೆತುಹೋಗಿ ಈ ದೇಹವೇ ನಿತ್ಯ, ದೇಹಸುಖವೇ ಪರಮಾವಧಿಸುಖ ಎಂಬ ಮಾಯೆಯಬಲೆಯನ್ನು ಸುತ್ತಿಸುತ್ತು ಹಾಕಿಕೊಳ್ಳುತ್ತಾನೆ ಮನುಷ್ಯ. ದೇವರು ಕಲ್ಪಿಸಿದ ಪಂಚಕೋಶಗಳ ಬಂಧನಕ್ಕೆ ತಾನೇ ಸೃಷ್ಟಿಸಿದ ಅನಂತ ಬಂಧನಗಳನ್ನು ಕಟ್ಟಿಕೊಂಡು ಕೇವಲ ಇಂದ್ರಿಯಗಳ ಆಳಾಗಿ ವರ್ತಿಸುತ್ತಾನೆ. ಯೌವನ ವಿಕಲತೆಯ ಪರಿಣಾಮವನ್ನು ಕವಿ ೫ ರಿಂದ ೩೭ನೆಯ

ಪದ್ಯಗಳವರೆಗೆ ವಿವರವಿವರವಾಗಿ ವರ್ಣಿಸಿದ್ದಾನೆ. ಹಾಗೂ ಅವುಗಳಿಂದ ತನ್ನನ್ನು ಬಿಡುಗಡೆಮಾಡಿ ರಕ್ಷಿಸೆಂದು ಪರಿಪರಿಯಿಂದ ಪಂಪಾಪುರಾಧೀಶನಲ್ಲಿ ಮೊರೆಯಿಡುತ್ತಾನೆ.

ವೃತ್ತ: ೬

ಸ್ತ್ರೀಮಾತ್ರಂ ನೇತ್ರದತ್ತಲ್ ಸುಳಿದೊಡೆ ಮನವಿರ್ಭಾಗಮಾಗುತ್ತೆ ತಾಪ-
ಸ್ತೋಮಂ ಕೈಮೀಱೆ ಲಜ್ಜಾರಸಮುಡುಗಿ ವಿವೇಕಂ ಕಳಲ್ದೋಡಿ ರಾಗಂ
ಕೈಮಿಕ್ಕಾನಾವನೇನೆಂದಱಿಯದ ತೆಱನಂ ಮಾಡುತಿರ್ದಪ್ಪುದಿಂತೀ
ಕಾಮಂ ಕಾಮಾರಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೬

ಅರ್ಥ: ಸ್ತ್ರೀ= ಹೆಣ್ಣು; ಮಾತ್ರಂ= ಕೇವಲ; ನೇತ್ರದತ್ತಳ್= ಕಣ್ಣಮುಂದೆ; ಸುಳಿದೊಡೆ= ಸುಳಿದರೆ (ಹಾಕು); ಮನಂ= ಮನಸ್ಸು; ಇರ್ಭಾಗಮಾಗುತ್ತೆ= ಮನಸ್ಸು ಎರಡಾಗಿ ಸೀಳಿಹೋಗಿ; ತಾಪಸ್ತೋಮಂ= ವಿರಹ ತಾಪ ಸಮೂಹಗಳು; ಕೈಮೀಱೆ= ಅಂಕೆದಪ್ಪಿ; ಲಜ್ಜಾರಸಂ= ಲಜ್ಜಾಭಾವವೇ; ಉಡುಗಿ= ಇಲ್ಲದಂತಾಗಿ; ವಿವೇಕಂ= ವಿವೇಕವು; ಕಳಲ್ದು= ಬಿದ್ದು, ಜಾರಿ, ಸಡಿಲಾಗಿ ಓಡಿ (ಹೋಗಿ); ರಾಗಂ = ಅನುರಾಗವು; ಕೈಮಿಕ್ಕು = ಅಧಿಕವಾಗಿ; ಆವನೇನೆಂದಱಿಯದ= ಯಾರು ಏನೆಂದರೂ ತಿಳಿಯದ; ತೆಱನಂ= ರೀತಿ; ಈ ಕಾಮಂ= ಈ ಕಾಮವು; ಮಾಡುತಿರ್ದಪ್ಪುದು= ಮಾಡುತ್ತಿದೆ; ಕಾಮಾರಿ= ಕಾಮನನ್ನು ಸುಟ್ಟ ಪರಶಿವನಾದ ಹಂಪೆಯರಸ ವಿರೂಪಾಕ್ಷಸ್ವಾಮಿಯೇ ನನ್ನನ್ನು ರಕ್ಷಿಸು.

ಭಾವಾರ್ಥ: ಹೆಣ್ಣು ಕೇವಲ ಕಣ್ಣಮುಂದೆ ಸುಳಿದಮಾತ್ರಕ್ಕೇ ಮನಸ್ಸು ಇಬ್ಭಾಗವಾಗುತ್ತಾ, ವಿರಹತಾಪಗಳ ಸಮೂಹವೇ ಅಂಕೆದಪ್ಪಿ ಹೆಚ್ಚಾಗಿ; ನಾಚಿಕೆದಪ್ಪಿ, ವಿವೇಕವೇ ಇಲ್ಲದಂತಾಗಿ ಸ್ತ್ರೀಸಂಗಸುಖದಲ್ಲಿ ಅನುರಾಗ ಹೆಚ್ಚಾಗಿ, ಯಾರು ಏನೆಂದರೂ ಅರಿಯದವನಂತೆ ಮಾಡುತ್ತಿರುವ ಈ ಕಾಮನಿಂದ ಹೇ ಕಾಮಾರಿಯಾದ ಹಂಪೆಯೊಡೆಯ ವಿರೂಪಾಕ್ಷಸ್ವಾಮಿಯೇ ನನ್ನನ್ನು ರಕ್ಷಿಸು.

ಟಿಪ್ಪಣಿ: ಮನುಷ್ಯ ಯೌವನದಲ್ಲಿ ಅಡಿಯಿಡುತ್ತಲೇ, ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳೆಂಬ ಆರುಶತ್ರುಗಳು ಜೀವನ

ಮೇಲೆ ದಾಳಿಮಾಡುತ್ತವೆ. ಇವು ಯಾರನ್ನೂ ಬಿಟ್ಟವುಗಳಲ್ಲ. ಈ ಕಾಮ ವಂತೂ ಅರಿಷಡ್ವರ್ಗಗಳ ರಾಜನಂತೆ! ಲೋಭ ಅದರ ನಿಕಟವರ್ತಿ. ಅವ ಗಳನ್ನು ಗೆಲ್ಲುವುದು ಸುಲಭದ ಮಾತಲ್ಲ! ಕಾಮಿನಿಯ ಸಂಗ, ಕಾಂಚನದ ಲೋಭ ಇವೆರಡನ್ನೂ ಯಾವನು ಗೆಲ್ಲಬಲ್ಲನೋ ಅವನೇ ಮುಕ್ತಾತ್ಮ. ಕಾಮ, ದೇಹದ ಉಪಾಧಿ; ಲೋಭ, ಮನದ ಉಪಾಧಿ. ಇವೆರಡನ್ನೂ ಗೆಲ್ಲದಿದ್ದರೆ ಯಾರೆಷ್ಟು ಜಪತಪ ಹೋಮ ಯಜ್ಞಯಾಗಾದಿಗಳನ್ನು ಮಾಡಿ ದರೂ ವ್ಯರ್ಥವೇ ಸರಿ. ಅದೆಲ್ಲವೂ ಹೋರಿರುವ ಗದ್ದೆಯಮಡಿಗೆ ನೀರು ಬಿಟ್ಟಂಥ ವ್ಯರ್ಥಶ್ರಮ. ಅದ್ದರಿಂದ ಕಾಮನನ್ನು ಗೆಲ್ಲಲು ಕಾಮಾರಿಯಾದ ಪರಶಿವನ ಕೃಪೆಯಿಂದ ಮಾತ್ರವೇ ಸಾಧ್ಯ.

ಮುಂದಿನ ಐದು ವೃತ್ತಗಳಲ್ಲಿ ಅರಿಷಡ್ವರ್ಗಗಳಲ್ಲಿ ಒಂದೊಂದನ್ನೂ ತೆಗೆದುಕೊಂಡು, ಅವುಗಳನ್ನು ಗೆಲ್ಲುವ ಸಾಮರ್ಥ್ಯವನ್ನು ಕೊಡು ತಂದೇ, ಪಂಪಾಪುರದರಸ ಎಂದು ಹಲುಬುತ್ತಾನೆ.

### ವೃತ್ತ: ೭

ಏಪೊಳ್ತುಂ ಗಾತ್ರಮಂ ಶೋಷಿಸುತೆ ಕರಣಮಂ ಕಂದಿಸುತ್ತುಂ ನಿರರ್ಥಂ
ತಾಪವ್ರಾತಕ್ಕೆ ಪಕ್ಕಾಗಿಸುತಮಳಗುಣಸ್ತೋಮಮಂ ಖಂಡಿಸುತ್ತುಂ
ಪಾಪಪ್ರಾರಂಭಕರ್ತೃತ್ವಮನೆನಗೆನಿಸಂ ಮಾಡುತಿರ್ಪಪ್ಪುದಿಂತೀ
ಕೋಪಂ ಶಾಂತಾತ್ಮ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೭

ಅರ್ಥ: ಏಪೊಳ್ತುಂ= ಯಾವಾಗಲೂ; ಗಾತ್ರಮಂ= ದೇಹವನ್ನು; ಶೋಷಿಸುತೆ= ಶೋಷಣೆಮಾಡುತ್ತಾ; ಕರಣಮಂ= ಅಂಗಾಂಗಗಳನ್ನು; ಕಂದಿಸುತ್ತ= ಸೊರಗಿಸುತ್ತಾ; ನಿರರ್ಥಂ= ನಿರರ್ಥಕವಾಗಿ; ತಾಪವ್ರಾತಕ್ಕೆ= ತಾಪಗಳ ಗುಂಪಿಗೆ; ಪಕ್ಕಾಗಿಸುತ= ಈಡುಮಾಡುತ್ತಾ ಅಮಳ= ನಿರ್ಮಲವಾದ; ಗುಣಸ್ತೋಮಮಂ= ಸದ್ಗುಣಗಳ ಸಮೂ ಹವನ್ನು; ಖಂಡಿಸುತ್ತುಂ ನಾಶಮಾಡುತ್ತ; ಪಾಪಪ್ರಾರಂಭಕರ್ತೃತ್ವಮಂ= ಪಾಪ ಕರ್ಮಗಳನ್ನು ಸನ್ನಿಂದ ಮಾಡಿಸುವದಕ್ಕೆ (ಕಾರಣವಾದ) ಎನಗೆನಿಸಂ= ನನ

ಎನ್ನೋ ರೀತಿಯುಳ್ಳ; ನೋಡುತಿರ್ದಪ್ಪುದು= ನೋಡುತ್ತಿರುವುದು; ಇಂತೀ= ಇಂಥ; ಈ ಕೋಪಂ= ಕೋಪವು; ಶಾಂತಾತ್ಮ= ಕೋಪರಹಿತನಾದ ಪಂಪಾಪುರದ ಒಡೆಯನಾದ ಶ್ರೀ ವಿರೂಪಾಕ್ಷಸ್ವಾಮಿಯೇ ನನ್ನನ್ನು ರಕ್ಷಿಸುವುದು.

**ಭಾವಾರ್ಥ:** ಯಾವಾಗಲೂ ದೇಹವನ್ನು ಶೋಷಿಸುತ್ತ, ಅಂಗಾಂಗಳನ್ನು ಕಂದಿಸುತ್ತ, ನಿರರ್ಥಕವಾಗಿ ತಾಪತ್ರಯಗಳ ಸಮೂಹಕ್ಕೆ ನಮ್ಮನ್ನು ಈಡುಮಾಡಿ, ಮಂಗಳಕರವಾದ ಸದ್ಗುಣಗಳನ್ನು ನಾಶಮಾಡಿ, ನಮ್ಮನ್ನು ಪಾಪಕಾರ್ಯಗಳನ್ನೆಸಗಲು ಕಾರಣವಾದ ಇಂಥ ಈ ಕೋಪದಿಂದ ಬಿಡುಗಡೆಮಾಡಿ, ಹೇ ಪಂಪಾಪುರದ ಒಡೆಯನಾದ ಶ್ರೀ ವಿರೂಪಾಕ್ಷ ಸ್ವಾಮಿಯೇ ನನ್ನನ್ನು ರಕ್ಷಿಸ.

**ಟಿಪ್ಪಣಿ:** ಕಾಮ ದೇಹದ ಉಪಾಧಿಯಾದರೆ ಕೋಪ ಮನದ ಉಪಾಧಿ. ಒಂದ ವೇಳೆ ಕಾಮನನ್ನು ಗೆದ್ದರೂ, ಕೋಪವನ್ನು ಗೆದ್ದ ಹೊರತು ಈಶ್ವರನಿಗೆ ಅರ್ಪಿಸಲು ಯೋಗ್ಯವಾಗಲಾರದು ಈ ಜೀವ. ತನುಮನದಿಂದ ಎಲ್ಲ ಭೂಮಿಕೆಯಲ್ಲೂ ಪರಿಶುದ್ಧನಾಗದ ಹೊರತು ಜೀವನಿಗೆ ಶಿವನ ದರ್ಶನವಾಗುವುದಿಲ್ಲ. ಅದ್ದರಿಂದಲೇ ಸ್ಥೂಲದೇಹದ ದುರ್ವ್ಯಾಪಾರವಾದ ಕಾಮನನ್ನು ಗೆಲ್ಲುವುದು ಎಷ್ಟು ಅಗತ್ಯವೋ, ಮನುಷ್ಯನ ಸೂಕ್ಷ್ಮತನುವಾದ ಮನವನ್ನು ಗೆಲ್ಲುವುದೂ ಅಷ್ಟೇ ಅಗತ್ಯ.! ಕಣ್ಣಿಗೆ ಕಾಣುವ ಕೈಗೆ ತಾಕುವ ದೇಹದ ದುರ್ಗುಣವನ್ನು ನೀಗಿ ಕಳೆದಾದಮೇಲೆಯೇ ಕಣ್ಗೆಕಾಣದ ಮನದ ಮಲಿನತೆಯನ್ನು ಉಜ್ಜಿ ಕಳೆಯಲು ಸಾಧ್ಯವಾದೀತು. ಹೀಗೆ ಸಾಧಕ ತನ್ನ ಮೈಮೇಲೆ ದಾಳಿಮಾಡುವ ಕಾಮನನ್ನು ಎಂತೋ, ಅಂತೆಯೇ ಮನದ ಮೇಲೆ ಲಗ್ಗೆಹತ್ತುವ ಕೋಪವನ್ನೂ ಎದುರಿಸಬೇಕು; ಹೋರಾಡಬೇಕು. ಘೋರ ಸಂಗ್ರಾಮದಲ್ಲಿ – ಮೂರೋಕ ವಿಲ್ಲಿಯವರೆಗೆ ಕಣ್ಣಿಂದ ಕಾಣದ ಅಘೋರ ಸಂಗ್ರಾಮದಲ್ಲಿ - ಹೋರಾಡಬೇಕು. ಅದು ಒಮ್ಮೆಗೇ ಆಗುವ ಕೆಲಸವಲ್ಲ, ನಿಧಾನವಾಗಿ, ಸಾಧನೆಯಿಂದ, ಹೆಜ್ಜೆಹೆಜ್ಜೆ ಮುಂದುವರಿದು ಗೆಲ್ಲಬೇಕು. ಹರಿಹರ ಮಹಾಕವಿ ಇಲ್ಲಿ ಅದನ್ನು ತೋರಿಸಿಕೊಟ್ಟಿದ್ದಾನೆ.

## ವೃತ್ತ : ೮

ಧನವುಂ ಸ್ತ್ರೀಪುತ್ರರಂ ಕೆಮ್ಮನೆ ಕಿಡುವ ಗೃಹಕ್ಷೇತ್ರಮುಂ ಮಿತ್ರರಂ ವ-
ಸ್ತ್ರನಿಕಾಯಾಕಲ್ಪಮಂ ಮುಂತೆನಗೆನುತೆ ಕರಂ ಕಾಂಕ್ಷೆಯಿಂ ಕೂರ್ಮೆಯಿಂದೆ
ಳ್ಕೆನಿತುಂ ಪುಣ್ಯಕ್ಕೆ ಮಾಡಲ್ ಕುಡದೆ ಕಿಡಿಸುವೀ ಲೋಭಮಂ ದಾನಿ
ನೀಂ ಭೇ-
ದನೆಯಂ ಮಾಡುತ್ತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೮

ಅರ್ಥ : ಧನವುಂ=ಐಶ್ವರ್ಯವನ್ನು; ಸ್ತ್ರೀಪುತ್ರರಂ=ಮಡದಿಮಕ್ಕಳನ್ನು; ಕೆಮ್ಮನೆ=ಸುಮ್ಮನೆ; ಕಾರಣವಿಲ್ಲದೆ; ಕಿಡುವ=ಕೆಟ್ಟುಹೋಗುವ; ಗೃಹ=ಮನೆ; ಕ್ಷೇತ್ರಮುಂ=ಹೊಲವನ್ನು; ಮಿತ್ರರಂ=ಸ್ನೇಹಿತರನ್ನು; ವಸ್ತ್ರನಿಕಾಯ=ವಸನ ಸಮೂಹವನ್ನು; ಆಕಲ್ಪಮಂ= ಆಭರಣಗಳನ್ನು; ಮುಂತೆ= ಮೊದಲು; ಎನಗೆನುತೆ= ನನಗೆ ಬೇಕೆನ್ನುತ್ತ; ಕರಂ= ಬಹಳವಾಗಿ; ಕಾಂಕ್ಷೆಯಿಂ= ಆಕಾಂಕ್ಷೆಯಿಂದ; ಕೂರ್ಮೆಯಿಂ= ಪ್ರೀತಿಯಿಂದ; ಎಳ್ಕೆನಿತುಂ= ಎಳ್ಳಷ್ಟನ್ನೂ; ಪುಣ್ಯಕ್ಕೆಮಾಡಲ್ಕುಡದೆ= ಪುಣ್ಯಕಾರ್ಯಗಳಿಗಾಗಿ ಉಪಯೋಗಿಸದೆ; ಕಿಡಿಸುವ= ಮನುಷ್ಯನನ್ನು ಕೆಡಿಸುವ ಈ ಲೋಭವನ್ನು; ದಾನಿಯಾದ ನೀನು; ಭೇದನೆಯಂ= ಧ್ವಂಸಮಾಡುತ್ತ ಪಂಪಾಪುರದರಸನಾದ ವಿರೂಪಾಕ್ಷಸ್ವಾಮಿಯೇ ನನ್ನನ್ನು ರಕ್ಷಿಸುವುದು.

ಭಾವಾರ್ಥ: ಐಶ್ವರ್ಯ, ಮಡದಿಮಕ್ಕಳು, ಕಾರಣವಿಲ್ಲದೆ ಎಂದಾದರೂ ಬಿಟ್ಟುಹೋಗುವ ನಾಶವಾಗುವ ಹೊಲಮನೆ ಮಿತ್ರರು ವಸ್ತ್ರಾಲಂಕಾರಗಳು ಮೊದಲು ನನಗೆಬೇಕು, ನನಗೆಬೇಕು ಎಂದು ಪರಿತಪಿಸಿ ತವಕಪಡಿಸುವಂತೆಮಾಡಿ, ಇವುಗಳನ್ನು ಎಳ್ಳಷ್ಟಾದರೂ. ಸತ್ಕಾರ್ಯಕ್ಕೆ ವಿನಿಯೋಗಿಸದೆ ಈ ಮಾನವ ಜನ್ಮವನ್ನೇ ಹಾಳುಮಾಡುವ ಈ ಲೋಭವನ್ನು ಧ್ವಂಸಮಾಡಿ ಉದ್ಧಾರಮಾಡಿ ರಕ್ಷಿಸು ತಂದೆ ವಿರೂಪಾಕ್ಷಸ್ವಾಮಿ.

ಟಿಪ್ಪಣಿ : ಕಾಮಿನಿಕಾಂಚನ ಎಂಬುವು ಮಾಯಾ ಪ್ರಪಂಚದ ರಾಜರಾಣಿಯರಿದ್ದಂತೆ. ಅವರ ನಿರ್ದಯ ಆಡಳಿತೆಯಲ್ಲಿ ಜೀವ ಎಷ್ಟೆಷ್ಟು ಬಗೆಯಾಗಿ, ಎಂತೆಂಥ ಯಾತನೆಯನ್ನು ಅನುಭವಿಸಬೇಕೋ ! ಜೀವನಿಗು

ಶಿವನಿಗೂ ಅಡ್ಡನಿಂತಿರುವ ಗೋಡೆಯೇ ಈ ಅರಿಷಡ್ವರ್ಗಗಳು. ಕಾಮ ಮತ್ತು ಲೋಭದ ಬಂಧನ ಕಳಚಲಾರದಷ್ಟು ಭದ್ರವಾಗಿವೆ. ಭಗವತ್ಕೃಪೆಯೆಂಬ ವಜ್ರಾಯುಧದ ಏಟು ಬೀಳದಹೊರತು ಅವು ಕಳಚುವುದಿಲ್ಲ. ಆ ಭಗವತ್ ಕೃಪೆಗಾಗಿ ಸಾಧಕ ಎಷ್ಟು ತೀವ್ರತರವಾಗಿ ಹಾರೈಸಿದರೆ ಅಷ್ಟು ಶೀಘ್ರವಾಗಿ ಕೃಪೆಯಾದೀತು.

## ವೃತ್ತ: ೬

ದೇಹೋಹಂ ಎಂದು ಮಕ್ಕಳ್ ಮನೆ ಧನವಳಿಯಲ್ ಕಂದಿಸುತ್ತುರ್ಬುವಾಶಾ
ವ್ಯೂಹಕ್ಕಿಂಬಾಗಿಸುತ್ತುಂ ನೆನೆದು ಮರುಗಿಸುತ್ತುಂ ಮುಸುಂಕಿರ್ದ ಮಿಥ್ಯಾ-
ಸ್ನೇಹಾರಂಭಾನುಕೂಲಂ ನುಡಿಗೆಡೆಗುಡದಿರ್ದಪ್ಪುದೊತ್ತಂಬದಿಂದೀ
ಮೋಹಂ ಮೋಹಾರಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೬

ಅರ್ಥ : ದೇಹೋಹಂ= ದೇಹವೇ ನಾನು ಎಂದು; ಮಕ್ಕಳ್ ಮನೆ ಧನವಳಿಯಲ್= ಮಕ್ಕಳು ಮನೆ ಸಂಪತ್ತು ಅಳಿದುಹೋಗಲಾಗಿ; ಕಂದಿಸುತ್ತುಂ= ಕೊರಗಿಸುತ್ತ; ಉರ್ಬುವ= ಉಬ್ಬುವ, ಹೆಚ್ಚಾಗುವ, ಆಶಾವ್ಯೂಹಕ್ಕೆ= ಆಸೆಗಳ ಸಮೂಹಕ್ಕೆ; ಇಂಬಾಗಿಸುತ್ತುಂ= ಈಡುಮಾಡುತ್ತ; ನೆನೆದು= (ಅಳಿದುಹೋದ ಮನೆ ಮಕ್ಕಳು ಧನಗಳನ್ನು) ನೆನೆದು; ಮರುಗಿಸುತ್ತುಂ= ಮರುಗಿಸುತ್ತ; ಮುಸುಂಕಿರ್ದ= ಮುಸುಕಿದ್ದ; ಮಿಥ್ಯಾ= ನಿಜವಲ್ಲದ; ಸ್ನೇಹಾರಂಭ= ಸ್ನೇಹ ಮತ್ತು ಗೆಳೆತನ; ಅನುಕೂಲ= ಒಳ್ಳೆಯ; ನುಡಿಗೆ= ಮಾತಿಗೆ; ಎಡೆಗುಡದಿರ್ದಪ್ಪುದು= ಅವಕಾಶವನ್ನೇ ಕೊಡದಿದೆ; ಈ ಮೋಹಂ= ಈ ಮೋಹವು; ಒತ್ತಂಬದಿ= ಪ್ರಾಬಲ್ಯದಿಂದಕೂಡಿ ದಟ್ಟವಾಗಿ ಕವಿದ. (ಇಂಥ ಮೋಹದಿಂದ); ಮೋಹಾರಿ= ಮೋಹದ ಶತ್ರುವಾದ ಪಂಪಾಪುರದರಸಾ ವಿರೂಪಾಕ್ಷನೇ ರಕ್ಷಿಸು.

ಭಾವಾರ್ಥ : ದೇಹವೇ ನಾನು ಎಂದು ನಂಬಿಕೊಂಡು, ಮಕ್ಕಳು ಮನೆ ಧನ ಮುಂತಾದವು ಅಳಿದುಹೋಗಲು ಜೀವವನ್ನು ಕೊರಗಿಸುತ್ತ ಅದು ಬೇಕು ಇದುಬೇಕು ಎಂಬ ಆಸೆಗೆ ಈಡುಮಾಡಿ, ಕಳೆದುಹೋದುದನ್ನು ನೆನೆದು ಮರುಗುವಂತೆ ಮಾಡಿ ಮಿಥ್ಯಾ ಸ್ನೇಹದ ಆರಂಭದಲ್ಲಿ ಮುಳುಗಿ

ಕೊಂಡಿರುವಂತೆ ಮಾಡಿ, ಒಳ್ಳೆಯ ನುಡಿಗೆ ಅವಕಾಶವನ್ನು ಕೊಡದೆ ದಟ್ಟವಾಗಿ ಕವಿದಿರುವ ಮೋಹದಿಂದ ನನ್ನನ್ನು ಬಿಡುಗಡೆಮಾಡಿ ರಕ್ಷಿಸು ವಿರೂಪಾಕ್ಷಸ್ವಾಮಿ.

**ಟಿಪ್ಪಣಿ:** ಸ್ವರ್ಗಸುಖಕ್ಕೆ ಎರಡನೆಯದೇ ಈ ದೇಹಸುಖವಂತೆ. ಈ ದೇಹವೇ ನಾನು ಎಂಬ ದಟ್ಟವಾದ ಮೋಹವನ್ನು ಜೀವ ಹೊದ್ದುಕೊಂಡಿದೆ. ಆದ್ದರಿಂದಲೇ ನಿಶ್ಚಯವಾಗಿಯೂ ಶಿವಸ್ವರೂಪಿಯಾದ ಆತ್ಮ ಈ ದೇಹದಲ್ಲಿ ಅವತರಿಸಿದಾಗ, ತನ್ನ ನಿಜಸ್ವರೂಪವನ್ನೇ ಮರೆತು ("ಶಿವೋಽಹಂ" ಎಂಬುದನ್ನು ಮರೆತು) ದೇಹೋಽಹಂ ಎಂದು ಭ್ರಮೆಗೊಳ್ಳುತ್ತದೆ ಜೀವ. ಈ ಮೋಹ ಮನೆ ಮಡದಿಮಕ್ಕಳು ಧನ ಕನಕ ನನ್ನದಾಗಬೇಕು, ಶಾಶ್ವತವಾಗಿರಬೇಕು ಎಂದು ಜೀವನಲ್ಲಿ ಕೀಳು ಪ್ರವೃತ್ತಿಯನ್ನು ಹುಟ್ಟಿಸುತ್ತದೆ. ಅವು ಕಳೆದುಹೋದಾಗ ಅವುಗಳನ್ನು ನೆನೆದು ಕೊರಗುತ್ತದೆ. ಜೀವ ಜಗತ್ತಿಗೆ ಬದ್ಧವಾಗಲು ಈ ಮೋಹದ ಪಾತ್ರ ಬಹು ದೊಡ್ಡದಿದೆ. ಅಂಥ ಮೋಹದಿಂದ ಮುಕ್ತನಾಗದ ಹೊರತು ಮುಕ್ತಿಯಿಲ್ಲ. ಅಂಥ ತಮಃ ಪ್ರವೃತ್ತಿಯಾದ ಮೋಹದಿಂದ ಬಿಡುಗಡೆಮಾಡಿ ಕಾಪಾಡುತಂದೇ ಎಂದು ಸಾಧಕ ಮೊರೆಯಿಡುತ್ತಾನೆ.

## ವೃತ್ತ : ೧೦

ಅದನೇನೆಂಬೆಂ ಗುಣವ್ರಾತವನೆ ಪಱಿಯುತುಂ ವಿದ್ಯೆಯಂ ಖಂಡಿಸುತ್ತುಂ
ಕದಡುತ್ತುಂ ಚಿತ್ತಮಂ ಬುದ್ಧಿಯನುಱದಱಿಯಟ್ಟುತ್ತೆ ಕಾಯ್ದುಪ್ಪುದೆನ್ನೀ
ಮದಮಾತಂಗಂ ಮಹಾಮೋಹಕ ನಿಜಚರಣಸ್ತಂಭದೊಳ್ ಕಟ್ಟಿ ಸೈತಿ-
ಟ್ಟು ದಯಾಂಭೋರಾಶಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೧೦

**ಅರ್ಥ :** ಅದನೇನೆಂಬೆಂ= ಅದನ್ನು (ಮದವೆಂಬ ಮದಿಸಿದ ಆನೆಯ ಆಟವನ್ನು) ಏನೆಂದು ಹೇಳಲಿ; ಗುಣವ್ರಾತವನೆ= ಸದ್ಗುಣಗಳ ಸಮೂಹವನ್ನೇ; ಪಱಿಯುತುಂ= ಹರಿದೊಗೆಯುತ್ತ; ಕತ್ತರಿಸಿಹಾಕುತ್ತ; ವಿದ್ಯೆಯಂ= (ಪರತತ್ತ್ವ, ಬ್ರಹ್ಮ) ವಿದ್ಯೆಯನ್ನು ಖಂಡಿಸುತ್ತುಂ= ಖಂಡನೆ ಮಾಡುತ್ತಾ; ಚಿತ್ತಮಂ= ಚಿತ್ತವನ್ನು; ಕದಡು

ತ್ತಾ= ಕಲಕುತ್ತಾ; ಬುದ್ಧಿಯನ್ನು ಉಳಿದೆ= ನಿಲ್ಲದೆ; ಹಿಂತಿರಿಯದೆ (ಹಿಂದುಮುಂದು ನೋಡದೆ) ಅಳ್ಕಿಯುಟ್ಟುತ್ತೆ= ಹಿಂದಕ್ಕೆ ಓಡಿಸುತ್ತ (ಬುದ್ಧಿಯನ್ನು ಸಮೀಪಕ್ಕೆ ಬಿಟ್ಟು ಕೊಳ್ಳದೆ ದೂರದೂರ ತಳ್ಳುತ್ತಾ) ಕಾಯ್ದುಪ್ಪುದು= ನನ್ನನ್ನು ಕೋಪದಿಂದ ಕುದಿಯುವಂತೆ ಮಾಡುವ ಈ ಮದವೆಂಬ ಮಾತಂಗ= ಆನೆಯನ್ನು, ಮಹಾರೋಪಕ= ಹತ್ತುವುದರಲ್ಲಿ ಚತುರನೂ, ಪಳಗಿಸುವುದರಲ್ಲಿ ಸಮರ್ಥನೂ ಆದ ದಯಾಂಭೋರಾಶಿ= ದಯೆಯ ಸಮುದ್ರವೇ ಆದ ಪಂಪಾಪುರದರಸನೇ ನಿಜಪದ= ನಿನ್ನ ಪಾದಗಳೆಂಬ ಸ್ತಂಭದೊಳ್=ಕಂಬಕ್ಕೆ (ಉಮ್ಮದಿಸಿದ ಮದವೆಂಬ ಆನೆಯನ್ನು) ಕಟ್ಟಿ ಸ್ಥಿತಿಟ್ಟು= ಸುಮ್ಮನಿರಿಸಿ (ಪಳಗಿಸಿ) ಎನ್ನನ್ನು ಕಾಪಾಡು ವಿರೂಪಾಕ್ಷೇಶ್ವರನೇ.

**ಭಾವಾರ್ಥ:** ಮದವೆಂಬ ಮದಿಸಿದ ಆನೆಯ ಆಟವನ್ನು ಏನೆಂದು ಹೇಳಲಿ ? ಸದ್ಗುಣಗಳ ಸಮೂಹವನ್ನೇ ಕತ್ತರಿಸಿ ಹಾಕಿ, ಪರತತ್ತ್ವವಿದ್ಯೆಯನ್ನು ಖಂಡನೆಮಾಡಿ, ಚಿತ್ತವನ್ನು ಕಲಕಿ, ಬುದ್ಧಿಯನ್ನು ಸನಿಹಬರದಂತೆ ದೂರದೂರಕ್ಕೆ ಓಡಿಸಿ, ಕೋಪದಿಂದ ಕಾಯುವಂತೆ ಮಾಡುವ ಈ ಮದವೆಂಬ ಆನೆಯನ್ನು, ದಯೆಯೆಂಬ ಸಮುದ್ರದಂತಿರುವ ಚತುರ ಮಾವುತನಾದ ಹಂಪೆಯೊಡೆಯನೇ ಈ ಆನೆಯನ್ನು ನಿನ್ನ ಚರಣಗಳೆಂಬ ಕಂಬಕ್ಕೆ ಕಟ್ಟಿಹಾಕಿ ಸುಮ್ಮನಿರಿಸಿ ರಕ್ಷಿಸು.

## ವೃತ್ತ : ೧೧

ಪರನೈಶ್ವರ್ಯಕ್ಕಸೂಯಂಗೊಳುತೆ ಪರರ ಬಲ್ಪಿಂಗೆ ಸಂತಾಪಿಸುತ್ತಂ
ಪರರಿಂದಂ ಮಿಕ್ಕು ಬಾಳಲ್ ಬಯಸಿ ಕುದಿದು ಬೇಳಾಗಿ ಬೆಂಬೀಳುತಿರ್ದಂ
ಪರಚಿಂತಾಕ್ಷೋಭೆಯಿಂ ಮತ್ಸರದೊಡನೆ ಕರಂ ಗಾಸಿಯಾವಪ್ಪೆನ್ನೀ ಮ-
ತ್ಸರಮಂ ತಗ್ಗಿರ್ತ್ತಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ . ೧೧

**ಅರ್ಥ:** ಪರರ= ಇತರರ ಐಶ್ವರ್ಯಕ್ಕೆ= ಸಂಪತ್ತಿಗೆ; ಅಸೂಯಂಗೊಳುತೆ= ಅಸೂಯಪಟ್ಟುಕೊಳ್ಳುತ್ತಾ; ಪರರ ಬಲ್ಪಿಂಗೆ= ಸಾಮರ್ಥ್ಯಕ್ಕೆ; ಸಂತಾಪಿಸುತ್ತಂ= ಸಂಕಟಪಡುತ್ತಾ; ಪರರಿಂದಂ= ಇತರರಿಗಿಂತಲೂ; ಮಿಕ್ಕು= ಹೆಚ್ಚೆಂಬರೀತಿಯಲ್ಲಿ;

ಬಾಳಲ್= ಬಾಳಲು ಬಯಸಿ; ಕುದಿದು ಬೇಳಾಗಿ= ಹುಚ್ಚನಂತಾಗಿ; ಬೆಂಬೀಳುತಿರ್ದುಂ= ಬೆನ್ನುಬೀಳುತ್ತಿದ್ದು; ಪರಚಿಂತಾಕ್ಷೋಭೆಯಿಂ= ಪರರ ಚಿಂತೆಯ ಕ್ಷೋಭೆಯಿಂದ; ಮತ್ಸರ= ಹೊಟ್ಟೆಕಿಚ್ಚಿನಿಂದ; ಕರಂ= ಚೆನ್ನಾಗಿ; ಗಾಸಿಯಾದಪೆ= ಸುಗ್ಗುಸುಗ್ಗಾಗುತಿರುವೆ; ನೀ= ನೀನು ಮತ್ಸರವನ್ನು ತರ್ಗೆತ್ತಿ= ಕಡಿಮೆಮಾಡಿ ಪಂಪಾಪುರದರಸನೇ ರಕ್ಷಿಸು.

ಭಾವಾರ್ಥ: ಪರರ ಸಂಪತ್ತನ್ನು ನೋಡಿ ಹೊಟ್ಟೆಕಿಚ್ಚು ಪಟ್ಟುಕೊಂಡು, ಪರರ ಶಕ್ತಿಸಾಮರ್ಥ್ಯ ಪ್ರಾಬಲ್ಯಗಳನ್ನು ನೋಡಿ ಸಂಕಟಪಟ್ಟುಕೊಂಡು, ಇತರರಗಿಂತಲೂ ಹೆಚ್ಚಾಗಿ ಬಾಳಬೇಕೆಂಬ ಆಸೆಯಿಂದ ಕುದಿದು ಹುಚ್ಚನಾಗಿ, ಪರರಚಿಂತೆಯಲ್ಲೇ ಕ್ಷೋಭೆಗೊಂಡು ನನ್ನನ್ನು ಸುಗ್ಗು ಸುಗ್ಗು ಮಾಡುತ್ತಿರುವ ಈ ಹೊಟ್ಟೆಯ ಕಿಚ್ಚನ್ನು ಕಡಮೆಮಾಡಿ, ನನ್ನನ್ನು ಕಾಪಾಡು ಹಂಪೆಯರಸನೇ.

ಟಿಪ್ಪಣಿ: ಕಾಮ ಕ್ರೋಧ ಲೋಭ ಮೋಹ ಮದಗಳು ಒಂದು ಬಗೆಯ ವೈರಿಗಳಾದರೆ ಈ ಮತ್ಸರದ ವೈಖರಿಯೇ ಬೇರೆ! ಮನುಷ್ಯ ಹೆಂಡತಿ ಮಕ್ಕಳು ಕಾಮಿನಿಕಾಂಚನ, ಕಡೆಗೆ ಈ ಜಗತ್ತನ್ನೇ ತೊರೆದಾನು. ಸರ್ವಸಂಗಪರಿತ್ಯಕ್ತನಾಗಿ ಸನ್ಯಾಸಿಯೂ ಆಗಬಹುದು. ಆದರೆ, ಅಂಥ ಸನ್ಯಾಸಿಗಳಿಗೂ ಈ ಮತ್ಸರದ ಮಾಯೆ ಬಿಟ್ಟಿದಲ್ಲ! ಇಂದ್ರಿಯನಿಗ್ರಹ ಮಾಡಿ, ಕಾಂಚನದ ಲೋಭವನ್ನು ಗೆದ್ದು, ಮೋಹಾಂಧಕಾರದಿಂದ ಹೊರ ಬಂದು, ಇಂದ್ರಿಯ ಗಣವನ್ನೆಲ್ಲ ಗೆದ್ದ ಸಂನ್ಯಾಸಿಯಾದರೂ ಕೂಡ ಇನ್ನೊಬ್ಬ ಸಂನ್ಯಾಸಿಯ ಕೀರ್ತಿಯನ್ನು ನೋಡಿ ಕರುಬುವ, ಅಸೂಯೆಪಡುವ, ಹೊಟ್ಟೆಕಿಚ್ಚುಪಡುವ ಸಂನ್ಯಾಸಿಗಳೂ ಸಿಕ್ಕುತ್ತಾರೆ! ಎಂದಮೇಲೆ ಈ ಮತ್ಸರ ಸಾಮಾನ್ಯ ಶತ್ರುವಲ್ಲ. ಉಳಿದವರು ಹೊರಗಿನ ಶತ್ರುಗಳಾದರೆ, ಇದು ಒಳಗಿನ ಶತ್ರು, ಮನೆಯಕಳ್ಳನಂತೆ. ಆದ್ದರಿಂದಲೇ

"ಹೊಟ್ಟೆಯೊಂದರ ರಗಳೆ ಸಾಲದೆಂದೇನೊ ವಿಧಿ
ಹೊಟ್ಟೆಕಿಚ್ಚಿನ ಕಿಡಿಯನಿಟ್ಟಿಹನು ನರನೊಳ್

ಹೊಟ್ಟೆ ತುಂಬಿದರೆ ತೋಳಮಲಗೀತು ನೀ ಪರರ
ದಿಟ್ಟಿಸುತ ಕರುಬುವೆಯೊ ಮಂಕುತಿಮ್ಮ || ಎಂದು ಡಿ.ವಿ. ಜಿ. ಹೇಳಿದ್ದಾರೆ.
೧೧ನೆಯ ವೃತ್ತಕ್ಕೆ ಅರಿಷಡ್ವರ್ಗಗಳ ವಿಚಾರ ಮುಗಿಯಿತು.

## ವೃತ್ತ: ೧೨

ಮನವೆನ್ನಂ ದುರ್ವಿಕಾರಕ್ಕೆಳೆವಪುದು ಮನಂ ಮಾನಮಂ ನುರ್ಗಿದತ್ತೀ
ಮನವಾಶಾವಹ್ನಿಯೊಳ್ ನೂಂಕಿದಪುದು ಮನವೀ ಮಾಯೆಯಂ ಬಿಟ್ಟು ನಿಮ್ಮಂ
ನೆನೆಯಲ್ ತಾನೀಯದಯ್ಯೋ ಶಿವನೆ ಭವನೆ ಕಾರುಣ್ಯವಾರಾಶಿಯೆನ್ನೀ
ಮನಮಂ ಸಯ್ತಿಟ್ಟು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೧೨

ಅರ್ಥ: ಮನಂ= ಮನಸ್ಸು; ಎನ್ನಂ= ನನ್ನನ್ನು; ದುರ್ವಿಕಾರಕ್ಕೆ= ದು ಷ್ಟವ್ಯಾಪಾರಕ್ಕೆ; ಎಳೆವಪ್ಪುದು= ಎಳೆಯುತ್ತಿದೆ; ಮನಂ= ಈ ಮನಸ್ಸು; ಮಾನ ಮಂ= ಮಾನಮರ್ಯಾದೆಯನ್ನು ನುರ್ಗಿದತ್ತು= ಹಿಂಡಿ, ಹಿಸುಕಿ ಪುಡಿಮಾಡುತ್ತಿದೆ; ಈ ಮನಂ= ಈ ಮನಸ್ಸು, ಆಶಾವಹ್ನಿಯೊಳ್= ಆಸೆಯೆಂಬ ಬೆಂಕಿಯಲ್ಲಿ; ನೂಂಕಿದಪುದು = ನೂಕುತ್ತದೆ; ಮನಂ= ಮನಸ್ಸು; ಈ ಮಾಯೆಯಂ= ಈ ಮಾಯೆಯನ್ನು ಬಿಟ್ಟು ನಿಮ್ಮಂ= ನಿಮ್ಮನ್ನು; ನೆನೆಯಲ್= ನೆನೆಯಲು; ತಾನೀಯದು= ಬಿಡಲೊಲ್ಲದು. ಅಯ್ಯೋ ಶಿವನೆ ಭವನೆ; ಕಾರುಣ್ಯವಾರಾಶಿ= ಕಾರುಣ್ಯನಿಧಿಯೇ; ನೀಂ=ನೀವು; ಈ ಮನಮಂ=ಮನಸ್ಸನ್ನು ಸಯ್ತಿಟ್ಟು=ಸಮಾಧಾನಗೊಳಿಸಿ ಪಂಪಾಪುರದರಸನೇ ಕಾಪಾಡು.

ಭಾವಾರ್ಥ: ಮನಸ್ಸು ದುಷ್ಟಕಾರ್ಯಗಳಿಗೆ ಎಳೆಯುತ್ತಿದೆ; ಮಾನ ಮರ್ಯಾದೆಯನ್ನು ಹಿಸುಕಿ ಪುಡಿಪುಡಿ ಮಾಡುತ್ತಿದೆ; ಆಸೆಯೆಂಬ ಬೆಂಕಿಯಲ್ಲಿ ನೂಕುತ್ತಿದೆ; ಈ ಮಾಯೆಯನ್ನು ಬಿಟ್ಟು ನಿನ್ನನ್ನು ನೆನೆಯಲು ಅವಕಾಶ ವನ್ನೇ ಕೊಡವುದಿಲ್ಲ. ಅಯ್ಯೋ ಶಿವನೇ ಈ ಮನಸ್ಸನ್ನು ನೆಲೆಗೆ ನಿಲ್ಲಿಸಿ ನನ್ನನ್ನು ಕಾಪಾಡು ವಿರೂಪಾಕ್ಷೇಶ್ವರ.

ಟಿಪ್ಪಣಿ: ೧೨ನೆಯ ಈ ವೃತ್ತದಿಂದ ಕವಿ, ಸಾಧನೆಯ ಇನ್ನೊಂದು

ಪೆಟ್ಟಲನ್ನು ಹತ್ತಿಸುತ್ತಾನೆ. ೧೨, ೧೩, ೧೪, ೧೭ನೆಯ ವೃತ್ತಗಳಲ್ಲಿ ಮಾ
ವನ ಮನಸ್ಸಿನ ವ್ಯಾಪಾರವನ್ನೂ, ೧೫ನೆಯ ವೃತ್ತದಲ್ಲಿ ಮಾನವ ಬುದ್ಧಿ
ದುಷ್ಟಚೇಷ್ಟೆಯನ್ನೂ, ೧೭ನೆಯ ಪದ್ಯದಲ್ಲಿ ಚಿತ್ತದ ವ್ಯಾಪಾರವನ್ನು ವ
ಸುತ್ತಾನೆ. ಮನುಷ್ಯನ ಮನಸ್ಸು, ಬುದ್ಧಿ, ಚಿತ್ತ - ಒಂದಕ್ಕಿಂತ ಒಂ
ಸೂಕ್ಷ್ಮತರವಾಗಿವೆ. ಅವುಗಳಲ್ಲಿಯೇ ಗುಪ್ತವಾಗಿ ಸುಪ್ತವಾಗಿ ಇರು
ಚಿತ್ಕಳೆ ಅವುಗಳಾಚೆ ಅವುಗಳಿಗಿಂತ ಸುಸೂಕ್ಷ್ಮವಾಗಿದೆ. ಆ ಸುಸೂಕ್ಷ್ಮ
ಚಿತ್ಕಳೆಯನ್ನು ಮುಸುಕಿದ ಪೊರೆ ಈ ಮನಸ್ಸು, ಬುದ್ಧಿ, ಚಿತ್ತ ಎಂಬುವು.
ಇವೆಲ್ಲವುಗಳಿಗೂ ಗುಣದೋಷಗಳ ಶೃಂಖಲೆಯಿದೆ. ಈ ಗುಣದೋಷಗ
ಗಡಿಯಾಚೆ ಇರುವಾಕ ಚಿತ್ಕಳೆ. ಅದನ್ನು ಸಾಧಿಸಲು ಜೀವನಿಗೆ ಅಂ
ಕೊಂಡಿರುವ ಈ ಸ್ಥೂಲವಸ್ತುಗಳ ಕೊಳೆ ನೀಗಬೇಕು.

ಈ ಮನಸ್ಸೇ ಎಲ್ಲ ಬಂಧನಕ್ಕೂ ಕಾರಣ. ಒಂದರ್ಥದಲ್ಲಿ ಮನಸ್ಸ
ನ್ನು ಸ್ಥಿಮಿತದಲ್ಲಿಡುವುದೇ ಮುಕ್ತಿ ಎಂದು ಭಾವಿಸಬಹುದು. ಶ್ರೀಮದ್ಭಗ
ವದ್ಗೀತೆಯ ಆರನೆಯ ಅಧ್ಯಾಯದಲ್ಲಿ ಬಹುಭಾಗ ಮನಸ್ಸಿನ ವ್ಯಾಪಾರ,
ಅದನ್ನು ನಿಗ್ರಹಿಸುವ ರೀತಿಯನ್ನು ಭಗವಾನ್ ಶ್ರೀ ಕೃಷ್ಣಪರಮಾತ್ಮ
ಹೇಳಿದ್ದಾನೆ.

ಯುಂಜನ್ನೇವಂ ಸದಾತ್ಮಾನಂ ಯೋಗೀ ನಿಯತಮಾನಸಃ ।
ಶಾಂತಿಂ ನಿರ್ವಾಣಪರಮಾಂ ಮತ್ಸಂಸ್ಥಾಮಧಿಗಚ್ಛತಿ ॥ ಗೀತೆ.
VI ಶ್ಲೋ: 15

ಮನಸ್ಸನ್ನು ನಿಗ್ರಹಿಸಿದ ಯೋಗಿಯು ಮನಸ್ಸನ್ನು ಹೀಗೆ (ನನ್ನಲ್ಲಿಯೇ)
ಯಾವಾಗಲೂ ಸೇರಿಸಿಕೊಳ್ಳುತ್ತಾ ನನ್ನನ್ನು ಆಶ್ರಯಿಸಿರುವ ಮೋಕ್ಷದಲ್ಲಿ
ಕೊನೆಗಾಣುವ ಶಾಂತಿಯನ್ನು ಹೊಂದುತ್ತಾನೆ. (ಶ್ರೀ ಸ್ವಾಮಿ ಆದಿದೇವಾ
ನಂದರ ಅನುವಾದ) ಎಂದು ಶ್ರೀಕೃಷ್ಣ ಹೇಳುತ್ತಾನೆ. ಆದರೆ ಅರ್ಜುನ:
'ಏತಸ್ಯಾಹಂ ನ ಪಶ್ಯಾಮಿ ಚಂಚಲತ್ವಾತ್ ಸ್ಥಿತಿಂ ಸ್ಥಿರಾಮ್' 'ಮನಸ್ಸು
ಚಂಚಲವಾದುದರಿಂದ ಇದರ ಸ್ಥಿರವಾದ ಸ್ಥಿತಿಯನ್ನು ನಾನು ಕಾಣುತ್ತಿಲ್ಲ'
ಎಂದು ಹೇಳುತ್ತಾನೆ. ಮನಸ್ಸು ಸುಲಭಕ್ಕೆ ನಿಲ್ಲುವುದಿಲ್ಲ ಎಂಬುದನ್ನು

ಶ್ರೀಕೃಷ್ಣನೂ ಬಲ್ಲ. "ಅಸಂಶಯಂ ಮಹಾಬಾಹೋ ಮನೋದುರ್ನಿಗ್ರಹಂ ಚಲಮ್ । ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ ।" ಮನಸ್ಸು ದುರ್ನಿಗ್ರಹವಾದದ್ದು ಮತ್ತು ಚಂಚಲವಾದದ್ದು ಎಂಬುದು ನಿಸ್ಸಂಶಯವು. ಅಭ್ಯಾಸದಿಂದಲೂ ಮತ್ತು ವೈರಾಗ್ಯದಿಂದಲೂ ಅದನ್ನು ನಿಗ್ರಹಿಸಬಹುದು (ಗೀತೆ VI ಶ್ಲೋ ೩೫) ಎಂದು ದಾರಿತೋರಿಸುತ್ತಾನೆ. ಇಲ್ಲಿಯಾದರೂ ಹರಿಹರ ಮಹಾಕವಿಯೂ ಅದೇ ದಾರಿಯನ್ನು ತೋರಿಸುತ್ತಾನೆ. ಅಭ್ಯಾಸ, ವೈರಾಗ್ಯ - ಇವೆರಡು ಸಾಧಕನ ಬೀಜಮಂತ್ರಗಳಿದ್ದಂತೆ ಎನ್ನಬಹುದು. ೧೩ನೆಯ ವೃತ್ತದಲ್ಲಿ ವೈರಾಗ್ಯವನು ಕೊಡೆಂದು ಬೇಡುತ್ತಾನೆ.

ಅಭ್ಯಾಸದ ಬಲ ಎಂಥದೆಂಬುದನ್ನು ಸರ್ಕಸ್ ನೋಡಿದವರು ಬಲ್ಲರು. ತಂತಿಯಮೇಲೆ ನಡೆಯುತ್ತಾರೆ. ಬೆಂಕಿಯ ಬಳೆಯಲ್ಲಿ ಮೈ ಸುಟ್ಟುಕೊಳ್ಳದೆ ತೂರಿ ಬರುತ್ತಾರೆ ಸುತ್ತಲೂ ಥಳಥಳಿಸುವ ಮೊನಚಾದ ಕತ್ತಿಗಳನ್ನು ಕಟ್ಟಿ ಆ ಮೊನೆಗಳಿಂದ ಸುತ್ತುವರಿಯಲ್ಪಟ್ಟ ರಂಧ್ರದಲ್ಲಿ ಓಡಿಹೋಗಿ ತೂರಿ ಹಾರಿ ಬರುತ್ತಾರೆ. ಮೈಯನ್ನು ಹೀಗೆ ಬೇಕಾದಂತೆ ಮಣಿಸಬೇಕಾದರೆ ಚಿಕ್ಕಂದಿನಿಂದಲೂ ಅಭ್ಯಾಸ ಮಾಡಿರುತ್ತಾರೆ. ಮೈಯನ್ನು ಮಣಿಸುವುದಕ್ಕೆ ಇಷ್ಟು ಸಾಧನೆ, ಶ್ರದ್ಧೆ, ಶ್ರಮ ಬೇಕಾದರೆ, ಕೈಗೆ ತಾಕದ, ಕಣ್ಣಿಗೆ ಕಾಣದ ಮನಸನ್ನು ಮಣಿಸುವುದಕ್ಕೆ ಇನ್ನೆಂಥ ತೀವ್ರಸಾಧನೆ ಬೇಕು ?

ವೃತ್ತ : ೧೩

ಪ್ರತ್ಯಕ್ಷಂ ಸತ್ತು ಹೋಗುತ್ತಿದೆ ನರನಿಕರಂ ತಾನಿದಂ ಕಂಡು ಕಂಡುಂ
ನಿತ್ಯತ್ವಂಬೆತ್ತ ಪಾಂಗಿಂ ಪಳಿವ ಮುಳಿವ ಕಾಮಿಪ್ಪ ಕೋಪಿಪ್ಪ ಲೋಭಿ-
ಪ್ಪತ್ಯಂತಂ ಗರ್ವಿಪೆನ್ನೀ ಮನಕೆ ಪರಮ ವೈರಾಗ್ಯಮಂ ಕೊಟ್ಟು ಸತ್ಯಂ
ಸತ್ಯಂ ಸತ್ಯಾತ್ರ ಪಂಪಾಪುರವರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೧೩

ಅರ್ಥ : ಪ್ರತ್ಯಕ್ಷಂ= ಕಣ್ಣೆದುರಿನಲ್ಲಿಯೇ; ನರನಿಕರಂ= ಮನುಷ್ಯನಸಮೂಹವು ಸತ್ತುಹೋಗುತ್ತಿದೆ; ತಾನಿದಂ= ಮನುಷ್ಯ ಇದನ್ನು ಕಂಡುಕಂಡೂ; ನಿತ್ಯತ್ವಂಬೆತ್ತ

ಶಾಂಗಿಂ= ಶಾಶ್ವತೆಯುನ್ನು ಪಡೆದ ರೀತಿಯುಲ್ಲಿ ಪಳಿವ= ನಿಂದಿಸುವ; ಕಾಮಿಪ್ಪ= ಕಾ
ಮಿಸುವ; ಕೋಪಿಪ್ಪ= ಕೋಪಿಸುವ; ಲೋಭಿಪ್ಪ= ಲೋಭಪಡುವ; ಅತ್ಯ
ಗರ್ವಿಪ್ಪ= ಅತ್ಯಂತ ಗರ್ವಪಡುವ ಎನ್ನೀ= ನನ್ನ ಈ ಮನಸ್ಸಿಗೆ ಪರಮ ವೈರಾಗ್ಯ
=ಶ್ರೇಷ್ಠವೈರಾಗ್ಯವನ್ನು ಕೊಟ್ಟು ಸತ್ಯಂಸತ್ಯಂ=ಸತ್ಯವಾಗಿಯೂ ಶಾಶ್ವತವಾದ ಸತ್ಯ
ಸತ್ಯಾತ್ಮ=ಸತ್ಯವೇ ಆತ್ಮವಾದ ಪಂಪಾಪುರದರಸ ನೀನು ಎನ್ನನ್ನು ರಕ್ಷಿಸು.

ಭಾವಾರ್ಥ: ಮಾನವಕೋಟಿಯೆಲ್ಲವೂ ದಿನದಿನವೂ ಕಣ್ಣೆದು
ಲ್ಲೇ ಸತ್ತು ಹೋಗುವುದನ್ನು ಕಂಡೂಕಂಡು, ನಿತ್ಯತೆಯನ್ನು ಹೊಂದಿ
ರೀತಿಯಲ್ಲಿ ಇತರರನ್ನು ನಿಂದಿಸಿ, ಇತರರಮೇಲೆ ಕೋಪಗೊಂಡು ಆಸೆಮಾಡಿ
ಅದುಬೇಕು, ಇದುಬೇಕು ಎಂದು ಲೋಭಗೊಂಡು ಗರ್ವಿಸುವ ಎನ್ನ ಈ
ಮನಸ್ಸಿಗೆ ಶ್ರೇಷ್ಠವಾದ ವೈರಾಗ್ಯವನ್ನು ಕೊಟ್ಟು ನಿತ್ಯನೂ ಶಾಶ್ವತನೂ
ಸತ್ಯಸ್ಯ ಸತ್ಯನೂ ಆದ ಸತ್ಯಾತ್ಮನಾದ ಪಂಪಾಪುರದ ಒಡೆಯನಾದ ನೀನು
ನನ್ನನ್ನು ರಕ್ಷಿಸು.

ಟಿಪ್ಪಣಿ : ಮಹಾಭಾರತದ ಯಕ್ಷಪಶ್ನೆಯ ಪ್ರಸಂಗದಲ್ಲಿ ಒಂದು
ಅತ್ಯಂತ ಸತ್ಯವಾದ, ಸ್ವಾರಸ್ಯವಾದ ಪ್ರಶ್ನೆಯನ್ನು ಯಕ್ಷ ಕೇಳುತ್ತಾನೆ
'ಧರ್ಮರಾಜ, ಜಗತ್ತಿನಲ್ಲಿ ಅತ್ಯಂತ ಆಶ್ಚರ್ಯಕರವಾದ ಸಂಗತಿಯೇನು ?'
ಎಂಬುದೇ ಆ ಪ್ರಶ್ನೆ. ಇದಕ್ಕೆ ಧರ್ಮರಾಜ ಕೊಡುವ ಉತ್ತರ ಇದು:
'ಚಣಚಣವೂ ಜನರು ಮೃತ್ಯುವಶವಾಗುತ್ತಿದ್ದರೂ, ತಾವು ನಿತ್ಯ
ಎಂಬಂತೆ ವರ್ತಿಸುತ್ತಿದ್ದಾರಲ್ಲ, ಅದೇ ಜಗತ್ತಿನಲ್ಲಿ ಅತ್ಯಂತ ಆಶ್ಚರ್ಯಕ
ವಾದ ಸಂಗತಿ' ಯಕ್ಷ ಮತ್ತು ಧರ್ಮರಾಜರ ಈ ಪ್ರಶ್ನೋತ್ತರ ವ್ಯಕ್ತಪಡಿಸು
ಸತ್ಯವನ್ನು ಎಷ್ಟೆಷ್ಟು ಯೋಚಿಸಿದರೆ, ಅಷ್ಟಷ್ಟು ಶ್ರೇಷ್ಠತರವಾದ ಸತ್ಯವ
ಅನುಭವವಾಗುತ್ತದೆ ನಮಗೆ. ಜಗತ್ತಿನಲ್ಲಿ ಸಾವಿಗಿಂತ ಸಾಧಾರಣ ಸುದ್ದಿ
ಘಟನೆ ಇನ್ನೊಂದಿಲ್ಲ ಎನ್ನಬಹುದು. ನಾವು ಉಸಿರೆಳೆಯುವಾಗ ಸಾವನ್ನ
ಒಂದು ತುತ್ತು ತಿನ್ನುತಿದ್ದೇವೆ. ಅನ್ನವನ್ನು ಉಣ್ಣುವಾಗಲೂ ಅನ್ನಸತ್ತು
ಚೈತನ್ಯವಾಗುತ್ತದೆ. ಎಲೆ ಉದುರಿದಾಗಲೂ ಆ ಸಾವೇ ಸಂಭವಿಸುತ್ತದೆ
ಹೆಜ್ಜೆಹೆಜ್ಜೆಗೂ, ಕಣ್ಣು ಹೊರಳಿಸುತ್ತ, ಕಿವಿ ನಿಮಿರಿಸಿದತ್ತ ಎಲ್ಲೆಲ್ಲೂ ಸಾ

ಎದ್ದು ಕಾಣುತ್ತದೆ. ಬಹುಶಃ ಸಾವಿನಷ್ಟು ನಿಕಟಪರಿಚಿತದ ಘಟನೆ ಮತ್ತೊಂದು ಇಲ್ಲನೇ ಇಲ್ಲ ವೆನ್ನಬಹುದು. ಸತ್ತ ಸುದ್ದಿ ಹರಡುವಷ್ಟುಬೇಗ ಹುಟ್ಟಿದ ಸುದ್ದಿ ಹರಡುವುದಿಲ್ಲ. ಈ ದೃಷ್ಟಿಯಿಂದಲೂ ಸಾವಿಗೇ ಪ್ರಾಧಾನ್ಯತೆ !

ಆದರೆ, ಆ ಸಾವಿಗಾಗಿ ಜನ ಅಂಜುವರೀತಿಯಂತೂ ಇನ್ನೂ ವಿಚಿತ್ರ ವಾಗಿದೆ. ಸಾವಿನಿಂದ ದೂರದೂರ ಓಡಲೆಂದೇ ಮನಸ್ಯ ತಿನ್ನುತ್ತಾನೆ, ಕುಡಿ ಯುತ್ತಾನೆ, ಕುಣಿಯುತ್ತಾನೆ, ಮಜಾಮಾಡುತ್ತಾನೆ. ಸಾವನ್ನು ಮರೆಯ ಲೆಂದೇ ಏನೇನೋ ಮಾಡುತ್ತಾನೆ. ಆದರೆ, ಸಾವು ಬಂದೇಬರುತ್ತದೆ. ಹೀ ಗಿದ್ದೂ ಕೂಡ, ಜನ ಸಾಯುವುದೇ ಇಲ್ಲ ಎಂಬಂಥ ರೀತಿಯಲ್ಲಿ ಪರರನ್ನು ನಿಂದಿಸುತ್ತಾರೆ, ಪರರೊಡನೆ ಕಾದಾಡುತ್ತಾರೆ, ಕೋಪಿಸುತ್ತಾರೆ. ಏನೇನೋ ಮಾಡುತ್ತಾರೆ. ಇದು ನಿಜವಾಗಿಯೂ ಆಶ್ಚರ್ಯದ ಸಂಗತಿಯೇ.

ಕೊನೆಗೆ ಈ ಬಾಳಿನ ಕ್ಷಣಿಕತೆಯನ್ನು ಲೋಕಕ್ಕೆ ಅರಿವು ಮಾಡಿಕೊ ಡುವುದೂ ಈ ಸಾವೇ ! ಸಿದ್ಧಾರ್ಥನು ಈ ಲೋಕವನ್ನೇ ತ್ಯಜಿಸುವಂಥ ತೀವ್ರ ವೈರಾಗ್ಯವನ್ನು ಹುಟ್ಟಿಸಿದ್ದೂ ಈ ಸಾವೇ! ಆದ್ದರಿಂದಲೇ ವೈರಾಗ್ಯ ವನ್ನು ಬೋಧಿಸುವವರೆಲ್ಲರೂ ಸಾವನ್ನು ಮುಂದಿಟ್ಟು ವೈರಾಗ್ಯದ ಪರಿಚಯ ಮಾಡಿಕೊಡುತ್ತಾರೆ. ವೈರಾಗ್ಯದ ರಾಯಭಾರಿ ಈ ಮೃತ್ಯು !! ವೈರಾಗ್ಯ ಉಂಟಾಯಿತೆಂದರೆ ಇನ್ನು ಸುಗತಿ ದೂರವಿಲ್ಲ.

ವೈರಾಗ್ಯ ಮತ್ತು ಅಭ್ಯಾಸದ ವಿಚಾರ ಗೀತೆಯ ಆರನೆಯ ಅಧ್ಯಾಯ ದಲ್ಲಿ ಬರುವುದೆಂದು ಈ ಹಿಂದೆ ಹೇಳಿದೆ. ಆಚಾರ್ಯ ವಿನೋಬಾ ವೈರಾಗ್ಯ ಮತ್ತು ಅಭ್ಯಾಸದ ವಿಚಾರವಾಗಿ ಹೀಗೆ ಹೇಳುತ್ತಾರೆ :—

"ವೈರಾಗ್ಯ – ಅಭ್ಯಾಸ ಒಂದು ವಿಧ್ವಂಸಕ, ಇನ್ನೊಂದು ವಿಧಾಯಕ. ಹೊಲದಲ್ಲಿರುವ ಹುಲ್ಲು ಕೊಯ್ದು ಬಿಸುಡುವುದು ವಿಧ್ವಂಸಕ ಕೆಲಸ. ಅದಕ್ಕೆ ವೈರಾಗ್ಯ ಎನ್ನುವುದು. ಬಿತ್ತುವುದು ವಿಧಾಯಕ ಕೆಲಸ. ಮನ ಸ್ಸಿನಲ್ಲಿ ಸದ್ವಿಚಾರಗಳನ್ನು ಕುರಿತು ಮತ್ತೆ ಮತ್ತೆ ಯೋಚಿಸುವುದು ಅಭ್ಯಾಸ.

ವೈರಾಗ್ಯ ವಿಧ್ವಂಸಕ ಕ್ರಿಯೆ. ಅಭ್ಯಾಸ ವಿಧಾಯಕ ಕ್ರಿಯೆ." * ಮನಸ್ಸೆಂಬ ಹೊಲದಿಂದ ತಮಃಪ್ರವೃತ್ತಿಯೆಂಬ ಹುಲ್ಲನ್ನು ಕೊಯ್ದು ಹಾಕಲು ವೈರಾಗ್ಯ ನೆರವಾಗಬೇಕು. ಸತ್ ಪ್ರವೃತ್ತಿಗಳನ್ನು ಬೆಳೆಸಿಕೊಳ್ಳಬೇಕೆಂಬುದು ಅಭ್ಯಾಸ.

## ವೃತ್ತ : ೧೪

ಇನಿತುಂ ವೈರಾಗ್ಯದತ್ತಲ್ ನೆನೆಯದೆ ಮದದತ್ತಲ್ ಮಹಾಮೋಹದತ್ತಲ್
ಧನದತ್ತಲ್ ಧಾನ್ಯದತ್ತಲ್ ಸತಿಸುತಪಿತರತ್ತಲ್ ಸದಾ ಲೋಭದತ್ತಲ್
ನೆನೆಯುತ್ತಿರ್ದಪ್ಪುದೆನ್ನೀ ಮನವಿದನೆಡೆಗೊಂಡಳ್ಕರಿಂ ದೇವ ನೀವಿಂ-
ತೆನಿತುಂ ತೀವಿರ್ದ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೧೪

ಅರ್ಥ : ಇನಿತುಂ= ಒಂದು ಕಿಂಚಿತ್ತಾದರೂ; ವೈರಾಗ್ಯದತ್ತಲ್= ವೈರಾಗ್ಯದ ಕಡೆ ನೆನೆಯದೆ; ಮದದತ್ತಲ್= ಮದದ ಕಡೆಗೆ, ಮಹಾಮೋಹದತ್ತಲ್= ಮಹಾಮೋಹದ ಕಡೆಗೆ; ಧನದತ್ತಲ್= ಸಂಪತ್ತಿನ ಕಡೆಗೆ; ಧಾನ್ಯದತ್ತಲ್= ಧಾನ್ಯದ ಕಡೆಗೆ; ಸತಿಸುತಪಿತರತ್ತಲ್ =ಮಡದಿಮಕ್ಕಳು ತಂದೆಯರ ಕಡೆಗೆ; ಸದಾ= ಯಾವಾಗಲೂ; ಲೋಭದತ್ತಲ್= ದುರಾಶೆಯ ಕಡೆಗೇ; ನೆನೆಯುತ್ತಿರ್ದಪ್ಪುದು= ಲಕ್ಷ್ಯಕೊಡುತ್ತಿರುವುದು; ಎನ್ನ ಈ ಮನಂ= ಮನಸ್ಸು; ಇದನ್= ಇದನ್ನು; ಎಡೆಗೊಂಡು= ಒಂದೆಡೆಗೆ ನಿಲ್ಲಿಸಿ; ಸ್ಥಿರಗೊಳಿಸಿ; ಅಳ್ಕರಿಂ= ಪ್ರೀತಿಯಿಂದ; ದೇವರೇ; ನೀವು ಇಂತೆನಿತುಂ= ಹೀಗೆ ಎಷ್ಟಾದರೂ ತೀವಿರ್ದ= (ನನ್ನದೆಯನ್ನು) ತುಂಬಿಕೊಂಡಿದ್ದು ಹಂಪೆಯೊಡೆಯನಾದ ವಿರೂಪಾಕ್ಷಸ್ವಾಮಿಯೇ ನನ್ನನ್ನು ರಕ್ಷಿಸು.

ಭಾವಾರ್ಥ: ಒಂದಿಷ್ಟಾದರೂ ಈ ಮನಸ್ಸು ವೈರಾಗ್ಯದತ್ತ ಲಕ್ಷ್ಯ ಹಾಕುವುದೇಯಿಲ್ಲ. ತದ್ವಿರುದ್ಧವಾಗಿ ಮದಮೋಹ, ಧನಧಾನ್ಯ, ಸತಿಸುತ

* ಗೀತಾಪ್ರವಚನ. ಅನು ಶ್ರೀ ಸಿದ್ಧವನಹಳ್ಳಿ ಕೃಷ್ಣಶರ್ಮ (ಮೂರನೆ ಮುದ್ರಣ) ಪುಟ ೮೩.

ನಿಶ್ಚರಕಡೆಗೇ ಈ ಮನಸ್ಸೆಲ್ಲವೂ ಹರಿಯುತ್ತಿದೆ. ಇಂಥ ಮನಸ್ಸನ್ನು ಸರಿಗೆ ನಿಲ್ಲಿಸಿ ಪ್ರೀತಿಯಿಂದ ನೋಡಿ ನನ್ನನ್ನು ರಕ್ಷಿಸು ವಿರೂಪಾಕ್ಷ ಸ್ವಾಮಿಯೇ.

ಟಿಪ್ಪಣಿ: ಒಂಟೆ ಮುಳ್ಳಿನಗಿಡವನ್ನು ತಿನ್ನುತ್ತದೆ. ಬಾಯಿಯಿಂದ ರಕ್ತ ಸುರಿಯುತ್ತದೆ. ಆದರೂ ಒಂಟೆ ಮುಳ್ಳಿನಗಿಡವನ್ನು ಬಿಟ್ಟು ಬೇರೆಯ ಗಿಡಕ್ಕೆ ಬಾಯಿ ಹಾಕುವುದಿಲ್ಲ. ಹಾಗೆಯೇ ಮನುಷ್ಯ ಅರಿಷಡ್ವರ್ಗವೆಂಬ ಮುಳ್ಳುಗಿಡವನ್ನು ತಿನ್ನುತ್ತಾನೆ. ಅದರಿಂದ ಅನಂತ ಕಷ್ಟನಷ್ಟಗಳನ್ನು ಅನುಭವಿಸುತ್ತಾರೆ. ಬಾಯಿಂದ ರಕ್ತ ಸೋರಿದರೂ ಹೇಗೆ, ಒಂಟೆ ಆ ಮುಳ್ಳುಗಿಡವನ್ನು ಬಿಟ್ಟು ಬೇರೆಯ ಗಿಡವನ್ನು ತಿನ್ನಲು ಮನಸ್ಸುಮಾಡುವುದಿಲ್ಲವೋ ಹಾಗೆಯೇ ಈ ಮನಸ್ಸೆಂಬ ಒಂಟೆಯೂ ಕೂಡ ರಕ್ತ ಸುರಿದರೂ ಅದೇ ಮುಳ್ಳುಗಿಡ (ಅರಿಷಡ್ವರ್ಗಗಳನ್ನೇ) ನೆನೆಯುತ್ತದೆ ಅತ್ತಕಡೆಗೇ ಸೆಳೆಯುತ್ತದೆ. ಇಂಥ ಈ ಮನಸ್ಸನ್ನು ಪಳಗಿಸುವ ಮಾವುತ ಪಂಪಾಪುರದರಸನೇ. ಆವನೇ ಇದನ್ನು ಅಧೀನದಲ್ಲಿಟ್ಟುಕೊಂಡಿರಬಲ್ಲ.

## ವೃತ್ತ: ೧೫

ಸುವಿಚಾರಕ್ಕೊರ್ಮೆಯುಂ ಸೇರದು ನಡೆಯಿಪುದತ್ಯಾಗ್ರಹವ್ಯಾಪ್ತಿಯಿಂ ತಾ-
ನವಿಚಾರಕ್ಕೆಂದೊಡೆಂಟಂ ನಿಮಿರ್ಪುದು ಬಯಲಂ ಭಾವಿಸುತ್ತಿರ್ಪುದಾತ್ಮೋ-
ದ್ಭವಮೂಲಚ್ಛೇದನೋಪಾಯವನೆಣಿಸದು ಮದ್ ಬುದ್ಧಿಯೀ ಬುದ್ಧಿಯಂ ಶಂ-
ಭುವೇ ನೆಂತಂ ಮಾಡಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೧೫

ಅರ್ಥ: ಸುವಿಚಾರಕ್ಕೆ= ಒಳ್ಳೆಯ ವಿಚಾರಕ್ಕೆ; ಒರ್ಮೆಯುಂ= ಒಮ್ಮೆಯೂ ಸೇರದು; ಅತ್ಯಾಗ್ರಹ= ಅತಿಯಾದ ಆಗ್ರಹದ; ವ್ಯಾಪ್ತಿಯಿಂ= ವಿಸ್ತಾರದಿಂದ; ನಡೆಯಿಪುದು= ನಡೆಸುತ್ತದೆ; ತಾನ್= ಆ ಬುದ್ಧಿಯು; ಅವಿಚಾರಕ್ಕೆ ಎಂದೊಡೆ= ಎಂದರೆ ಕೆಡುಕಿಗೆ; ಎಂಟಂ= ಸೊಕ್ಕಿನಿಂದ; ನಿಮಿರ್ಪುದು= ಹೆಡೆಎತ್ತಿ ನಿಲ್ಲುವುದು; ಬಯಲಂ= ಸತ್ಯವಲ್ಲದುದನ್ನು; ನೆರಳಿನೋಪಾದಿಯಲ್ಲಿರುವ ಹುಸಿಯನ್ನು ಭಾವಿಸುತ್ತಿರ್ಪುದು= ನಂಬಿಕೊಂಡಿದೆ; ಆತ್ಮೋದ್ಭವಂ= ಕಾಮದ, ಮೂಲ= ಬೇರನ್ನು; ಛೇದನ=

ಕತ್ತರಿಸುವುದರ; ಉಪಾಯುವನ್ನು= ಮಾರ್ಗವನ್ನು; ಎಡೆಸದು= ಕುರಿತು ಯೋಚಿ ಸುವುದೇಯಿಲ್ಲ; ಮದ್= ನನ್ನಬುದ್ಧಿ; ಈ ಬುದ್ಧಿಯುಂ= ಬುದ್ಧಿಯನ್ನು; ಶಂಭುವೇ= ಶಿವನೇ; ಸಂತಂ= ಸಂತಸ; ಮಾಡಿ= ಗೊಳಿಸಿ ಪಂಪಾಪುರದರಸ ವಿರೂಪಾಕ್ಷಸ್ವಾಮಿಯೇ! ನನ್ನನ್ನು ರಕ್ಷಿಸು.

**ಭಾವಾರ್ಥ:** ನನ್ನ ಬುದ್ಧಿಯು ಒಮ್ಮೆಯೂ ಒಳ್ಳೆಯ ವಿಚಾರ ಗಳಿಗೆ ಸೇರದ; ಅತ್ಯಂತ ಆಗ್ರಹದಿಂದ ನಡೆಯುತ್ತಿದೆ. ಅವಿಚಾರ ಸತತ್ ಕಾರ್ಯಕ್ಕೆ ಎಂದರೆಮಾತ್ರ ಸೋಕಿನಿಂದ ನಡೆದುನಿಂತು ಮುಂದುವರಿಯು ವುದು. ಅನಿತ್ಯವಾದುದನ್ನು, ಹುಸಿಯಾದುದನ್ನೇ ನಂಬಿಕೊಂಡಿದೆ. ಕಾಮ ದ ಬೇರನ್ನು ಕತ್ತರಿಸುವ ಪರಿ ಯಾವುದೆಂದು ಯೋಚಿಸುವುದೇಯಿಲ್ಲ. ಇಂಥ ನನ್ನ ಈ ಬುದ್ಧಿಗೆ ಸಮಾಧಾನವನ್ನುಂಟುಮಾಡಿ ರಕ್ಷಿಸು ಓ ವಿರೂಪಾಕ್ಷ ಸ್ವಾಮಿಯೇ!

**ಟಿಪ್ಪಣಿ:** ಈ ಹಿಂದಿನ ಪದ್ಯಗಳಲ್ಲಿ ಮನದ ಮಲಿನ ವ್ಯಾಪಾ ವನ್ನು ಕುರಿತು ಕವಿ ನಿವೇದಿಸಿಕೊಳ್ಳುತ್ತಾನೆ. ಇಲ್ಲಿ ಬುದ್ಧಿಯ ಮಂಗತನ ವನ್ನು ಕುರಿತು ತೋಡಿಕೊಳ್ಳುತ್ತಾನೆ. ಮನಸ್ಸು ಹೃದಯದಿಂದ ಹೊ ಮ್ಮುತ್ತದೆ; ಬುದ್ಧಿ ಮೆದುಳಿನಿಂದ ಸ್ಫುರಿಸುತ್ತದೆ. ಮನಸ್ಸು ಕುದುರೆಯಂ ಎಂದು ಭಾವಿಸಿದರೆ ಬುದ್ಧಿ ಅವರ ಅಡಿವಾಣ. ಅದನ್ನು ಹತ್ತಿ ನಡೆಸು ಸವಾರನೇ ಈ ಆತ್ಮ. ಆದರೆ, ಅನೇಕರು ಲಗಾಮಿಲ್ಲದ ಕುದುರೆಯಂ ಬಾಳುತ್ತಾರೆ. ಯುಕ್ತಾಯುಕ್ತ, ಯೋಗ್ಯಾಯೋಗ್ಯ, ಸತ್ ಅಸತ್- ಎಂಬ ವಿವೇಚನೆಮಾಡುವ ಕೆಲಸ ಬುದ್ಧಿಯದು. ಮನಸ್ಸಿಗೆ ಆ ವಿವೇ ನೆಯಿಲ್ಲ. ಮನಸ್ಸು ಸರಿಯಾದುದನ್ನೇ ಬಯಸುವಂತೆ ಅವನ್ನು ಸಂಸ್ಕರಿಸ ವ ಕಾರ್ಯ ಬುದ್ಧಿಯದು. ಅಂಥ ಬುದ್ಧಿಯೂಕೂಡ ಅಂಕೆದಪ್ಪಿ ಓಡು ತ್ತದೆ. ಸದ್ವಿಚಾರಕ್ಕೆ ಮನವನ್ನೇ ಕೊಡುವುದಿಲ್ಲ ಈ ಬುದ್ಧಿ. ಆದ ಆ ವಿಚಾರಕ್ಕೆಂದರೆ 'ಛೈ' ಎಂದು ಕುಣಿದು ಹೋಗುತ್ತದೆ. ಸತ್ಯವಾವುದು ಅಸತ್ಯವಾವುದು ಎಂಬ ವಿವೇಚನೆ ಬಿಟ್ಟು, ಅಸತ್ಯವನ್ನೇ ನಂಬಿ ಕಾಮ ಬೇರನ್ನು ಕಿತ್ತೆಸೆವ ಉಪಾಯವನ್ನು ಹುಡುಕದೇ ತಡವರಿಸುವ ಈ ಬುದ್ಧಿ ಯು ಉದ್ಧಾರವಾಗಬೇಕಾದರೆ ವಿರೂಪಾಕ್ಷೇಶ್ವರನ ಕೃಪೆಯಾಗಲೇಬೇಕು

## ವೃತ್ತ : ೧೬

ಇನಿತುಂ ತಾನಲ್ಲದಾರಂ ಬಗೆಯದು ಮದಮಂ ಗರ್ವಮಂ ಕೂಡಿಕೊಂಡಿ-
ರ್ದೆನಿತುಂ ಮುಂಗಾಣದತ್ಯುದ್ಧತತರಮುಖಮಾಗಿರ್ಪುದೋರಂತೆ ವಿದ್ವ-
ಜ್ಜನಮಂ ಕೈಕೊಳ್ಳದೆನ್ನೀ ಮನದೊಡತನಹಂಕಾರಮಿಂತಿಂತಿದಂ ದೇ-
ವನೆ ನೀಂ ತಗ್ಗೊತ್ತಿ ಪಂಪಾಪುರವರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೧೬

ಅರ್ಥ : ಇನಿತುಂ= ಕಿಂಚಿತ್ತಾದರೂ; ತಾನಲ್ಲದೆ= ತನ್ನನ್ನಲ್ಲದೆ; ಆರಂ= ಯಾರನ್ನೂ; ಬಗೆಯದು= ಗಣನೆಯನ್ನೇ ಮಾಡುವುದಿಲ್ಲ; ಮದಮಂ= ಮದವನ್ನು; ಗರ್ವಮಂ= ಗರ್ವವನ್ನು; ಕೂಡಿಕೊಂಡಿರ್ದು= ಕೂಡಿಕೊಂಡಿದ್ದು; ಎನಿತುಂ = ಕಿಂಚಿತ್ತಾದರೂ; ಮುಂಗಾಣದೆ= ಮುಂದಾಲೋಚನೆಯಿಲ್ಲದೆ; ಅತ್ಯುದ್ಧತತರಮುಖಮಾಗಿ ರ್ಪುದು= ಅತ್ಯಂತ ಉದ್ಧಟತನಕ್ಕೆ ಮುಖಗೊಟ್ಟು; ಓರಂತೆ= ಚೆನ್ನಾಗಿ; ವಿದ್ವಜ್ಜನ ಮಂ= ವಿದ್ಯಾವಂತರನ್ನು ಕೈಕೊಳ್ಳದೆ= ಸನ್ಮಾನಿಸದೆ; ಎನ್ನೀಮನದ= ಎನ್ನ ಈ ಮನದ; ಒಡೆತನ= ಒಡೆತನವನ್ನು; ಆಳಿಕೆಯನ್ನು= ನಡೆಸುತ್ತಿರುವ; ಅಹಂಕಾರದಿ= ಅಹಂಕಾರವು; ಇಂತಿಂತಿದಂ= ಇಂತು ಇಂತು ಇದನ್ನು; ದೇವನೆ ನೀಂ= ನೀನು ತಗ್ಗೊತ್ತಿ= ಅಹಂಕಾರವನ್ನು ಅದುಮಿಟ್ಟು ಪಂಪಾಪುರದರಸ ವಿರೂಪಾಕ್ಷ ಸ್ವಾಮಿಯೇ ಎನ್ನನ್ನು ರಕ್ಷಿಸು.

ಭಾವಾರ್ಥ: ಈ ಮನದ ಆಡಳಿತೆಯನ್ನು ನಡೆಸುತ್ತಿರುವ ನನ್ನ ಈ ಅಹಂಕಾರವು, ತನ್ನನ್ನು ಹೊರತಾಗಿ ಮತ್ತಾರನ್ನೂ ಕಿಂಚಿತ್ತಾದರೂ ಗಣನೆಗೆ ತಂದುಕೊಳ್ಳುವುದಿಲ್ಲ. ಮದದಿಂದ ಕೂಡಿದ್ದು ಮುಂದಾಲೋಚನೆಯೇ ಯಿಲ್ಲದೆ ಅತ್ಯಂತ ಉದ್ಧಟತನಕ್ಕೆ ಮುಖವಿಟ್ಟಿದೆ. ಅದೇ ರೀತಿಯಲ್ಲಿ ವಿದ್ವಜ್ಜನವನ್ನೂ ಲಕ್ಷ್ಯಕ್ಕೆ ತಂದುಕೊಳ್ಳದು. ಇಂಥಹ ಅಹಂಕಾರದಿಂದ ಕೂಡಿದ ಈ ಅಹಂಕಾರವನ್ನು ಭಗ್ನಗೊಳಿಸಿ ಕಾಪಾಡು ಸ್ವಾಮಿ ಪಂಪಾಪುರ ದರಸನೇ.

ಟಿಪ್ಪಣಿ : ಆತ್ಮನ ಸ್ವಸ್ವರೂಪವನ್ನು ಮರೆಮಾಜಿರುವ ಪ್ರಬಲವಾದ ಅಂಶ ಅಹಂಕಾರ; ಪ್ರತ್ಯೇಕತಾಭಾವನೆ. ನಾನು ಇನ್ನೆಲ್ಲರಿಗಿಂತ ಬೇರೆ,

ಮೇಲು, ಶ್ರೇಷ್ಠ ಎಂಬ ಭಾವನೆಯೇ ಬಂಧನದಮೂಲ. 'ಅಹಂ' ಎಂಬು
ದು ಪ್ರಬಲವಾದ ಬಂಧನ. ಅದು ಕಳಚವ ಹೊರತು ಸಾಧಕನಿಗೆ ಅನ್ಯ
ಮಾರ್ಗವೇ ಯಿಲ್ಲ. ನಾನೆಂಬುದಳಿದಾಗಲೇ ಮುಕ್ತಿ.

ವೃತ್ತ: ೧೭

ಧನದೊಳ್ ಧಾನ್ಯಂಗಳೊಳ್ ಭೂಷಣವಿತತಿಗಳೊಳ್ ಪುತ್ರಸಂತಾನದೊಳ್
ಭೋ
ಕನಿಕಾಯಭ್ರಾಂತಿಯೊಳ್ ಕಾಂತೆಯರ ತನುಸುಖಚ್ಛಾಯೆಯೊಳ್
ಮಾಯೆಯೊಳ್ ನಿಂ
ದೆನಸುಂ ನಟ್ಟಿರ್ದ ಮಚ್ಚಿತ್ತಮನಭವ ನಿಜಾಂಘ್ರಿದ್ವಯಧ್ಯಾನಸಾನಂ
ದನಿವಾಸಂ ಮಾಡಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೧

ಅರ್ಥ : ಧನದೊಳ್ =ಹಣದಲ್ಲಿ: ಧಾನ್ಯಂಗಳೊಳ್= ಧಾನ್ಯದಲ್ಲಿ; ಭೂಷಣವಿ
ತಿಗಳೊಳ್= ಒಡವೆ, ಮತ್ತಿತರ ಅಲಂಕಾರ ವಸ್ತುಗಳ ಸಮೂಹದಲ್ಲಿ; ಪುತ್ರ ಸಂತಾ
ನದಲ್ಲಿ; ಭೋಗನಿಕಾಯ ಭ್ರಾಂತಿಯೊಳ್= ಭೋಗವಸ್ತುಗಳ ಸಮೂಹದ ಭ್ರಾಂತಿದ
ಲ್ಲಿ; ಕಾಂತೆಯರ= ಹೆಣ್ಣಿನ; ತನುಸುಖ= ಸಂಗಸುಖದ; ಛಾಯೆಯೊಳ್= ನೆರ
ಳಲ್ಲಿ; ಮಾಯೆಯೊಳ್= ವಾಸ್ತವವಲ್ಲದವುಗಳಲ್ಲಿ; ನಿಂದು= ನಿಂತುಕೊಂಡು; ಎನಸುಂ=
ಎಷ್ಟೊ ಆಳವಾಗಿನೆಟ್ಟಿರ್ದ= ಬೇರೂರಿರುವ; ಮತ್= ನನ್ನ; ಚಿತ್ತಮಂ= ಚಿತ್ತವ
ನ್ನು; ನಿಜ= ನಿನ್ನ; ಅಂಘ್ರಿ= ಪಾದಗಳ; ದ್ವಯ= ಜೊತೆಯು; ಧ್ಯಾನ= ಧ್ಯಾನದಲ್ಲಿ;
ಸಾನಂದ= ಅತ್ಯಂತ ಆನಂದದಿಂದ; ನಿವಾಸಂ= ನೆಲೆಸುವಂತೆ ಮಾಡಿ ಪಂಪಾಪುರದ
ಒಡೆಯನಾದ ವಿರೂಪಾಕ್ಷಸ್ವಾಮಿಯೇ ನನ್ನನ್ನು ರಕ್ಷಿಸು.

ಭಾವಾರ್ಥ : ಧನ, ಧಾನ್ಯ, ಆಭರಣ, ಅಲಂಕಾರವಸ್ತು, ಪುತ್ರ
ಸಂತಾನ ಬೋಗಗಸ್ತುಗಳು, ಹೆಣ್ಣಿನ ಸಂಗಸುಖದ ಮಾಯೆಯಲ್ಲೇ ಆಳ
ವಾಗಿ ಬೇರೂರಿದ ನನ್ನ ಚಿತ್ತವು ನಿನ್ನ ಪಾದಗಳ ಧ್ಯಾನದಲ್ಲಿ ನೆಲೆಸುವಂತೆ
ಮಾಡಿ ನನ್ನನ್ನು ರಕ್ಷಿಸು ವಿರೂಪಾಕ್ಷಸ್ವಾಮಿ.

ಟಿಪ್ಪಣಿ : ನಾವು ಭಗವಂತನ ಕರುಣೆಗೆ ಕೃಪೆಗೆ ಪಾತ್ರರಾಗಬೇಕಾ

ದರೆ ಕೇವಲ ತನುಮನ ಬುದ್ಧಿಯನ್ನು ಮಾತ್ರ ಶುಚಿಗೊಳಿಸಿದರೆ ಸಾಲದು. ತನುಮನಗಳ ಶುಚಿಯೂ ಅಗತ್ಯ. ಅವರೆ ಅಷ್ಟೇಸಾಲದು ಚಿತ್ತವೂ ಶುದ್ಧಿಯಾಗಬೇಕು. ಈ ಹಿಂದಿನ ವೃತ್ತಗಳಲ್ಲಿ ತನುಮನ ಬುದ್ಧಿಗಳ ಪರಿಶುದ್ಧತೆಗಾಗಿ ಹಂಬಲಿಸಿದ ಸಾಧಕವರೇಣ್ಯ ಮಹಾಕವಿ ಹರಿಹರ ಇಲ್ಲಿ ಇನ್ನು ಒಂದು ಹೆಚ್ಚು ಮುಂದುವರಿದಿದ್ದಾನೆ. ಈ ಚಿತ್ತಯಾವಾಗಲೂ ವಿಷಯಾಸಕ್ತವಾಗಿದೆ. ವಿಷಯದಲ್ಲೇ ರಮಿಸುತ್ತದೆ. ಹಂದಿ ಮಲಕೂಪದಲ್ಲೇ ಆನಂದಪಟ್ಟು ವಿಹರಿಸುವಂತೆ. ಆದರೆ ಚಿತ್ತಶುದ್ಧಿ ಯಿಲ್ಲದವನ ಬಾಳು ಮೇಲೆಮೇಲೆ ನೋಡಲು ಎಷ್ಟೇ ಸುಂದರವಾಗಿ ತೋರಿದರೂ ಅದು ನಿಜವಾಗಿಯೂ ಅಂತರಂಗದಲ್ಲಿ ಕುರೂಪವಾಗಿದೆ. ಅದನ್ನೇ ಭಕ್ತಿಭಂಡಾರಿ ಬಸವಣ್ಣನವರು : "ಎನ್ನ ಚಿತ್ತವು ಅತ್ತಿಯಹಣ್ಣು ಕಾಣ" ಎಂದು ಹೇಳಿದ್ದಾರೆ. ಅತ್ತಿಯಹಣ್ಣು ನೋಡಲು ಬಹುಸುಂದರ ! ಮೇಲೆ ಎಷ್ಟು ಮೃದು ಎಷ್ಟು ಮನೋಹರ; ಎಂಥ ಆಕರ್ಷಕವಾದ ಕೆಂಬಣ್ಣ. ಆದರೆ ಅದನ್ನು ಒಡೆದು ನೋಡಿದರೆ ಹುಳ ಪಿತಿಗುಟ್ಟುತ್ತವೆ ! ಅದನ್ನು ಮುಟ್ಟಲೂ ಹೇಸಿಕೆಯಾಗುತ್ತದೆ. ಹಾಗೆಯೇ ತನುಮನಗಳಿಂದ ಶುದ್ಧನಾಗದವನ ಬಾಳು ಅತ್ತಿಯಹಣ್ಣಿನಂತಹದು.

ಗೀತೆಯಲ್ಲೂ ಚಿತ್ತದ ಏಕಾಗ್ರತೆಯವಿಚಾರ ಆರನೆಯ ಅಧ್ಯಾಯದಲ್ಲಿ ವಿವರವಾಗಿಯೇ ಸಿಕ್ಕುತ್ತದೆ. ಹದಿನೆಂಟನೆಯ ಶ್ಲೋಕದಿಂದ ಇಪ್ಪತ್ತೈದನೆಯ ಶ್ಲೋಕದವರೆಗೆ ಚಿತ್ತ ವೃತ್ತಿ ನಿರೋಧ ಕ್ರಮವನ್ನು ವಿವರಿಸಲಾಗಿದೆ. ಚಿತ್ತದ ಏಕಾಗ್ರತೆಯನ್ನು ಕುರಿತು ಆಚಾರ್ಯ ವಿನೋಬಾಜಿ ತಮ್ಮ ಗೀತಾಪ್ರವಚನದಲ್ಲಿ ಬಹುಸುಂದರವಾಗಿ ವ್ಯಾಖ್ಯಾನ ಮಾಡಿದ್ದಾರೆ: "ಧ್ಯಾನಯೋಗದಲ್ಲಿ ಮುಖ್ಯ ವಿಷಯ ಮೂರು. (೧) ಚಿತ್ತದ ಏಕಾಗ್ರತೆ; (೨) ಚಿತ್ತದ ಏಕಾಗ್ರತೆಗೆ ಉಪಯುಕ್ತವಾದ ಬಾಳಿನ ಪರಿಮಿತತೆ (೩) ಸಾಮ್ಯದೆಶೆ ಅಥವಾ ಸಮದೃಷ್ಟಿ .... .... ಚಿತ್ತದ ಏಕಾಗ್ರತೆ ಎಂದರೆ ಚಿತ್ತದ ಚಂಚಲತೆಗೆ ಅಂಕುಶ. ಜೀವನ ಪರಿಮಿತತನ ಎಂದರೆ ಎಲ್ಲ ಕ್ರಿಯೆಯನ್ನೂ ತೂಕ ಮಾಡುವುದು. ಸಮದೃಷ್ಟಿ ಎಂದರೆ, ವಿಶ್ವದಬಗ್ಗೆ ಉದಾರ ದೃಷ್ಟಿ. ಈ

ಮೂರು ವಸ್ತುವಳಿಂದ ಧ್ಯಾನಯೋಗ ಸಿದ್ಧಿಸುತ್ತದೆ. * ವಿನೋಬಾ
ಚಿತ್ತಪರಾಗ್ರತೆಗೆ ಉದಾಹರಣೆಗಾಗಿ ನೆಪೋಲಿಯನ್ ಬಗ್ಗೆ ಒಂದ ಕಥೆ
ಹೇಳುತ್ತಾರೆ: "ಯುದ್ಧದ ಏರ್ಪಾಟು ಮಾಡಿಕೊಟ್ಟ ತರುವಾಯ ಆ
ಸಮರರಂಗದಲ್ಲಿ ಗಣಿತದ ಸಿದ್ಧಾಂತಗಳನ್ನು ಬಿಡಿಸುತ್ತಿದ್ದನಂತೆ ಬೇರೆಯವರ
ಮೇಲೆ ಗುಂಡುಹಾರಲಿ. ಸೈನಿಕರು ಸಾಯಲಿ. ನೆಪೋಲಿಯನ್ನನ ಚಿತ್ತ
ಗಣಿತದಲ್ಲಿ". ಹಾಗೆಯೇ ಬಿಲ್ವಮಂಗಳ, ಮಲುಹಣರ ಕತೆಯನ್ನು
ಹೇಳಬಹುದು.

ವೃತ್ತ: ೧೮

ಓರಂತೀ ದೇಹಮಂ ರಕ್ಷಿಸುವತಿಭರದಿಂದಳ್ತು ತೆತ್ತುಂ ಸತೇಜ.
ಕ್ಕಾರೇನಂ ಪೇಳ್ದೊಡಂ ಕೈಮುಗಿದು ಪೆರ್ಬಿಟ್ಟಿಯಂ ಪೊತ್ತು ಸಂಸಾ-
ರಾರಂಭಂಗೆಯ್ದು ದುಃಖಕ್ಕಲಸಿ ಮಱುಗಿ ನಿಮ್ಮಂಘ್ರಿಯಂ ಪೊರ್ದಿದೆಂ ಸ.
ತ್ಯಾರಂಭಪ್ರೇಮಿ ಪಂಪಾಪುಸದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೧೮

ಅರ್ಥ: ಓರಂತೆ= ಪ್ರೀತಿಯಿಂದ; ಈ ದೇಹಮಂ= ದೇಹವನ್ನು ರಕ್ಷಿಸುವ
ಅತಿಭರದಿಂದ= ಅತಿ ಆತುರದಿಂದ ಉಳ್ತು= ಭೂಮಿಯನ್ನು ಉತ್ತು; ತೆತ್ತುಂ= ಬಿ
ಯ ಸಂಪಾದನೆಗಾಗಿ ಹಣವನ್ನು ಕೊಟ್ಟು; ಸತೇಜಕ್ಕೆ=

ಆರೇನಂ= ಆರ್+ಏನಂ = ಯಾರು ಏನು; ಪೇಳ್ದೊಡಂ= ಹೇಳಿದರೂ; ಕೈ
ಮುಗಿದು; ಸುಗಿದು= ಗೇಣುದ್ದದ ದೇಹವನ್ನು ತೋಟುದ್ದ ಮಾಡಿ; ಪೆರ್ಬಿಟ್ಟಿಯಂ=
ದೊಡ್ಡದಾಗಿ ಬಿಟ್ಟಿಯ ಕೆಲಸವನ್ನು; ಪೊತ್ತು= ನೆರವೇರಿಸಿ; ಸಂಸಾರಾ ರಂಭಂಗೆಯ್ದು=
ಸಂಸಾರದ ಆರಂಭವನ್ನು ಮಾಡಿ; ದುಃಖಕ್ಕೆ ಅಲಸಿ= ಬೇಸತ್ತು; ಮಱುಗಿ=ಚಿಂತೆ
ಗೊಳಗಾಗಿ ನಿಮ್ಮಂಘ್ರಿಯಂ=ನಿಮ್ಮ ಪಾದಗಳನ್ನು; ಪೊರ್ದಿದೆಂ=ಮರೆಹೊಕ್ಕೆನು ಪ
ದೆನು; ಸತ್ಯಾರಂಭಪ್ರೇಮಿ=ಸತ್ಯಸಾಕ್ಷಾತ್ಕಾರ ಮಾಡಬೇಕೆಂದು ಆರಂಭಮಾಡುವವರ ಪ್ರೇ
ಮಿಯಾದ ಪಂಪಾಪುರದ ಒಡೆಯ ಶ್ರೀ ವಿರೂಪಾಕ್ಷಸ್ವಾಮಿಯೇ ನನ್ನನ್ನು ರಕ್ಷಿಸು.

---

*ಗೀತಾಪ್ರವಚನ ಅನು ಶಿದ್ಧವನಹಳ್ಳಿ ಕೃಷ್ಣಶರ್ಮ (ಮೂರನೆ ಮುದ್ರಣ)
ಪುಟ: ೩೩

ಭಾವಾರ್ಥ: ಪ್ರೀತಿಯಿಂದ ಈ ದೇಹವನ್ನು ಸಲಹಬೇಕೆಂಬ ಆತುರದಲ್ಲಿ ಭೂಮಿಯನ್ನು ಉತ್ತು, ಬಡ್ಡಿಗಾಗಿ ಸಾಲವನ್ನು ಕೊಟ್ಟು, ಯಾರು ಏನು ಹೇಳಿದರೂ ದೈನ್ಯದಿಂದ ಅದನ್ನೆಲ್ಲ ಬಿಟ್ಟಿಯ ಕೆಲಸಮಾಡಿ, ಸಂಸಾರದ ಆರಂಭಮಾಡಿ, ದುಃಖದಿಂದ ಬೇಸತ್ತು, ಮರುಗಿ ನಿನ್ನ ಪಾದಗಳ ಮರೆಹೊಕ್ಕೆ, ಅಂಥ ನನ್ನನ್ನು ಸತ್ಯಸಾಕ್ಷಾತ್ಕಾರದ ಆರಂಭಮಾಡುವವರ ಪ್ರೇಮಿಯಾದ ನೀನು ಉದ್ಧಾರಮಾಡಿ ರಕ್ಷಿಸು ಸ್ವಾಮಿ, ಓ ಪಂಪಾಪುರದರಸ.

ಟಿಪ್ಪಣಿ: ಮನುಷ್ಯ ಹುಟ್ಟುತ್ತಾನೆ. ಬಾಲ್ಯ ಕೌಮಾರ್ಯಗಳನ್ನು ದಾಟಿ ಯೌವನಾವಸ್ಥೆ ಹೊಂದುತ್ತಾನೆ ಯೌವನದಲ್ಲಿ ಅವನಿಗೆ ಯಾವುದೂ ಲಕ್ಷ್ಯವಿಲ್ಲ. ಎಲ್ಲದೂ ತನಗಾಗಿಯೇ ಇದೆ. ತಾನು ಅದನ್ನೆಲ್ಲ ಭೋಗಿಸಲಿಕ್ಕಾಗಿಯೇ ಇದೇನೆ ಎಂದು ಭಾವಿಸಿ, ಅಂಕೆದಪ್ಪಿ ಮೆರೆಯುತ್ತಾನೆ. ಅವನ ಅಹಂಕಾರಕ್ಕೆ ಮಿತಿಯೇ ಯಿಲ್ಲ. ಅವನಿಗೆ ಕಣ್ಣೇಕಾಣಿಸುವುದಿಲ್ಲ. ಮೀಸೆಬರುವ ಅವನಿಗೆ ದೇಶವೇ ಕಾಣುವುದಿಲ್ಲ! ಅಷ್ಟು ಅಹಂಕಾರ, ಮದ, ಮತ್ತು!

ಅಷ್ಟರಲ್ಲೇ ಕೊರಳಿಗೆ ಗುದ್ದಿ ಬೀಳುತ್ತದೆ. ಸಂಸಾರದ ಹೊರೆಬೀಳುತ್ತದೆ. ಹಿಂದಿನಂತೆ ಈಗ, 'ನೀನೇನು, ನಿಂದೇನು' ಎಂದು ಹೂಂಕರಿಸಿ ನಡೆಯುವುದಿಲ್ಲ. ತಲೆ ತಾಕುತ್ತದೆ. ಹೊಟ್ಟೆಬಟ್ಟೆ ಮಡದಿ ಮಕ್ಕಳ ರಕ್ಷಣೆಯ ಚಿಂತೆಯಿಂದ ಯಾರು ಏನು ಹೇಳಿದರೂ ನಾಯಿಯಂತೆ ಬಾಲ ಮುದುಡಿಕೊಂಡು ಬಿಟ್ಟಿಯಚಾಕರಿ ಬೊಗುಳುತ್ತಾನೆ. ಮೊದಮೊದಲು ಸಂಸಾರ ರುಚಿಯಾಗಿಯೇ ತೋರುತ್ತದೆ. ಆದರೆ ಸಂಸಾರದ ಕ್ರೂರ ಪರಿಸ್ಥಿತಿಯಿಂದ ಅವನ ಅಹಂಕಾರದ ಬೆಲೂನಿಗೆ ಸೂಜಿಚುಚ್ಚಿದಂತಾಗುತ್ತದೆ. ಅವನು ಆಗ ಹಾವಾಡಿಗನ ಮುಂದಿರುವ ಹಾವಿನಂತಾಗುತ್ತಾನೆ. ಹೆಂಡತಿಯೇ ಎಷ್ಟೋಸಾರಿ ಅವನನ್ನು ಆಡಿಸುತ್ತಾಳೆ. ಮೂಗುದಾರ ಹಾಕಿದ ಕರಡಿಯಂತೆ "ಗುಡುಗುಡು" ಎಂದು ತನ್ನೊಳಗೇ ಗೊಣಗುತ್ತಾನೆ. ಆದರೆ ಕಾಸು ಕೊಡುವ ಸಾಹುಕಾರ ಬಂದರೆ ಸಲಾಮು ಹಾಕುತ್ತಾನೆ. 'ಅಯ್ಯೋ ಸಂಸಾರ ಸಾಕಪ್ಪಾ! ಸಾಕು! ಎನಿಸುತ್ತದೆ.

ಆಗಲೇ ಅವನಿಗೆ ಪಂಪಾಪತಿಯ ಪಾದದ ನೆನಪಾಗುವುದು. 'ಜಟ್ಟಿಯಂಥ ದೇಹ ಬೆಳೆಸಿದೆ. ರತಿಯಂಥ ಪತ್ನಿಯಿದ್ದಾಳೆ ಬೇಕಾದಷ್ಟು ಬೆಳ್ಳಿ ಬಂಗಾರ ಸಂಪಾದಿಸಿದೆ. ಇಟ್ಟಿಗೆಯ ಮನೆಯಲ್ಲಿ, ವಿದ್ಯುದ್ದೀಪದ ಬೆಳಕಿನಲ್ಲಿದ್ದೇನೆ .... .... ಆದರೆ ಎಲ್ಲದೂ ಏತಕ್ಕೆ ಬಂತು ?' ಎಂದು ಮನುಷ್ಯ ಯೋಚಿಸುತ್ತಾನೆ. ಈ ಸಂಸಾರ ಸಾಗರದಿಂದ ಅವನ ಒಗರು ಕಡಮೆಯಾಗಿ ಸಾತ್ವಿಕತೆ ಮೂಡುತ್ತದೆ. ಆಗ ಪಂಪಾಪತಿಯೇ ಶರಣು ಎಂದು ಶರಣಾಗತನಾಗಲು ಹವಣಿಸುತ್ತಾನೆ ಈ ಹಿಂದಿನ ವೃತ್ತದಲ್ಲಿ ಚಿತ್ತದ ಏಕಾಗ್ರತೆಗಾಗಿ ಹಂಬಲಿಸಿದ ಸಾಧಕ, 'ಶ್ರೀ ಸಂಗನಬಸವನ ಪಾದವಲ್ಲದೆ ಬೇರಿಲ್ಲ' ಎಂದು ಅರಿತು ಅವನ ಪಾದಕಮಲಗಳನ್ನು ನಂಬುತ್ತಾನೆ. "ನ ಕಿಂಚಿದಪಿ ಚಿಂತಯೇತ್" ಬೇರೆಏನನ್ನು ಯೋಚಿಸಬೇಡ. ಅವನ ಧ್ಯಾನವನ್ನೇ ಮಾಡು – ಎಂದು ಬೋಧೆಯಾಗುತ್ತದೆ.

## ವೃತ್ತ: ೧೯

ಅವಿಚಾರಂ ಮಿಕ್ಕು ಲಾಭಂಬಡೆವತಿಭರದಿಂ ಸುತ್ತಿ ದೇಶಂಗಳೊಳ್ ವಿಂ-
ಧ್ಯವಿತಾನಪ್ರಾಂತದೊಳ್ ತಿಱನೆ ತಿರುಗಿ ಮೊದಲ್ಗೆಟ್ಟು ಬೆಂಬಿಳ್ದು ದುಃಖ-
ವ್ಯವಹಾರಕ್ಕಳ್ಕಿನಿಮ್ಮೀ ಚರಣಯುಗಳಮಂ ಪೊರ್ದಿದೆಂ ಭಕ್ತವೃಂದೋ-
ತ್ಸವಕಲ್ಪೋರ್ವಿಜ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೧೯

ಅರ್ಥ: ಅವಿಚಾರಂ=ಅಯೋಗ್ಯವಾದ ವಿಚಾರಗಳು; ಮಿಕ್ಕು=ಹೆಚ್ಚಾಗಿ, ಲಾಭಂ ಬಡೆವ=ಲಾಭವನ್ನು ಪಡೆಯುವ; ಅತಿಭರದಿಂದ=ಹೆಚ್ಚಾದ ಉತ್ಸಾಹದಿಂದ; ದೇಶಂಗಳೊಳ್=ದೇಶದಲ್ಲೆಲ್ಲ; ಸುತ್ತಿ=ತಿರುಗಾಡಿ; ವಿಂಧ್ಯ ಮೊದಲಾದ ಪರ್ವತಪ್ರಾಂತದಲ್ಲಿ ತಿಱನೆ=ಗರಗರನೆ; ತಿರುಗಿ; ಮೊದಲ್ಗೆಟ್ಟು=ಮೊದಲು ಕೆಟ್ಟುಹೋಗಿ; ಬೆಂಬಿಳ್ದು=ಸೋತು ದುಃಖವ್ಯವಹಾರಕ್ಕೆ= ದುಃಖಮಯವಾದ ಈವ್ಯವಹಾರಕ್ಕೆ; ಅಳ್ಕಿ= ಅಂಜಿ; ನಿಮ್ಮ ಈ ಚರಣಯುಗಳಂ= ಪಾದಗಳನ್ನು; ಪೊರ್ದಿದೆಂ= ಮೊರೆಹೊಕ್ಕು; ಭಕ್ತವೃಂದೋತ್ಸವ= ಭಕ್ತರ ಸಮೂಹದಿಂದ ಉತ್ಸವಗಳೆಂಬ ಕಲ್ಪೋರ್ವಿಜ= ಕಲ್ಪವೃಕ್ಷದಂತಿರುವ; ಪಂಪಾಪುರದ ಒಡೆಯನಾದ ವಿರೂಪಾಕ್ಷಸ್ವಾಮಿಯೇ ನನ್ನನ್ನು ರಕ್ಷಿಸು.

ಭಾವಾರ್ಥ: ಕ್ಷುಲ್ಲಕ ವಿಚಾರಗಳು ಹೆಚ್ಚಾಗಿ, ಲಾಭ ಪಡೆಯಬೇಕೆಂಬ ದುರಾಸೆಗೆ ಬಿದ್ದು ದೇಶವನ್ನೆಲ್ಲ ಸುತ್ತಾಡಿ; ವಿಂಧ್ಯ ಮೊದಲಾದ ಪರ್ವತಪಂಕ್ತಿಗಳಲ್ಲಿ ಗರ್ರನೆ ತಿರುಗಿ ಕೆಟ್ಟುಹೋಗಿ, ದುಃಖಪೂರಿತವಾದ ಈ ವ್ಯವಹಾರಗಳಿಗೆ ಅಂಜಿ ನಿಮ್ಮ ಈ ಚರಣಕಮಲಗಳ ಮೊರೆ ಹೊಕ್ಕಿದ್ದೇನೆ. ಹಂಪೆಯೊಡಯನೇ ನನ್ನನ್ನು ರಕ್ಷಿಸಿ ಉದ್ಧಾರಮಾಡು.

ಟಿಪ್ಪಣಿ: ಯೌವನ ಪ್ರಾಪ್ತಿಯಾದಮೇಲೆ ವೈಬಯಕೆಯನ್ನು ತೀರಿಸಿಕೊಳ್ಳಲು ಮದುವೆಮಾಡಿಕೊಂಡು ಸಂಸಾರದ ಉರುಳುಹಾಕಿಕೊಳ್ಳುತ್ತಾನೆ. ಈ ಉರುಳು ಒಂದೇಸಾರಿಗೆ ಕೊಲ್ಲುವ ಕೃಪಾಳುವಲ್ಲ! ಈ ಸಂಸಾರವನ್ನು ಸಲಹುವ ಪೀಕಲಾಟದಲ್ಲಿ ಏನಾದರೊಂದು ವೃತ್ತಿಯನ್ನು ವ್ಯವಹಾರವನ್ನು ಕೈಕೊಳ್ಳಲೇಬೇಕು. ಕಾಯದಿಂದ ದುಡಿದು ಬದುಕುವ ವೃತ್ತಿ - ಕಾಯಕ ಕೈಕೊಳ್ಳಬೇಕು. ಆದರೆ, ಅಷ್ಟರಿಂದ ಜೀವನಿಗೆ ಅಪಾಯವಿಲ್ಲ. ಅಪಾಯ ಸಂಭವಿಸುವುದು ದುರಾಸೆ ಮನವನ್ನು ಹೊಕ್ಕಾಗ. ದುರಾಸೆಗೆ ಬಿದ್ದ ಮನುಷ್ಯ ಏನೇನೋ ವ್ಯವಹಾರ ಮಾಡುತ್ತಾನೆ. ಎಲ್ಲೆಲ್ಲಿಯೋ ತಿರುಗುತ್ತಾನೆ. ಎಷ್ಟೆಷ್ಟೋ ಪ್ರಾಂತಗಳಲ್ಲಿ ಸುತ್ತಿ ಬರುತ್ತಾನೆ. ಅಷ್ಟೆಲ್ಲ ಮಾಡಿದರೂ ಕೊನೆಗೂ ಅವನಿಗೆ ದುಃಖವೇ ಪ್ರಾಪ್ತಿ. ಆ ದುಃಖ ನಿವಾರಣೆಗೆ ಒಂದೇ ದಾರಿ: ಭಗವಂತನ ಚರಣಕಮಲದಲ್ಲಿ ಮೊರೆಹೋಗುವುದೇ. ಸಾಧಕನಾದವನು, ಸಂಸಾರವನ್ನು ಸಲಹುವ ಅತಿಭರದಲ್ಲಿ ದುಃಖಿಯಾಗಿ ಭಗವಂತನ ಅಡಿಯಲ್ಲಿ ಮೊರೆಹೊಗುತ್ತಾನೆ.

## ವೃತ್ತ: ೨೦

ಅವನಿಂತಾರಾದೊಡಂ ಪಲ್ಗಿರಿದು ಪಿರಿದು ಬಾಯಿಂದೆ ದೈನಾಕ್ಷರಂ ಸಂ-
ಭವಿಸುತ್ತಿರ್ನ್ನಾಳ್ದ ಸಂದೇಶಮನೆ ಕರುಣಿಸೆಂಬಲ್ಲಿ ಮರ್ತ್ಯಂಗೆ ಸಾವು-
ತ್ತಮೆ ಪುಟ್ಟುತ್ತಿರ್ಪ ಸೇವಾನರಕನದಿಯ ನೀಸಾಡಿ ಮದ್ಭಾಗ್ಯದಿಂ ನಿ-
ನ್ನವನಾದೆಂ ದೇವ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೨೦

ಅರ್ಥ: ಅವನು ಇಂತು: ಎಷ್ಟರವನಾದರೂ; ಆರಾದೊಡಂ= ಯಾವನಾದರೂ; ಪಲ್ಗಿರಿದು= ಹಲ್ಲುಕಿರಿದು; ಪಿರಿದು= ಹಿರಿದಾದ; ಬಾಯಿಂದ= ಬಾಯಿಯಿಂದ;

ದೈನ್ಯಾಕ್ಷರಂ= ದೀನವಾಣಿಯು; ಸಂಭವಿಸುತ್ತ= ಹುಟ್ಟಿ; ಎನ್ನಾಳ್ದ= ನನ್ನ ಒಡೆತನದ; ಸಂದೇಶಿವುನೆ= ಅಪ್ಪಣೆಯುನ್ನು; ಆಜ್ಞೆ ಏನು; ಕರುಣಿಸೆಂದಲ್ಲಿ; ಮರ್ತ್ಯಂಗೆ= ಮನುಷ್ಯನಿಗೆ ಸಾವುತ್ತವೆ, ಸಾವುತ್ತಾ; ಪುಟ್ಟುತ್ತಿರ್ಪ= ಹುಟ್ಟುತ್ತಿರುವ; ಸೇವಾನರಕ= ಸೇವೆಯೆಂಬ ನರಕದ ನದಿಯುನ್ನು ಈಸಾಡಿ; ಮದ್ಭಾಗ್ಯದಿಂ= ನನ್ನ ಸುದೈವದಿಂದ ನಿನ್ನವನಾದೆಂ= ನಿನ್ನನ್ನು ಮೊರೆಹೊಕ್ಕೆ, ದೇವ ಪಂಪಾಪುರದರಸ ರಕ್ಷಿಸು.

**ಭಾವಾರ್ಥ:** ಅವನು ಎಷ್ಟರವನಾಗಲಿ ಯಾರೇ ಆಗಲಿ ಅವನ ಮುಂದೆ ಹಲ್ಲು ಕಿರಿದು, (ದೇವರು ಕೊಟ್ಟ ದೊಡ್ಡ) ಬಾಯನ್ನು ತೆರೆದು: 'ಜೀವ, ನಿನ್ನ ಆಜ್ಞೆ ಏನು ?' ಎಂದು ದೀನವಾಣಿಯಿಂದ ಮಾತನಾಡುತ್ತ; ಮನುಷ್ಯ ಸಾಯುತ್ತಾ ಹುಟ್ಟುತ್ತಾ ಪರಸೇವೆಯೆಂಬ ನರಕದ ನದಿಯನ್ನೇ ಈಸಾಡಿ ಕೊನೆಗೆ ನನ್ನ ಸುದೈವದಿಂದ ನಿನ್ನ ಚರಣಕಮಲವನ್ನು ಮೊರೆಹೊಕ್ಕೆ ದೇವ, ಹಂಪೆಯೊಡೆಯನಾದ ವಿರೂಪಾಕ್ಷಸ್ವಾಮಿಯೇ ನನ್ನನು ರಕ್ಷಿಸು.

**ಟಿಪ್ಪಣಿ:** ಸಂಸಾರವನ್ನು ಹೊರೆಯುವಾಗ ಪರಸೇವೆಯಲ್ಲಿ ಪಡಬೇಕಾದ ಸಹಿಸಲಾರದಸ್ಥಿತಿಯನ್ನು ಇಲ್ಲಿ ಸಾಧಕತಿಳಿಸುತ್ತಾನೆ. ಪರಸೇವೆಯ ದುಃಖವನ್ನು ಅನುಭವಿಸಿದವರೇ ಬಲ್ಲರು. ಮಹಾಕವಿ ಕಾಳಿದಾಸನೂ ಕೂಡ ತನ್ನ ಶಕುಂತಲ ನಾಟಕದಲ್ಲಿ 'ಪರಸೇವೆ ಕಠಕಷ್ಟ' ಎಂದು ಹೇಳಿದ್ದಾನೆ. ತನ್ನ ಧಣಿ ಎಂಥವನಾದರೂ ಆಗಲಿ, ಅವನೆಷ್ಟೇ ಮೂರ್ಖಶಿಖಾಮಣಿಯಾದರೂ ಕೂಡ ಅವನ ಮುಂದೆ ಹಲ್ಲುಕಿರಿದು ನಿಂತು, ದೇವರುಕೊಟ್ಟ ಬಾಯನ್ನು ತೆರೆದು 'ಜೀಯ, ಅಪ್ಪಣೆ ಏನು ?' ಎಂದು ಕೇಳುವಂತೆ ಮಾಡಿಸುತ್ತದೆ. ಈ ಪರಸೇವೆ ಎಂಬುದು ನರಕದ ನದಿಯೇ ಇದ್ದಂತೆ. ಅದನ್ನು ಈಸಾಡಿ ನರಕಯಾತನೆಯನ್ನು ಅನುಭವಿಸಬೇಕು. ಬಹುಶಃ ಯೌವನದಲ್ಲಿ ಯುವಕನಿಗಿರುವ ಅಹಂಕಾರವನ್ನು ಕುಟ್ಟಿಕುಟ್ಟಿ, ಹಣ್ಣುಮಾಡಲಿಕ್ಕಾಗಿ ಇಂಥ ಪರಸೇವೆ ಆಗತ್ಯವೋ ಏನೋ ? "ನಾನು ನಾನು" ಎಂದು ಹೂಂಕರಿಸಿ ಮೆರೆದಾಡುವ ಈ ಯುವಕನ ಯೋಗ್ಯತೆ ಏನು, ಎಂಬುದನ್ನು ತೋರಿಸಿ ಕೊಡಲು ಈ ಪರಸೇವೆಯನ್ನು ಮಾಡಿಸುವನೋ ಏನೋ ?

## ವೃತ್ತ : ೨೧

ತನುವಂ ಸ್ತ್ರೀಪುತ್ರರಂ ರಕ್ಷಿಪ ವಿಪುಳತೆ ಕೈಕೊಂಡು ಕಾರ್ಪಣ್ಯವಕ್ತ್ರಂ
ತನುಗಾತ್ರಂ ದೀನನೇತ್ರಂ ತುಷಲಘುತರಮಾತ್ರಂ ಕರಂ ಪೊರ್ದಿತೋರ್ಪಿಂ
ಜನಮಂ ಬೇಳ್ಪಾಸೆಯಿಂ ಸಾವಿನ ಪರಿಯನಿಪೀ ದೈನ್ಯಮಂ ಬಿಟ್ಟು ನಿಮ್ಮಂ
ನೆನೆಯುತ್ತಿರ್ಪಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೨೧

ಅರ್ಥ : ತನುವಂ= ದೇಹವನ್ನು; ಸ್ತ್ರೀಪುತ್ರರಂ= ಮಡದಿಮಕ್ಕಳನ್ನು; ರಕ್ಷಿಪ= ರಕ್ಷಿಸುವ; ವಿಪುಳತೆ= ಬಹಳಕೆಲಸ (ವೈಯಲ್ಲಿ ಕೆಲಸ) ವನ್ನು ಕೈಕೊಂಡು =ಹಚ್ಚಿಕೊಂಡು; ಕಾರ್ಪಣ್ಯ= ಬಡತನವನ್ನು ಸೂಚಿಸುವ ಜೋಲು (worries) ವಕ್ತ್ರಂ= ಮುಖವನ್ನು ಹಾಕಿಕೊಂಡು; ತನುಗಾತ್ರಂ= ಕೃಶವಾದ ದೇಹವುಳ್ಳವನಾಗಿ (ತಗ್ಗಿಬಗ್ಗಿ ನಡೆಯುವ ದೈನ್ಯಸೂಚಕ ದೇಹವುಳ್ಳವನಾಗಿ) ದೀನನೇತ್ರಂ= ಕನಿಕರವ ಬೇಡುವಂಥ ಕಣ್ಣುಗಳಿಂದ; ತುಷಲಘುತರಮಾತ್ರಂ= ಧಾನ್ಯದ ಮೇಲ್ಭಾಗದಲ್ಲಿರುವ ತವುಡಿನಂತೆ ಒಣಗಿಹೋದ, ನಿಸ್ಸಾರವಾದ ದೇಹವನ್ನು (ತುಷ= ಧಾನ್ಯದ ಮೇಲ್ಭಾಗ; ಲಘುತರ= ಒಣಗಿ ಹಗುರವಾದ ನಿಸ್ಸಾರವಾದ ಮಾತ್ರಂ= ದೇಹ) ಕರಂ= ಕೈ; ಪೊರ್ದಿ= ಮಾಡಿ; ತೋರ್ಪಿಂ= ತೋರಿಸುವಂತೆ; ಜನಮಂ= ಜನರನ್ನು; ಬೇಳ್ಪ= ಬೇಡುವ; ಆಸೆಯಿಂ= ಆಸೆಯಿಂದ; ಸಾವಿನಪರಿಯೆನಿಪೀ= ಸಾವಿನರೀತಿ ಎನ್ನುವ; ಈ ದೈನ್ಯಮಂ= ದೈನ್ಯತೆಯನ್ನು; ಬಿಟ್ಟು ನಿಮ್ಮಂ= ನಿಮ್ಮನ್ನು ನೆನೆಯುತಿರ್ಪಂತೆ= ನೆನೆಯುವಂತೆ ಪಂಪಾಪುರದರಸ ವಿರೂಪಾಕ್ಷನೇ ನನ್ನನ್ನು ರಕ್ಷಿಸು.

ಭಾವಾರ್ಥ: ತನ್ನನ್ನೂ ತನ್ನ ಮಡದಿಮಕ್ಕಳನ್ನೂ ರಕ್ಷಿಸುವ ದೊಡ್ಡ ಕೆಲಸವನ್ನು ಹೊತ್ತುಕೊಂಡು ಯಾವಾಗಲೂ ಜೋಲು ಮುಖ ಹಾಕಿಕೊಂಡು, ಕೃಶವಾದ ಶರೀರದಿಂದ, ದೀನವಾದ ಕಣ್ಣುಗಳಿಂದ ಧಾನ್ಯದಮೇಲಿರುವ ತವುಡಿನಂತೆ ಶುಷ್ಕವಾದ ನಿಸ್ಸಾರವಾದ ನಿಷ್ಪ್ರಯೋಜಕವಾದ ದೇಹದಿಂದಲೂ, ಜನರು ಕೈಮಾಡಿತೋರಿಸು (ನಗುವಂತೆ) ವಂತೆ ಮಾಡಿ ಇಷ್ಟಾದರೂ ಸಂಸಾರದ ಜಂಜಡ ತೀರಲಾರದೆ, ಪರರನ್ನು ಬೇಡುವಂತೆ ಮಾಡಿ ಬದುಕಿದ್ದರೂ ಸತ್ತಷ್ಟು ಅವಮಾನಕರವಾದ ದೈನ್ಯವನ್ನು ಅವಲಂಭಿಸುವುದನು ಬಿಟ್ಟು ನಿಮ್ಮನ್ನೇ ನೆನೆಯುವಂತೆ ಉದ್ಧಾರಮಾಡಿ ರಕ್ಷಿಸು ಹಂಪೆಯೊಡನೆಯೇ !

**ಟಿಪ್ಪಣಿ:** ಈ ಸಂಸಾರದ ಜಂಜಡದಲ್ಲಿ ಜೀವ ನುಗ್ಗುನುಗ್ಗಾಗಿ ಹೋಗುತ್ತದೆ. ಪರರನ್ನು ಬೇಡಿತಿನ್ನುವ ಸ್ಥಿತಿಗೂ ತಳ್ಳುತ್ತದೆ. ಬೇಡು ವವನ ಕೈ ಕೆಳಗೆ; ಕೊಡುವವನ ಕೈ ಮೇಲು. ಅವರ ಮುಂದೆ ದೀನನಾಗಿ ನಿಂತು ಬೇಡುವ ದೈನ್ಯ ಸ್ಥಿತಿ ಸಾವಿನಷ್ಟು ಅಸಹನೀಯವಾದುದು. ಈ ಕಾ ರ್ಪಣ್ಯದಲ್ಲಿ ದೇಹ ಸುಟ್ಟುಸ.ಗಿದು ಸಣ್ಣಾಗಿ ಹೋಗುತ್ತದೆ. ಅವನ ಮು ಖದಲ್ಲಿ ಗೆಲುವೇ ಇರುವುದಿಲ್ಲ. ಇಂಥ ದೈನ್ಯಾವಸ್ಥೆಯಿಂದ ಬಿಡುಗಡೆಮಾ ಡಿ ತನ್ನನ್ನು ರಕ್ಷಿಸೆಂದು ಸಾಧಕವರೇಣ್ಯ ಕವಿ ಹರಿಹರ ಇಲ್ಲಿ ಪ್ರಾರ್ಥಿಸಿದ್ದಾನೆ

## ವೃತ್ತ: ೨೨

ಮನೆಯೆಂದುಂ ಮಕ್ಕಳೆಂದುಂ ಜನನಿಜನಕರೆಂದುಂ ವೃಥಾಪತ್ನಿಯೆಂದುಂ
ಧನಮೆಂದುಂ ಧಾನ್ಯಮೆಂದುಂ ಸಕಲವಿಷಯಮಿಂತೆನ್ನದೆಂದುಂ ನಿರರ್ಥಾ-
ರ್ಥನಿಮಿತ್ತಂ ಬೆಂದು ತಾಪತ್ರಯದೊಳೆ ಕುದಿದೆಂ ಬತ್ತಿದೆಂ ಬಾಡಿದೆಂ ಯಾ
ತನೆಗೊಂಡೆಂ ದೇವ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೨೨

**ಅರ್ಥ:** ಮನೆಯೆಂದು ಮಕ್ಕಳೆಂದು ಜನನಿಜನಕರೆಂದು ವೃಥಾ=ವ್ಯರ್ಥವಾಗಿ ಪತ್ನಿಯೆಂದು=ಮಡದಿಯೆಂದು; ಧನವೆಂದು ಧಾನ್ಯವೆಂದು ಸಕಲ ವಿಷಯಮಿಂತೆನ್ನದೆಂದು =ಈ ಎಲ್ಲ ಭೋಗವಸ್ತುಗಳು ತನ್ನವೆಂದು ನಿರರ್ಥ=ನಿರರ್ಥಕವಾಗಿ; ಅರ್ಥನಿಮಿತ್ತಂ= ಹಣದ ನಿಮಿತ್ತವಾಗಿ ಬೆಂದು=ಕುದಿದು; ತಾಪತ್ರಯದೊಳೆ= ತಾಪತ್ರಯದಲ್ಲಿ ಕುದಿ ದೆಂ= ಕುದಿದೆನು; ಬತ್ತಿದೆಂ= ಬತ್ತಿಹೋದೆ; ಬಾಡಿದೆ; ಯಾತನೆಗೊಂಡೆಂ= ಯಾತ ನೆಯನ್ನು ಅನುಭವಿಸಿದೆ; ದೇವ ಪಂಪಾಪುರದ ಒಡೆಯನಾದ ವಿರೂಪಾಕ್ಷಸ್ವಾಮಿಯೇ ನನ್ನನ್ನು ರಕ್ಷಿಸು.

**ಭಾವಾರ್ಥ:** ಮನೆ ನನ್ನದು, ಮಕ್ಕಳು ತಾಯಿತಂದೆಗಳು ನನ್ನವ ರು, ನನ್ನ ಹೆಂಡತಿ, ಧನಧಾನ್ಯ ಮುಂತಾದ ಸಕಲ ಭೋಗವಸ್ತುಗಳೂ ನನ್ನ ವೆಂದು ವ್ಯರ್ಥವಾಗಿ ಬಯಸಿ, ಹಂಬಲಿಸಿ ಹಣಕ್ಕಾಗಿ ಬಾಯಿಬಾಯಿ ಬಿಟ್ಟು ಬೆಂದುಹೋಗಿ ತಾಪತ್ರಯದಲ್ಲಿ ಕುದಿದು, ಬತ್ತಿ, ಬಾಡಿ, ಯಾತನೆಗೊಂಡು ಬೆಂಡಾದೆ, ದೇವರೇ ನನ್ನನ್ನು ರಕ್ಷಿಸು.

ಟಿಪ್ಪಣಿ : 'ಯಾರಿಗೆ ಯಾರಿಲ್ಲ ಲಿಂಗವೇ ! ತನಗ್ಯಾರಿದ್ದರೇನಿಲ್ಲ ಲಿಂಗವೇ ! ಎಂದೊಬ್ಬ ಅನುಭಾವಿಕವಿ ಹಾಡಿದ್ದಾನೆ. ಮನೆ ಮಡದಿಮಕ್ಕಳು ತಂದೆ ತಾಯಿಗಳು ಎಲ್ಲರೂ, ಆ ಸಮಯಬಂದಾಗ, ಯಾರಿಗೂ ಆಗುವುದಿಲ್ಲ. 'ತಾಯಿಗಿಂತ ಬಂಧುವಿಲ್ಲ' ಎಂಬುದು ಬಹುಮಟ್ಟಿಗೆ ಲೌಕಿಕ ಜೀವನದಲ್ಲಿ ನಿಜ. ಆದರೆ, ಆತ್ಮೋನ್ನತಿಯ ಪ್ರಯತ್ನದಲ್ಲಿ ಆ ತಾಯಿಯೂ ಆಗಲಾರಳು. ಮನುಷ್ಯ ತಾ ಮಾಡುವ ಕರ್ಮಗಳಿಗೆ ತಾ ಭಾಗಿಯೇ ಹೊರತು ಇನ್ನು ಯಾರೂ ಭಾಗಿಗಳಾಗುವುದಿಲ್ಲ. ಆದಿಕವಿ ವಾಲ್ಮೀಕಿ, ನಾರದ ಗುರೂಪದೇಶದಿಂದ ಪರಿವರ್ತಿತನಾಗುವುದಕ್ಕೆ ಮುಂಚೆ ದಾರಿಹೋಕರ ತಲೆ ಹೊಡೆದು ಸಂಸಾರವನ್ನು ಸಲಹುತ್ತಿದ್ದ. ಮಹಾದರೋಡೆಕಾರ, ಕೊಲೆಗಾರನಾಗಿದ್ದ. ಒಂದುದಿನ ನಾರದರು ಅವನ ಕೈಗೆ ಸಿಕ್ಕರು. ಅವರನ್ನು ಮುಗಿಸಿಬಿಡುವುದರಲ್ಲಿದ್ದ. ಆದರೆ, ನಾರದರು ಒಂದು ಪ್ರಶ್ನೆ ಕೇಳಿದರು: 'ಇಷ್ಟೆಲ್ಲ ಪಾಪಕೃತ್ಯಮಾಡಿ ಮಡದಿಮಕ್ಕಳು ತಂದೆತಾಯಿಗಳನ್ನು ಸಲಹುತ್ತೀ. ನಿನ್ನ ಪಾಪದಲ್ಲಿ ಅವರೇನಾದರೂ ಭಾಗಿಗಳಾತ್ತಾರೆಯೇ ? ಕೇಳಿಬಂದು ನನ್ನ ತಲೆಹೊಡೆ' ಎಂದರು. ಆ ದರೋಡೆಕಾರ ಮನೆಗೆಹೋಗಿ ಎಲ್ಲರನ್ನು ಕೇಳುತ್ತಾನೆ. ಯಾರೊಬ್ಬರೂ ಅವನ ಪಾಪದಲ್ಲಿ ಭಾಗಿಗಳಾಗಲು ಇಚ್ಛಿಸುವುದಿಲ್ಲ. ಆದರೆ ಅವನ ಪಾಪಕೃತ್ಯದ ಫಲವನ್ನು ಮಾತ್ರ ಉಣ್ಣುತ್ತಾನೆ. ಆ ಕಳ್ಳನಿಗೆ ಸತಿಸುತ ಮಾತಾಪಿತರೆಂಬ ಭ್ರಾಂತಿ ನೀಗಿ ಗುರುಪಾದದಲ್ಲಿ ಶರಣಾಗುತ್ತಾನೆ. ಆ ಕೊನೆಯ ಘಳಿಗೆಯಲ್ಲಿ ನಿನಗೆ ಆಗುವವನು ಅವನೊಬ್ಬನೇ. ಮಾನವರನ್ನು ಮರೆಹೊಕ್ಕು ಸುಮ್ಮನೆ ವ್ಯರ್ಥವಾಗಿ ಕೆಟ್ಟುಹೋಗದೆ ಅವನಲ್ಲೇ ಶರಣಾಗು. ಅವನ ಹೊರತಾಗಿ ಮತ್ತೆ ಯಾರಿಂದಲೂ ಪರಿಹಾರ ದೊರೆಯುವುದಿಲ್ಲ. ಈ ಸತ್ಯ, ಸಾಧಕನಿಗೆ, ಕ್ರಮೇಣ ಕ್ರಮೇಣ ಅರಿವಾಗುತ್ತದೆ.

ವೃತ್ತ : ೨೩

ವಿಪುಳಾನಂಗಾಗ್ನಿಯಿಂ ಬಂದೆಳೆದುಗವಣಿಪಾಶಾಗ್ನಿಯಿಂದಂ ನಿರರ್ಥಂ
ಕುಪಿತೋದ್ಭೂತಾಗ್ನಿಯಿಂದಂ ಹರಹರ ಮಿಗೆ ಬೇವುತ್ತುಮಿರ್ದಪ್ಪೆನಾನಂ-
ದಪಯೋವಾರಾಶಿ ನಿಮ್ಮೀ ವಿಮಳಕರತಳಾಬ್ಜಂಗಳಿಂದೆತ್ತುತಯ್ಯೋ
ಕೃಪೆಯಿಂದಂ ನೋಡಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೨೩

ಅರ್ಥ: ವಿಪುಳ= ಅಧಿಕತರವಾದ; ಅನಂಗ= ಕಾಮ; ಅಗ್ನಿಯಿಂ= ಅಗ್ನಿಯಿಂದಲೂ; ಬಂದು ಎಳೆದು; ಉರವಣಿಪ= ಪ್ರಜಲಿಸುವ ಪ್ರಚಂಡವಾದ; ಆಶೆ= ಆಶೆಎಂಬ; ಅಗ್ನಿಯಿಂದಂ= ಅಗ್ನಿಯಿಂದಲೂ; ನಿರರ್ಥಂ= ನಿರ್ನಿಮಿತ್ತವಾಗಿ; ಕುಪಿತ= ಕೋಪದಿಂದ; ಉದ್ಭೂತ= ಹುಟ್ಟಿದ; ಅಗ್ನಿಯಿಂದಂ= ಅಗ್ನಿಯಿಂದಲೂ, ಹರಹ ವಿಗೆ = ಚೆನ್ನಾಗಿ; ಬೇವುತ್ತುಮಿರ್ದಪ್ಪ= ಬೇಯುತ್ತಿರುವೆನು; ಆನಂದಪಯೋರಾ = ಆನಂದವೆಂಬ ಸಮುದ್ರದಂತಿರುವ ನಿಮ್ಮ; ಈ ವಿಮಳಕರತಳಾಬ್ಜಂಗಳಿಂದ= ನಿರ್ಮಲವಾದ ಹಸ್ತಗಿಳಿಂದ ಎತ್ತುತ ಅಯ್ಯೋ ಕೃಪೆಯಿಂದಂ= ಕರುಣೆಯಿಂದ ಪೋ ಪಂಪಾಪುರದರಸ ವಿರೂಪಾಕ್ಷನೇ ಎನ್ನನ್ನು ರಕ್ಷಿಸು.

ಭಾವಾರ್ಥ: ಅಧಿಕತರವಾದ ಕಾಮವೆಂಬ ಅಗ್ನಿಯಿಂದಲೂ, ಆಸೆ ಯೆಂಬ ಅಗ್ನಿಯಿಂದಲೂ, ಕೋಪವೆಂಬ ಅಗ್ನಿಯಿಂದಲೂ ಜೀವ ಚೆನ್ನಾಗಿ ಸುಟ್ಟುಹೋಗುತ್ತಿದೆ. ಹೀಗೆ ಸರ್ವದಿಕ್ಕಿನಿಂದಲೂ ಸುಡುತ್ತಿರುವ ಅಗ್ನಿ ಯಿಂದ ಆನಂದಸಾಗರದಂತಿರುವ ಹಂಪೆಯೊಡೆಯನ ಅಮೃತಶೀತಲ ಹಸ್ತ ದಿಂದ ಮೇಲಕ್ಕೆತ್ತಿ ಉದ್ಧಾರಮಾಡು ವಿರೂಪಾಕ್ಷಸ್ವಾಮಿಯೇ.

ಟಿಪ್ಪಣಿ: ಅಗ್ನಿಯಿಂದ ರಕ್ಷಣೆ ಕೊಡಬಲ್ಲುದು ಜಲವೊಂದೇ. ಆ ದರೆ, ಈ ಜೀವನವನ್ನು ಸುಡುತ್ತಿರುವ ಅಗ್ನಿ ನಾಡಾಡಿ ಅಗ್ನಿಯಲ್ಲ, ಕಾಮ ಕ್ರೋಧ ಲೋಭವೆಂಬ ಸೂಕ್ಷ್ಮಾಗ್ನಿಯಿಂದ ಬೆಂದುಹೋಗುತ್ತಿರುವ ಜೀವಕ್ಕೆ ಆನಂದಪಯೋರಾಶಿಯೇ ಆಗಿರುವ ಭಗವತ್ಕೃಪೆಯಿಂದ ಜಲಸೇಚನೆಯೇ ಆಗಬೇಕು. ಕವಿ ಈ ಸತ್ಯವನ್ನು ಚಮತ್ಕಾರದಿಂದ ಇಲ್ಲಿ ಹೇಳಿದ್ದಾನೆ.

ವೃತ್ತ : ೨೪

ನವೆದೆಂ ರೋಗಂಗಳಿಂದಂ ಸೆಡೆದೆನನುದಿನಂ ಸೇವೆಯಿಂದಂ ನಿರರ್ಥಂ
ಸವೆದೆಂ ಕಾಮಂಗಳಿಂದಂ ಮಿಗೆ ಪರಿಭವದೊಳ್ ಬಂದೆ ನಾನಾಸೆಯಿಂದಂ
ತವಿಲಾದೆಂ ಕೋಪದಿಂದಳ್ಕಿದೆನತಿಮದದಿಂ ಮುಂದುಗೆಟ್ಟಿರ್ದಪೆಂ ಶಂ-
ಭುವೆ ನೀಲಗ್ರೀವ ಪಂಪಾಪುರವರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೨೪

ಅರ್ಥ: ರೋಗಂಗಳಿಂದ= ರೋಗಗಳಿಂದ; ನವೆದೆ= ಯಾತನೆಪಟ್ಟು ಸಣ್ಣ

ಸೇವೆಯಿಂದಂ= ಪರಸೇವೆಯಿಂದ; ಅನುದಿನಂ= ದಿನದಿನವೂ; ಸೆಡೆದೆಂ= (ದೇಹವು ಬಗ್ಗಿ ಹೋಗಿದೆ); ಕಾಮಂಗಳಿಂದಂ= ಕಾಮಗಳಿಂದ; ನಿರರ್ಥಂ= ನಿಷ್ಕಾರಣವಾಗಿ ಸವೆದೆಂ =ಸವೆದುಹೋದೆ; ಮಿಗೆ= ಹೆಚ್ಚಾದ; ಪರಿಭವದೊಳ್= ಸೋಲಿನ ಪರಂಪರೆಗಳನ್ನು ದಾಟಿಬಂದೆ; ನಾನ್ ಆಸೆಯಿಂದ ತವಿಲಾದೆ= ದರಿದ್ರನಾದೆ; ಕೋಪದಿಂದ ಅಳ್ಕಿದೆ= ಅಳುಕಿದೆ; ಅತಿ ಮದದಿಂದ ಮುಂದುಗೆಟ್ಟಿರ್ದೆ= ಮುಂದಿನದಾರಿಯೇ ಕಾಣದಂತೆ ದಿಕ್ಕುತಪ್ಪಿ ಹೋಗಿದ್ದೇವೆ. ಶಂಭುವೇ; ನೀಲಗ್ರೀವ= ವಿಷಕಂಠನೇ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ= ನನ್ನನ್ನು ರಕ್ಷಿಸುವುದು

ಭಾವಾರ್ಥ: ರೋಗಗಳಿಂದ ನರಳಿ ಸಣ್ಣಾದೆ. ದಿನದಿನವೂ ಪರಸೇವೆಯನ್ನು ಮಾಡಿ ದೇಹವು ಬಗ್ಗಿ ವಕ್ರವಕ್ರವಾಗಿದೆ. ಕಾಮದಿಂದ ದೇಹವೆಲ್ಲ ಸವೆದಿದೆ. ಅನೇಕ ಸೋಲಿನ ಪರಂಪರೆಗಳನ್ನೇ ದಾಟಿಬಂದೆ. ನಾನಾ ದುರಾಸೆಯಿಂದ ದರಿದ್ರನಾದೆ. ಕೋಪದಿಂದ ಅಳುಕಿದೆ ಅತಿ ಮದದಿಂದ ಮುಂದೆ ದಾರಿಕಾಣದಂತಾಗಿದ್ದೇನೆ. ಇಂಥಾ ನನ್ನನ್ನು ವಿಷಕಂಠನಾದ ಪಂಪಾಪುರದ ಒಡೆಯನಾದ ವಿರೂಪಾಕ್ಷಸ್ವಾಮಿಯೇ ನನ್ನನ್ನು ರಕ್ಷಿಸು.

ಟಿಪ್ಪಣಿ: ರೋಗ, ಪರಸೇವೆ, ಕಾಮ, ಸೋಲು, ದುರಾಸೆ, ಕೋಪ ಮುಂತಾದ ವಿಷದಿಂದ ಆವೃತನಾದ ಜೀವನನ್ನು ಉದ್ಧರಿಸಬೇಕಾದರೆ, ವಿಷಕಂಠನೇ ಆಗಬೇಕು. ಈ ವಿಷವನ್ನು ಆಪೋಶನ ಮಾಡುವಂಥ ಸಾಮರ್ಥ್ಯ ಅಂತಿಂಥವರಿಂದ ಸಾಧ್ಯವಿಲ್ಲ ಅವರಿವರನ್ನು ಮರೆಹೊಕ್ಕು ಪ್ರಯೋಜನವಿಲ್ಲ. ಆದ್ದರಿಂದ ವಿಷಕಂಠನಾದ, ಹಂಪೆಯರಸನಾದ ವಿರೂಪಾಕ್ಷಸ್ವಾಮಿಯೇ ತನ್ನನ್ನು ಉದ್ಧರಿಸಬೇಕು ಎಂದು ಸಾಧಕ ಇಲ್ಲಿ ಮೊರೆಯಿಡುತ್ತಾನೆ.

ವೃತ್ತ: ೨೫

ಅಯ್ಯೋ ಸಂಸಾರಸಂಗಕ್ಕೆಜಿಯಡಜಿಗಿದೆಂ ಮಳ್ಗಿದೆಂ ಮಾಜುವೋದೆಂ
ಮುಯ್ಯಾಂತೆಂ ಮುಂದುಗೆಟ್ಟೆಂ ಸೆಡೆದೆಸುಡುಗಿದೆಂ ಮಾಸಿದೆಂ ಸೂಸಿದೆಂ ಕಿ-
ರ್ಗಯ್ಯಾದೆಂ ಕಂದಿದೆಂ ಕುಂದಿದೆನಲಸಿದೆನಾಸತ್ತೆನಲ್ಲಾಡಿದೆಂ ನೀ-
ನಯ್ಯಾ ಕೈಕೊಂಡು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೨೫

ಅರ್ಥ ; ಆಯ್ಯೋ ಸಂಸಾರಸಂಗಕ್ಕೆ; ಅರಿಯದೆ= ತಿಳಿಯದೆ; ಎರಗಿದೆ= ಬಿದ್ದೆ; ಮಳ್ಗಿದೆಂ= ನುಚ್ಚುನೂರಾಗಿ ಹಾಳಾದೆ; ಮಾಱುವೋದೆಂ= (ಈ ಸಂಸಾರದ ಥಳಕಿಗೆ) ಮೋಹಿತನಾದೆ; ಮುಯ್ಯಾಂತೆಂ= ಹೆಗಲುಹಚ್ಚಿ ದುಡಿದೆ; ಮುಂದುಗೆಟ್ಟೆಂ= ದಾರಿಗಾಣದವನಾದೆ; ಸೆಡೆದೆಂ= ಬಗ್ಗಿಹೋದೆ; ಉಡುಗಿದೆಂ= ಕೃಶವಾದೆ; ಮಾಸಿದೆಂ = ಮ್ಲಾನವಾದೆ; ಸೂಸಿದೆ= (ಸಂಸಾರದ ಬೀಸುವಕಲ್ಲಿಗೆ ಸಿಕ್ಕು) ನುಣ್ಣಗೆ ಅರೆದಂತೆ ಆದೆ; ಕಿರ್ಗರ್ಯಾದೆಂ= (ಕಿರ್ಗು= ಕಿಳ್ಗು= ಸಾವಾವ್ವ ಎತ್ತರಕ್ಕಿಂತ ಕಿರಿದಾಗಿರು) ಸಣ್ಣಾಗಿಹೋದೆ; ಕಂದಿದೆ; ಕುಂದಿದೆ; ಅಲಸಿದೆ= ಆಯಾಸಗೊಂಡೆ; ಆಸತ್ತೆ= ಆಸರವನ್ನು, ನೆರವನ್ನು ಸಹಾಯವನ್ನು ಬಯಸಿ ಬಾಯ್ಬಿಟ್ಟು; ಅಲ್ಲಾಡಿದೆ= ಗಡಗಡವೆ ನಡುಗಿಹೋದೆ; ನೀನ್ ಆಯ್ಯೋ ಕೈಕೊಂಡು= ಕೈಹಿಡಿದು ರಕ್ಷಿಪ್ಪುದು= ರಕ್ಷಿಸುವುದು.

ಭಾವಾರ್ಥ: ಅಯ್ಯೋ, ತಿಳಿಯದೆ ಸಂಸಾರ ಸಂಗಕ್ಕೆ ಬಿದ್ದೆ. ಈ ಸಂಸಾರದಲ್ಲಿ ನುಚ್ಚುನೂರಾಗಿ ಹಾಳಾದೆ. ಈ ಸಂಸಾರದ ಕ್ಷಣಿಕ ಆಕರ್ಷಣೆಯಿಂದ ಮೋಹಿತನಾದೆ. ಈ ಸಂಸಾರವೆಂಬ ನೊಗಕ್ಕೆ ಹೆಗಲೊಡ್ಡಿ ಗಾಣದೆತ್ತಿನಂತೆ ದುಡಿದೆ. ಈಗ ಮುಂದಿನ ದಾರಿಯನ್ನೇ ಕಾಣದವನಾಗಿದ್ದೇನೆ. ಈ ಸಂಸಾರದ ದೆಸೆಯಿಂದ ಮನ ಮೈ ಎರಡೂ ಬಗ್ಗಿಹೋಗಿದೆ. ಕೃಶನಾಗಿದ್ದೇನೆ. ಮುಖದಲ್ಲಿ ಕಳೆಯಿಲ್ಲದೆ ಮ್ಲಾನಮುಖನಾಗಿದ್ದೇನೆ. ಈ ಸಂಸಾರದ ಬೀಸುವಕಲ್ಲಿನ ಅಡಿಗೆ ಸಿಕ್ಕು ಪುಡಿಪುಡಿಯಾದಂತೆ ನುಣ್ಣಗೆ ಆಗಿದ್ದೇನೆ. ಸಣ್ಣಗೆ ಆಗಿದ್ದೇನೆ, ಕಂದಿದ್ದೇನೆ, ಕುಂದಿದ್ದೇನೆ. ಆಯಾಸಗೊಂಡಿದ್ದೇನೆ ಸಂಸಾರ ಸಂಗದಿಂದ ಥರಥರ ನಡುಗಿ ಹೋಗಿದ್ದೇನೆ ಅಯ್ಯಾ, ಪಂಪಾಪುರದ ಒಡೆಯನೇ ಎನ್ನನ್ನು ರಕ್ಷಿಸು.

ಟಿಪ್ಪಣಿ : ಯೌವನದ ಹುಮ್ಮಸ್ಸಿನಲ್ಲಿ ಸಂಸಾರಸಂಗ ಬಹು ಮೋಹಕವಾಗಿ ತೋರುತ್ತದೆ. ಅದಕಿಂತ ಸೊಗಸಾದುದು, ಸುಖದಾಯಕವಾದುದು ಇನ್ನಿಲ್ಲಿ ಎಂಬಂಥ ಹುಂಬತನದಲ್ಲಿ, ಹಾರುವ ಹದ್ದು ಕೆಳಗಿರುವ ಮಾಂಸಕ್ಕೆ ಎರಗುವಂತೆ ಸಂಸಾರಸಂಗಕ್ಕೆ ಎರಗುತ್ತಾನೆ ಮನುಷ್ಯ ! ಮೈಯಲ್ಲಿ ನೆಣ, ಕೈಯ್ಯಲ್ಲಿ ಹಣ ಇರುವವರೆಗೆ ಕಾಲಿಗೆಬಂದಂತೆ ಕುಣಿಯುತ್ತಾನೆ. ಆದರೆ ಮೈ ಮುಪ್ಪಾಗವೆ ಯಿರುವುದಿಲ್ಲ. ರೋಗದಿಂದ ನರಳುತ್ತಾನೆ. ಮೊ

ದಲಿದ್ದ ಆ ದೇಹದಾರ್ಢ್ಯ ಮಾಯವಾಗುತ್ತದೆ. ಆಗ, ಯೌವನದ ಮಬ್ಬಿನಲ್ಲಿ ಮಾಡಿದ ಕೆಲಸಗಳಿಗೆ ಇಳಿವಯಸ್ಸಿನಲ್ಲಿ ಚಕ್ರಬಡ್ಡಿ ಸಹಿತವಾಗಿ ದಂಡ ತೆರಬೇಕಾಗುತ್ತದೆ. ತಾನು ಇದುವರೆಗೆ, ಸತ್ಯ, ಶಾಶ್ವತ, ಸುಖ, ಎಂದು ನಂಬಿದುದು ಕೇವಲ ಕ್ಷಣಿಕ, ದುಃಖದಾಯಕ ಎಂದು ಆಗ ಗೊತ್ತಾಗುತ್ತದೆ. ಸಂಸಾರನಿರಸವೆಂಬ ಸತ್ಯ ಗೋಚರಿಸುತ್ತದೆ. ಸಂಸಾರ ಹೇಯವೆಂದು ತೋರಿದಾಗ ಭಕ್ತ ಒಂದು ಹೆಜ್ಜೆ ಮುಂದೆ ಯಿಡುತ್ತಾನೆ. ಇದು ಭಕ್ತನ ಆಧ್ಯಾತ್ಮಿಕ ಪ್ರಗತಿಯಲ್ಲಿ ಬಹು ಮುಖ್ಯವಾದ ಘಟ್ಟ. ಪ್ರತಿಯೊಬ್ಬ ಆಧ್ಯಾತ್ಮಿಕ ಪುರುಷನ ಜೀವನದಲ್ಲೂ ಆಗಲೇಬೇಕಾದ ಘಟನೆ. ಸಂಸಾರಹೇಯ ಸ್ಥಳದಲ್ಲಿ ಭಕ್ತಿಭಂಡಾರಿ ಬಸವಣ್ಣನವರು ೬೩ ವಚನಗಳಲ್ಲಿ ತಮ್ಮ ಎದೆಯ ತಳಮಳವನ್ನು ತೋಡಿಕೊಂಡಿದ್ದಾರೆ. *"ಸಂಸಾರವೆಂಬ ಬಲೆಯಲ್ಲಿ ಸಿಲುಕಿದೆನಯ್ಯಾ" ಎಂದು ಹಲುಬಿದ್ದಾರೆ. ಸಂಸಾರದಲ್ಲಿ ವಿರಕ್ತಿಹುಟ್ಟದ ಹೊರತು ಸಾಧಕ ಮುಂದುವರಿಯುವುದೇ ಸಾಧ್ಯವಿಲ್ಲ.

ಹರಿಹರ ಮಹಾಕವಿ ಯೌವನ ಧರ್ಮವನ್ನು ಕುರಿತು ಬಣ್ಣಿಸುವಾಗ ೬ ರಿಂದ ೧೧ ನೆಯ ವೃತ್ತದವರೆಗೆ ಅರಿಷಡ್ವರ್ಗಗಳ ದುರ್ವ್ಯಾಪಾರವನ್ನು ಕುರಿತು ಹೇಳಿದ್ದಾನೆ. ೧೨ ರಿಂದ ೧೬ ವರೆಗೆ ಮನುಷ್ಯನ ಮನಸ್ಸು, ಬುದ್ಧಿ ಚಿತ್ತ, ಅಹಂಕಾರದ ವ್ಯಾಪಾರವನ್ನು ವರ್ಣಿಸಿದ್ದಾನೆ. ೧೭ ರಿಂದ ೨೪ ರ ವರೆಗೂ ಸಂಸಾರಿಯಾದವನು ತನ್ನ ವ್ಯವಹಾರದಿಂದ, ಪರಸೇವೆಯಿಂದ, ದೈನ್ಯತೆಯಿಂದ, ತಾಪತ್ರಯಗಳಿಂದ ಹೇಗೆ ಜಜ್ಜಿಹೋಗುತ್ತಾನೆ ಎಂಬುದನ್ನು ವಿಮರ್ಶಿಸಿದ್ದಾನೆ. ಇಷ್ಟೆಲ್ಲ ಪರಿಪರಿಯ ದುಃಖಗಳನ್ನು ಅನುಭವಿಸಿ ಕೊನೆಗೊಮ್ಮೆ ಸಂಸಾರಹೇಯಸ್ಥಳವನ್ನು ಮುಟ್ಟುತ್ತಾನೆ.

ಆಗ ಅವನ ಎದೆಯ ಯಾತನೆಯನ್ನು ಎಷ್ಟೆಂದು ಹೇಳಬೇಕು. ಹರಿಹರ ಮಹಾಕವಿ, ಅರಿಯದೆ ಎರಗಿದ ಸಂಸಾರದ ದುಃಖಗಳನ್ನು ಅರಿತಮೇಲೆ ಎಂಥ ಹೃದಯ ವಿದ್ರಾವಕ ನುಡಿಗಳಿಂದ ಭಗವಂತನಲ್ಲಿ ಮೊರೆಯಿಡು

---

* ಬಸವಣ್ಣನವರ ಷಟ್‌ಸ್ಥಲ ವಚನಗಳು ಸಂ: ಶಿ. ಶಿ. ಬಸವನಾಳರು, ಪುಟ ೪ ರಿಂದ ೦೯ ರ ವರೆಗೆ ನೋಡಿ.

ತ್ತಾನೆ! ಈ ಸಂಸಾರಸಂಗದ ದುರಂತವನ್ನು ಬಣ್ಣಿಸಲು ಒಂದು ಎರಡು ಮೂರು ಪದಗಳಿಂದ ಸಾಧ್ಯವಲ್ಲ ಹದಿನಾಲ್ಕು ಪದಗಳಿಂದ (ಮಳ್ಗಿದೆಂ ಎಂಬುದರಿಂದ ಅಲ್ಲಾಡಿದೆಂ ಎಂಬುದರ ವರೆಗೆ) ಹದಿನಾಲ್ಕು ಕ್ರಿಯೊಪದಗ ಳಿಂದ ವರ್ಣಿಸಿದ್ದಾನೆ. ಭಕ್ತ ನಿರ್ಭರವಾಗಿ ಓದುವಾಗ ಆ ಕ್ರಿಯಾಪದಗಳು ಒಂದಾದಮೇಲೊಂದು ಅಪ್ಪಳಿಸಿ ಜರ್ಜರಿತ ಹೃದಯದ ಸ್ಪಷ್ಟವಾದ ಚಿತ್ರವ ನ್ನೇ ಕಣ್ಮುಂದೆ ಕಟ್ಟುತ್ತದೆ.

ಭಗವಂತನನ್ನು ಒಲಿಸಿಕೊಂಬ ಭಕ್ತ ಅಷ್ಟು ಗಾಢವಾದ, ತೀವ್ರವಾದ ಬಲವತ್ತರವಾದ ಆಕಾಂಕ್ಷೆಯಿಂದ ಹಾರೈಕೆಯಿಂದ ಕರೆದಲ್ಲದೆ ಅವನು ಓಗೊಡಬಲ್ಲನೇ! ಈ ವೃತ್ತದಲ್ಲಿ ಹರಿಹರ ಮಹಾಕವಿ ತಾನು ಅನುಭವಿ ಸಿದ ಸತ್ಯವನ್ನು ಹೇಳಿರಬೇಕಲ್ಲದೆ, ಅದು ಪರರ ಬಗೆಯ ಬಣ್ಣನೆಯಲ್ಲಿ. ಹಾ ಗೂ ಪರರಿಗಾಗಿ ತಾನು ಉಪದೇಶಮಾಡಿದಂತೆಯೂ ಅಲ್ಲ ಎನ್ನಬಹುದು. ೩೩ನೆಯ ವೃತ್ತದವರೆಗೆ ಸಂಸಾರದ ಭ್ರಾಂತಿಯಿಂದ ಬಿಡುಗಡೆ ಹೊಂದಿದವ ನ ಮನೋವೇದನೆಯನ್ನು ವಿವರಿಸಲಾಗಿದೆ.

ವೃತ್ತ: ೨೬

ಉರಗಾಸ್ಯಾಲಗ್ನ ಭಗ್ನಪ್ರಚಲಿತಹರಿವೋಲ್ ವ್ಯಾಘ್ರವಕ್ತ್ರಪ್ರಯುಕ್ತ-
ಸ್ಫುರಿತಾತಂಕಾಂತರಂಗಸ್ಥಿತಿಮೃಗಶಿಶುವೊಲ್ ಸಿಂಹಹಸ್ತಾವಲಂಬ-
ದ್ವಿರದಂಬೋಲಿರ್ದೆನೀ ಮಾಯೆಯ ಮುಖದೆಡೆಯೊಳ್ ಬೇಗದಿಂ ಪಿಂಗಿಸಾ ಮುದ್
ಗುರುವೇ ಮತ್ಸ್ವಾಮಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೨೬

ಅರ್ಥ: ಉರಗ= ಹಾವು; ಆಸ್ಯ= ಮುಖ; ಆಲಗ್ನ= ಸೇರಿಕೊಂಡ; ಪ್ರಚಲಿತ= ಹಾರುವ; ಹರಿವೊಲ್= ಕಪ್ಪೆಯಂತೆ; ವ್ಯಾಘ್ರ= ಹುಲಿಯ; ವಕ್ತ್ರ= ಮುಖದಲ್ಲಿ; ಪ್ರಯುಕ್ತ= ಸೇರಿದ; ಕೂಡಿದ; ಸ್ಫುರಿತ= ಗಡಗಡನೆ ನಡುಗುವ; ಆತಂಕ= ಅಂಜಿಕೆಯ; ಅಂತರಂಗಸ್ಥಿತ= ಅಂತರಂಗದಸ್ಥಿತಿಯ; ಮೃಗ= ಜಿಂಕೆಯ ಶಿಶುವೊಲ್= ಶಿಶುವಿನಂತೆ; ಸಿಂಹದ ಹಸ್ತಾವಲಂಬ= ಕೈಯಲ್ಲಿ ಸಿಕ್ಕ; ದ್ವಿರದ=

ಆನೆಯು; ಅಂಬೋಲಿರ್ದೆ= ರೀತಿಯಲ್ಲಿ ಇದ್ದೆನು; ಈ ಮಾಯೆಯ ಮುಖದೆಡೆಯೋಳ್ = ಈ ಮಾಯೆಯ ಮುಖದಡಿಯಲ್ಲೇ; ಬೇಗದಿಂ= ಬೇಗನೆ; ಪಿಂಗಿಸಾ= ಕಳೆ; ಮದ್ಗುರುವೇ= ನನ್ನಗುರುವೇ; ಮತ್ಸ್ವಾಮಿ= ನನ್ನಸ್ವಾಮಿಯೇ; ಪಂಪಾಪುರದರಸ ವಿರೂಪಾಕ್ಷನೇ ರಕ್ಷಿಸು.

**ಭಾವಾರ್ಥ :** ಈ ಮಾಯೆಯ ಮುಖದ ಎಡೆಯಲ್ಲಿ, ಹಾವಿನಬಾಯಲ್ಲಿ ಸಿಕ್ಕ ಕಪ್ಪೆಯಂತೆಯೂ, ಹುಲಿಯ ದವಡೆಯಲ್ಲಿ ಸಿಕ್ಕ ಜಿಂಕೆಯಂತೆಯೂ, ಸಿಂಹನ ಕೈಯಲ್ಲಿ ಸಿಕ್ಕ ಆನೆಯಂತೆಯೂ (ಪೂರ್ಣ ಬದುಕಿರದೆ, ಪೂರ್ಣ ಸತ್ತುಹೋಗದೆ) ಅತ್ಯಂತ ಯಾತನೆಗೊಂಡಿದ್ದೇನೆ. ಈ ಮಾಯೆಯಿಂದ ಬೇಗನೇ ನನ್ನನ್ನು ಬಿಡುಗಡೆಮಾಡಿ ಕಾಪಾಡು ಗುರುವೇ, ಸ್ವಾಮಿ ಹಂಪೆಯೊಡೆಯ ಶ್ರೀ ವಿರೂಪಾಕ್ಷನೆ.

**ಟಿಪ್ಪಣಿ :** ಈ ವೃತ್ತದಲ್ಲಿ ಬಳಸಿರುವ ಮೂರು ಉಪಮೆಗಳನ್ನು ಕಾವ್ಯದೃಷ್ಟಿಯಿಂದ ನೋಡಿದರೆ ಸಂಸಾರ ಹೇಯಸ್ಥಳದಲ್ಲಿರುವ ಭಕ್ತನ ಹೃದಯದ ಕಾತರವನ್ನು, ಯಾತನೆಯನ್ನು ಎಷ್ಟು ಸಮಂಜಸವಾಗಿ ಕವಿ ಚಿತ್ರಿಸಿದ್ದಾನೆ ಎಂಬುದು ವ್ಯಕ್ತವಾಗುತ್ತದೆ. ಹಾವಿನಬಾಯಿಗೆ ಸಿಕ್ಕ ಕಪ್ಪೆಯ ಸ್ಥಿತಿಯನ್ನು ನೋಡಿದವರು ಬಲ್ಲರು. ಅದು ಒಟಗುಟ್ಟುವ ರೋದನ ಎಂಥವರ ಎದೆಯನ್ನು ಕರಗಿಸಬಲ್ಲುದು. ಅದು ಪೂರ್ಣ ಸತ್ತುಹೋಗಿದ್ದರೆ ಅದಕ್ಕೆ ಆ ದುಃಖವೇ ಯಿರುತ್ತಿರಲಿಲ್ಲ. ಹಾವಿನಬಾಯಿಗೆ ಸಿಲುಕದಿದ್ದರೂ ಚಿಂತೆಯಿರಲಿಲ್ಲ. ಆದರೆ ಹಾವಿನಬಾಯಿಗೆ ಸಿಕ್ಕು ಸಾಯದಿರುವ ಕಪ್ಪೆ, ಹುಲಿಯ ಬಾಯಿಗೆ ಸಿಕ್ಕ ಜಿಂಕೆ, ಸಿಂಹನಕೈಗೆ ಸಿಕ್ಕ ಆನೆಯ ಸ್ಥಿತಿಯಂತೆ ಮಾಯೆಯಿಂದ ಅರ್ಧ ಅಗಿಯಲ್ಪಟ್ಟ ಈ ಮನುಷ್ಯನ ಯಾತನೆಯೂಕೂಡ. ಮಾಯೆಯ ಕೈಗೆ ಸಿಗದಿದ್ದರೆ ದುಃಖವೇ ಯಿಲ್ಲ. ಸಿಕ್ಕರೂಕೂಡ ವಿವೇಕ ಜಾಗ್ರತವಾಗದಿದ್ದರೂ ಚಿಂತೆಯಿಲ್ಲ. ಈಗ ಸಾಧಕ ಸಂಸಾರದ ಅಸಹನೀಯ ಯಾತನೆಗಳನ್ನು ಅನುಭವಿಸಿ ಅದರಿಂದ ಬಿಡುಗಡೆ ಪಡೆಯಲು ಹವಣಿಸುತ್ತಾನೆ. ಆದರೆ ಬೇಗನೆ ಬಿಡುಗಡೆಯಾಗುವುದಿಲ್ಲ ಆಗ "ಮದ್ಗುರುವೇ ಮತ್ಸ್ವಾಮಿ ಬೇಗದಿಂ ಪಿಂಗಿಸಾ" ಎಂದು ಭಕ್ತಕವಿ ಮೊರೆಯಿಡುತ್ತಾನೆ. ಇಂಥ ಹೃದಯಕಾತರತೆಯಿಂದ ಸ್ವಾಮಿಯ ಮನ ಕರಗಲಾರದೆ? ಇಲ್ಲಿಂದ ಗುರುಕರುಣಸ್ಥಳದ ವೃತ್ತಗಳು ಪ್ರಾರಂಭವಾಗುತ್ತವೆ.

## ವೃತ್ತ: ೩೭

ಲಲನಾಸಂಭೋಗರೋಗಂ ಪಸಿವನುಡುಗಿಸುತ್ತಾರ್ತಿಯಂ ಪೊಂಗಿಸುತ್ತುಂ
ಬಲಮಂ ಕೈಗುಂದಿಸುತ್ತುಂ ಸುಜನವಚನಪಥ್ಯಕ್ಕೆ ತಾಂ ವಕ್ರಿಸುತ್ತುಂ
ಸಲೆ ಲಜ್ಜಾಭಾವಮಂ ಮೀಱಿಸುತುಮಿದೆಯಿದಕ್ಕೌಷಧಂಗೊಟ್ಟು ತಂದೇ
ತಲೆಯೋಳ್ ಕೈಯಿಟ್ಟು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೩೭

ಅರ್ಥ: ಲಲನಾ=ಸ್ತ್ರೀಯರ; ಸಂಭೋಗ=ಸಂಭೋಗವೆಂಬ; ರೋಗಂ= ರೋಗವು; ಪಸಿವನು=ಹಸಿವೆಯನ್ನು; ಉಡುಗಿಸುತ್ತ=ಹಿಂಗಿಸಿ ಅಥವಾ ಅಡಗಿಸಿ; ಆರ್ತಿಯುಂ=ಆಸೆಯನ್ನು; ಪೊಂಗಿಸುತ್ತುಂ=ಉಕ್ಕಿಸುತ್ತಾ; ಬಲವುಂ=ಶಕ್ತಿಯನ್ನು; ಕೈಗುಂದಿಸುತ್ತುಂ=ಕಡಿಮೆಮಾಡುತ್ತಾ; ಸುಜನ= ಒಳ್ಳೆಯವರ; ವಚನ= ಮಾತುಗಳೆಂಬ; ಪಥ್ಯಕ್ಕೆ= ನಿಯಮಿತ ಆಹಾರಕ್ಕೆ; ತಾಂ= ತಾನು; ವಕ್ರಿಸುತ್ತ= ಮುಖತಿರುಗಿಸಲೆ= ಹೆಚ್ಚಾದ; ಲಜ್ಜಾಭಾವವುಂ= ನಾಚಿಕೆಭಾವವನ್ನು; ಮೀಱಿಸುತಂ= ಅಂಕೆದಪ್ಪಿ ಹೋಗಿ ಇದೆ; ಇದಕ್ಕೆ ಔಷಧಂ ಗೊಟ್ಟು= ಔಷಧವನ್ನು ಕೊಟ್ಟು; ತಂದೇ ತಲೆಯ ಮೇಲೆ ಕೈಯಿಟ್ಟು= ಆಶೀರ್ವದಿಸಿ ಪಂಪಾಪುರದರಸ ವಿರೂಪಾಕ್ಷ ಎನ್ನನ್ನು ರಕ್ಷಿಸು.

(ಪೊಂಗು - ಎಂದರೆ ಉಕ್ಕುವುದು ಎಂಬ ಪದ ತೆಲುಗಿನಲ್ಲಿ ಈಗಲೂ ಪ್ರಚಾರದಲ್ಲಿದೆ. ಅದು ಮೂಲದ್ರಾವಿಡ ಶಬ್ದವಾಗಿರಬೇಕೆಂದು ತೋರುತ್ತದೆ.)

ಭಾವಾರ್ಥ: ಸ್ತ್ರೀ ಸಂಭೋಗವೆಂಬ ರೋಗಹಿಡಿದು ಹಸಿವೆಯೇ ಅಡಗಿಹೋಗಿದೆ; ಆದರೆ ತಿನ್ನಬೇಕೆಂಬ ದುರಾಸೆಮಾತ್ರ ಉಕ್ಕುತ್ತಿದೆ. ರೋಗದಿಂದ ಶಕ್ತಿಕ್ಷಯವಾಗುತ್ತಿದೆ. ಒಳ್ಳೆಯಜನರ ಮಾತುಗಳೆಂಬ ಪಥ್ಯವನ್ನು ಮಾಡಲಾರದೆ ಮುಖತಿರುಗಿಸುತ್ತಿದ್ದೇನೆ. ನಾಚಿಕೆ ಎಂಬುದೇ ಇಲ್ಲವಾಗುತ್ತದೆ. ಇದಕ್ಕೆ (ಈ ಸ್ತ್ರೀಸಂಭೋಗವೆಂಬ ರೋಗಕ್ಕೆ) ಒಂದೇ ಒಂದು ಔಷಧ ಅದು ಭಗವಂತನ ಆಶೀರ್ವಾದ ಕೃಪೆ. ಅಂಥ ಕೃಪೆಯೆಂಬ ಔಷಧವನ್ನು ಕೊಟ್ಟು ನನ್ನನ್ನು ರಕ್ಷಿಸು ತಂದೇ.

ಟಿಪ್ಪಣಿ: ಖಾಯಿಲೆಯಾದವರಿಗೆ ಹಸಿವಾಗದಿರುವುದು, ಆದರೆ ಏನು ಏನನ್ನೋ ತಿನ್ನಬೇಕೆಂಬ ದುರಾಸೆ ಹೆಚ್ಚುವುದು, ವೈದ್ಯರು ಹೇಳಿದ ಪಥ್ಯದಂತೆ ನಡೆದುಕೊಳ್ಳಲು ಆಗದಿರುವುದು - ಇವೆಲ್ಲವೂ ರೋಗ ಉಲ್ಬಣಾ

ವಸ್ಥೆಯಲ್ಲಿರುವವನ ಲಕ್ಷಣ. ಇಲ್ಲಿ ಮನುಷ್ಯನಿಗೆ ಬಡಿದಿರುವ ರೋಗ ಸ್ತ್ರೀ ಸಂಭೋಗರೋಗ. ಆದಕ್ಕೂ, ಅವೇ ಲಕ್ಷಣಗಳಿವೆ. ಈ ರೋಗ ಹಿಡಿದವನಿಗೆ ಹಸಿವೆಯೆಂಬುದೇ ಯಿಲ್ಲ. ಆದರೆ ಮತ್ತೆ ಮತ್ತೆ ಅದನ್ನೇ ತಿಂದೇನೆಂಬ ದುರಾಸೆಮಾತ್ರ ಉಕ್ಕುತ್ತಿರುತ್ತದೆ. ಶಕ್ತಿಕ್ಷಯವೂ ಆಗುತ್ತದೆ. ಕಾಮಿಯಾದವನಿಗೆ ಯಾರೇ ಎಷ್ಟೇ ಒಳ್ಳೆಯ ಮಾತುಗಳನ್ನು ಹೇಳಲಿ ಅವನುಮಾತ್ರ ಅವನ್ನೆಂದಿಗೂ ಪಾಲಿಸುವುದಿಲ್ಲ. ಅವನಿಗೆ ನಾಚಿಕೆಯೆಂಬುದೇ ಇಲ್ಲವಾಗುತ್ತದೆ. ಯಾರು ಏನೆಂದಾರು ಎಂಬ ಪ್ರಜ್ಞೆಯೇ ಅವನಿಗಿಲ್ಲ. ಇಂಥ ರೋಗ ಇಷ್ಟು ಉಲ್ಬಣಾವಸ್ಥೆಯಲ್ಲಿದ್ದಾಗ ಪ್ರಬಲವಾದ ಔಷಧವೇ ಬೇಕು. ವೈದ್ಯರೂ ನಿಷ್ಣಾತರಾಗಿರಬೇಕು. ಧನ್ವಂತರೀ ಚಿಕಿತ್ಸೆಯೇ ಆಗಬೇಕು. ಆ ಔಷಧವೆಂದರೆ ಗುರುಕೃಪೆ; ಭಗವತ್ ಆಶೀರ್ವಾದ. ಹರಿಹರ ಕವಿ, ತಂದೆಯಾದ ಪಂಪಾಪುರದ ಒಡೆಯನನ್ನು ಔಷಧಕೊಟ್ಟು ಕಾಪಾಡು ತಂದೇ ಎಂದು ಮೊರೆಯಿಡುತ್ತಾನೆ.

## ವೃತ್ತ: ೨೮

ದ್ವಿರದಂಮತ್ಸ್ಯಂ ಪತಂಗಂ ಭ್ರಮರ ನಹಿಯೆನಿಪ್ಪಿಂತಿವೇಕಿಂದ್ರಿಯಾರ್ಥಂ
ತಿರುಗುತ್ತಿರ್ದಪ್ಪುವಿಂತೀ ಜನನದ ಬಳಿಯೊಳ್ ದೇವ ಪಂಚೇಂದ್ರಿಯಾರ್ಥಂ
ವಿರಸಂ ವಿದ್ರೂಪಿ ಮೂರ್ಖಂ ವಿಷಯವಿಕಳನೇನಪ್ಪೆನೆಂತಿರ್ಪೆನಯ್ಯೋ
ಕರುಣೀ ಕೈಕೊಂಡು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೨೮

ಅರ್ಥ; ದ್ವಿರದಂ=ಆನೆ; ಮತ್ಸ್ಯಂ=ಮೀನು; ಪತಂಗಂ=ಪತಂಗವು; ಭ್ರಮರ= ಜೇನುಹುಳು; ಅಹಿ= ಹಾವು; ಎನಿಪ್ಪ= ಎನಿಸುವ ಇವೇಕೆ ? ಇಂದ್ರಿಯಾರ್ಥ= ಇಂದ್ರಿಯಗಳ ಸಲುವಾಗಿ; ಜನನದ= ಜನ್ಮದ; ಬಳಿಯೊಳ್= ಸಂಗಡ; ಇಂತೀ= ಈ ರೀತಿಯಾಗಿ ತಿರುಗುತ್ತಿರ್ದಪ್ಪುವು= ತಿರುಗುತ್ತಿವೆ; ದೇವ; ಪಂಚೇಂದ್ರಿಯಾರ್ಥಂ= ಕಣ್ಣು ಕಿವಿ ಮೂಗು ನಾಲಿಗೆ ಚರ್ಮ ಎಂಬ ಪಂಚೇದ್ರಿಯಗಳ ಸಲುವಾಗಿ ವಿರಸಂ= ವೈಮನಸ್ಸು; ವಿದ್ರೂಪಿ= ರೂಪುಗೆಟ್ಟವನು; ಮೂರ್ಖಂ= ಮೂರ್ಖನು; ವಿಷಯ ವಿಕಳನು= ವಿಷಯಾನುಭವಗಳಿಂದು ದಿಕ್ಕುಗೆಟ್ಟವನಾಗಿ; ಏನಪ್ಪೆನ್= ಏನಾದೆ; ಎಂತಿರ್ಪೆನ್= ಹೇಗಿದ್ದೇನೆ; ಅಯ್ಯೋ ಕರುಣಿ ಕೈಕೊಂಡು= ಸಹಾಯ ಮಾಡಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಸುವುದು.

**ಭಾವಾರ್ಥ:** ಕಣ್ಣು ಕಿವಿ ಮೂಗು ನಾಲಗೆ ಚರ್ಮ ಎಂಬ ಈ ಪಂಚೇಂದ್ರಿಯಗಳು ಆನೆ ಮೀನು ಪತಂಗ ಭ್ರಮರ ಹಾವು ಇದ್ದಂತೆ. ಈ ಪಂಚೇಂದ್ರಿಯಗಳು ಬಾಳಿನ ಸಂಗಡ ಒಡನೊಡನೆ ಬರುತ್ತಿವೆ. ಇವುಗಳ ದೆಸೆಯಿಂದ ವೈಮನಸ್ಸು ಬೆಳೆಯುತ್ತದೆ; ರೂಪಗೆಟ್ಟು ಹೋಗುತ್ತದೆ. ಮೂರ್ಖನಾಗುತ್ತಾನೆ. ವಿಷಯಗಳ ಭೋಗದಲ್ಲಿ ಮತಿವಿಕಳನಾಗುತ್ತಾನೆ. ಅಯ್ಯೋ ಕಾರುಣ್ಯಮಯಿಯಾದ ಪಂಪಾಪುರದ ಅರಸನೇ ರಕ್ಷಿಸು.

**ಟಿಪ್ಪಣಿ:** ಈ ಪಂಚೇಂದ್ರಿಯಗಳಲ್ಲಿ ಮೀನು ಪತಂಗ ಭ್ರಮರದಂತೆ ತುಂಬ ಚಂಚಲ ಸ್ವಭಾವದವುಗಳು. ಕೆಲವು ಆನೆಯಂತೆ ತುಂಬ ಮದದಿಂದ ಕೂಡಿವೆ. ಇನ್ನು ಕೆಲವು ಹಾವಿನಂತೆ ವಿಷಯುಕ್ತವಾಗಿವೆ. ಮನುಷ್ಯ ನಿಜವಾದ ಆನೆ ಮೀನು ಹಾವುಗಳ ಹಾವಳಿಯಿಂದ ತಪ್ಪಿಸಿಕೊಂಡು ಬಂದಾನು. ಆದರೆ ತನ್ನಲ್ಲಿಯೇ ಮನೆಮಾಡಿರುವ ಹಾವಿನಂತಹ ಆನೆಯಂತಹ ಪಂಚೇಂದ್ರಿಯಗಳಿಂದ ರಕ್ಷಣೆ ಹೊಂದುವುದಾದರೂ ಹೇಗೆ? ಅದಕ್ಕೆ ಕಾರುಣ್ಯಮಯಿಯಾದ ಪಂಪಾಪುರದ ಒಡೆಯನಾದ ವಿರೂಪಾಕ್ಷಸ್ವಾಮಿಯೇ ರಕ್ಷಣೆಯಾಗಿ ಬರಬೇಕು.

## ವೃತ್ತ: ೨೯

ತರದಿಂ ರೋಗಂ ವಿಷಂ ವೃಶ್ಚಿಕವನಲನಹಿವ್ಯಾಘ್ರಮುಗ್ರಾಯುಧಂಗಳ್
ದುರಿತಂ ಮತ್ತದ್ವಿಪಂ ಮೂರ್ಖತೆಪೊಡೆವ ಸಿಡಿಲ್ ದುರ್ಜನಂ ದುರ್ಮದಂ ತ
ಸ್ಕರರೆಂಬೀ ಕಂಟಕಸ್ತೋಮದ ನಡುವೊಡಲಿರ್ಪಂದಮೇಂ ಸೋಜಿಗಂ ಶಂ-
ಕರ ನೀಂ ಕೈಕೊಂಡು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೨೯

ಅರ್ಥ: ತರದಿಂ=ವಿಶೇಷವಾದ ರೀತಿಯ; ರೋಗಂ= ರೋಗವು; ವಿಷಂ= ವಿಷವು; ವೃಶ್ಚಿಕ= ಚೇಳು; ಅನಲ= ಬೆಂಕಿ; ಅಹಿ= ಹಾವು; ವ್ಯಾಘ್ರಂ= ಹುಲಿ; ಉಗ್ರಾಯುಧಂಗಳ್= ಹರಿತವಾದ ಆಯುಧಗಳು; ದುರಿತಂ= ಪಾಪವು; ಮತ್ತದ್ವಿಪಂ= ಮದಿಸಿದ ಆನೆಯು; ಮೂರ್ಖತೆ; ಪೊಡೆವಸಿಡಿಲ್= ಹೊಡೆಯುವ ಸಿಡಿಲು; ದುರ್ಜನಂ =ದುರ್ಜನರು; ದುರ್ಮದಂ= ಅಧಿಕವಾದ ಕೆಟ್ಟಮದವು; ತಸ್ಕರರ್= ಕಳ್ಳರು; ಈ ಕಂಟಕ ಸ್ತೋಮದ= ಈ ಕಂಟಕಗಳ ಸಮೂಹದ ನಡುವೊಡಲಿರ್ಪ= ದೇಹದ

ಮಧ್ಯದಲ್ಲಿರುವ ಅಂದವೇಶ= ರೀತಿಯು; ಏಂ ಸೋಜಿಗು= ಏನು ಸೋಜಿಗವೋ ! ಶಂಕರ= ಈಶ್ವರನೇ ನೀಂ= ನೀನು ಕೈಕೊಂಡು= ಕೃಪೆಮಾಡಿ; ಎನ್ನನ್ನು ರಕ್ಷಿಸು.

**ಭಾವಾರ್ಥ :** ವಿಷ, ಚೇಳು, ಬೆಂಕಿ, ಹಾವು, ಹುಲಿ, ಉಗ್ರಾಯು ಧದಂತಿರುವ ವಿಶೇಷತರವಾದ ರೋಗಗಳಿಂದಲೂ ಪಾಪವೆಂಬ ಆನೆಯಿಂದ ಲೂ, ಮೂರ್ಖತೆಯೆಂಬ ಹೊಡೆಯುವ ಸಿಡಿಲಿನಿಂದಲೂ, ದುರ್ಜನರೂ ದುರ್ಮದವೂ ಎಂಬ ಕಳ್ಳರ ಕೂಟದಿಂದಲೂ ಸುತ್ತುವರಿಯಲ್ಪಟ್ಟ ಈ ಕಷ್ಟ ಗಳ ಗುಂಪಿನಲ್ಲಿ ಈ ಜೀವ ಇದೆಯಲ್ಲಾ ಇದು ಬಹುದೊಡ್ಡ ಸೋಜಿಗದ ಸಂಗ ತಿಯೇ. ಇಷ್ಟೆಲ್ಲ ಕಂಟಕಗಳನ್ನು ದಾಟಿಹೋಗಬೇಕಾದರೆ ಶಂಕರನ ಕೃಪೆ ಯೊಂದೇ ಸಾಧನ. ಪಂಪಾಪುರದರಸನಾದ ವಿರೂಪಾಕ್ಷಸ್ವಾಮಿಯು ನನ್ನ ನ್ನು ರಕ್ಷಿಸಲಿ.

**ಟಿಪ್ಪಣಿ :** ಜೀವಾತ್ಮ ಒಬ್ಬ ಪಯಣಿಗ. ಪರಮಾತ್ಮನನ್ನು ಸೇರು ವುದೇ ಈ ಪಯಣಿಗನ ಗುರಿ ಮತ್ತು ಸಾಧನೆ - ಎಂಬ ಮಾತು ಆಧ್ಯಾತ್ಮಿಕ ಪ್ರಪಂಚದಲ್ಲಿ ಚೆನ್ನಾಗಿ ಪ್ರಚಲಿತವಾಗಿದೆ. ಪಯಣಿಗ ತನ್ನ ಗುರಿ ಸೇರಬೇ ಕಾದರೆ, ಎಂತೆಂತಹ ಕಂಟಕಗಳನ್ನು, ಘೋರಾರಣ್ಯಗಳನ್ನು ದಾಟಿ ಹೋಗ ಬೇಕೋ. ದಾರಿಯಲ್ಲಿ ಹಾವು ಚೇಳು ಹುಲಿ ಆನೆ ಕಳ್ಳಕಾಕರಭಯ, ಹೊಡೆ ವ ಸಿಡಿಲಿನ ಭೀತಿ - ಇವೆಲ್ಲವುಗಳನ್ನು ಎದುರಿಸಿ ಬದುಕಿ ಮುಂದುವರಿಯ ಬೇಕು. ಪಯಣಿಗನನ್ನು ಧ್ವಂಸಮಾಡಲು ಇವುಗಳಲ್ಲಿ ಯಾವುದಾದರೂ ಒಂದೇ ಒಂದು ಕಾರಣ ಸಾಕು. ಆದರೆ ಇಲ್ಲಿ ರೋಗವೆಂಬ ವಿಷ, ಹಾವು ಚೇಳು, ಹುಲಿ, ದಾವಾನಲ ಪಯಣಿಗನನ್ನು ಮುತ್ತಿಕೊಂಡಿವೆ. ಪಾಪವೆಂ ಬ ಆನೆಯೂ ಸೊಂಡಿಲೆತ್ತಿ ಘೀಂಕೃತಿಮಾಡುತ್ತಿದೆ. ಜೊತೆಗೆ ಅಜ್ಞಾನವೆಂಬ ಸಿಡಿಲುಬೇರೆ ಬಡಿಯುತ್ತಿದೆ. ಈ ಹಾವು ಚೇಳು ಹುಲಿ ಆನೆ ಸಿಡಿಲುಗಳು ಸಾಲದೋ ಎಂಬಂತೆ ದುರ್ಜನಸಂಘ ದುರ್ಮದವೆಂಬ ಕಳ್ಳರಕಾಟವೂ ಇದೆ! ಇಷ್ಟೆಲ್ಲ ಕಂಟಕಗಳನ್ನು ದಾಟಿ ಜೀವಾತ್ಮನೆಂಬ ಪಯಣಿಗ ತನ್ನಗುರಿ ಸೇರಬೇ ಕಾಗಿದೆ. ಇಂಥ ಕಾಟಗಳ ಮಧ್ಯ ಅದುಹೇಗೆ ಇದಾನೆಯೋ ಈ ಪಯಣಿ ಗ ಅದೇ ಆಶ್ಚರ್ಯದ ಸಂಗತಿ. ಇಂಥ ಸನ್ನಿವೇಶದಿಂದ ಪಾರುಮಾಡಿ ಕಾಪಾಡು ತಂದೇ ಎಂದು ಕವಿ ಮೊರೆಯಿಡುತ್ತಾನೆ.

## ವೃತ್ತ : ೩೦

ಧನಮಂ ಸ್ಯೈತಾರ್ಜಿಸೆಂ ಬೈತಿಡುವೆನದಱಿೊಳಂ ಪುಣ್ಯವೈವಾಹಮುಂ ಮಾ.
ಳ್ಪೆನದಂ ಪುತ್ರರ್ಗಲಂಕಾರಮನೊದವಿಸುವೆಂ ಕೂಡಿಭೋಗಿಪ್ಪೆನೆಂದಾಂ
ನೆನೆಯುತ್ತಿರ್ಪನ್ನೆಗಂ ತೊಟ್ಟನೆ ಮರಣಮದಾಗಲ್ಕೆ ಬೇಳಪ್ಪ ದುಶ್ಚಿಂ-
ತನೆಯುಂ ತಗುರ್ೊತ್ತಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೩೦

ಅರ್ಥ: ಧನಮಂ= ಧನವನ್ನು; ಸ್ಯೈತು= ಚೆನ್ನಾಗಿ; ಆರ್ಜಿಸೆಂ= ಗಳಿಸುವೆ ನು; ಬೈತಿಡುವೆನ್= ಬಚ್ಚಿಡುವೆನು; ಅದಱಿೊಳಂ= ಅದರಿಂದ; ಪುಣ್ಯ; ವೈವಾಹಮುಂ = ವಿವಾಹವನ್ನು; ಮಾಳ್ಪೆನ್= ಮಾಡುವೆನು; ಅದಂ= ಅದರಿಂದ; ಪುತ್ರರ್ಗೆ= ಮ ಕ್ಕಳಿಗೆ; ಅಲಂಕಾರಮನ್ =ಅಲಂಕಾರವನ್ನು ಒದವಿಸುವೆಂ= ಒದಗಿಸುವೆನು; ಕೂಡಿ ಭೋಗಿಪ್ಪೆಂ= ತಂದೆತಾಯಿ ಸತಿಸುತರೊಡನೆ ಭೋಗಿಸುವೆನು; ಎಂದು ಆಂ= ನಾನು; ನೆನೆಯುತ್ತಿರ್ಪನ್ನೆಗಂ= ಯೋಚಿಸುತ್ತಿರುವಾಗಲೇ; ತೊಟ್ಟನೆ= ಇದಕ್ಕಿದ್ದಹಾಗೆ; ಮರಣ ಮುಂ= ಮರಣವು; ಅದು ಆಗಲ್ಕೆ= ಉಂಟಾಗಲು; ಬೇಳಪ್ಪ= ದಿಗ್ಭ್ರಮೆಯುಂಟಾಗುವ ದುಶ್ಚಿಂತನೆಯುಂ= ದುಶ್ಚಿಂತನೆಯುನ್ನು ತಗುರ್ೊತ್ತಿ= ಅದುಮಿಟ್ಟು ಪಂಪಾಪುರದರಸ ನನ್ನನ್ನು ರಕ್ಷಿಸು.

ಭಾವಾರ್ಥ: ಧನವನ್ನು ಗಳಿಸುವೆನು, ಅದನ್ನು ಬಚ್ಚಿಡುವೆನು. ಅದರಿಂದ ಮಕ್ಕಳ ಮದುವೆಮಾಡುವೆನು. ಅವರಿಗೆ ಅಲಂಕಾರ ಮಾಡುವೆನು ಆ ಧನವನ್ನು ಸತಿಸುತ ಮಾತಾಪಿತೃಗಳೊಡನೆ ಉಪಭೋಗಿಸುವೆನು ಎಂದು ಯೋಚಿಸುತ್ತಿರುವಷ್ಟರಲ್ಲೇ ಇದ್ದಕ್ಕಿದ್ದಹಾಗೆ ಸಾವು ಥಟ್ಟನೆ ಬಂದು ದಿಗ್ಭ್ರಮೆ ಯುಂಟಾಗುವಂಥ ದುಶ್ಚಿಂತತೆಗಳನ್ನು ಅದುಮಿಟ್ಟು ನನ್ನನ್ನು ಉದ್ಧಾರ ಮಾಡು ಪಂಪಾಪುರದ ಒಡೆಯನಾದ ವಿರೂಪಾಕ್ಷ ಸ್ವಾಮಿಯೇ !

## ವೃತ್ತ : ೩೧

ಕನಕಂ ನೀರಕ್ಕರಂ ಪೆಂಡಿತಿ ಕನಸು ಸುತರ್ ಮಂಜು ತಾಯ್ತಂದೆ ಮಾಯಂ
ತನುವಭ್ರಚ್ಛಾಯೆ ಮಿತ್ರರ್ ಗಗನಕುಸುಮಮಿಷ್ಟರ್ ಮರೀಚೀಜಲಂ ಯೌ
ವನಧರ್ಮಂ ಮೇಘಚಾಪಂ ಗೃಹವಚಿರವೆನಿಪ್ಪಿಂತಿವಂ ಬಿಟ್ಟು ನಿಮ್ಮಂ
ನೆನೆಯುತ್ತಿರ್ಪಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೩೧

ಅರ್ಥ: ಕನಕಂ= ಬಂಗಾರವು; ನೀರಕ್ಕರಂ= ನೀರಿನಮೇಲೆ ಬರೆದ ಅಕ್ಷರ; ಪೆಂಡಿತಿ= ಹೆಂಡತಿ; ಕನಸು= ಕನಸಿದ್ದಂತೆ; ಪತ್ತಲ್= ಮಕ್ಕಳು; ಮಂಜು; ತಾಯ್ತಂದೆ= ತಂದೆತಾಯಿಗಳು; ಮಾಯಂ= ಹುಸಿ; ತನು= ದೇಹ; ಅಭ್ರಚ್ಛಾಯೆ =ಮೋಡದನೆರಳು; ಮಿತ್ರರ್= ಸ್ನೇಹಿತರು; ಗಗನಕುಸುಮಂ= ಆಕಾಶದ ಹೂಗಳು ಇಷ್ಟರ್= ಆಪ್ತರುಇಷ್ಟರು; ಮರೀಚಿಜಲಂ= ಬಿಸುಲುಗುದುರೆಯ ನೀರು; ಯೌವನ ಧರ್ಮಂ= ಹರೆಯದ ಧರ್ಮ; ಮೇಘಚಾಪ= ಕಾಮನಬಿಲ್ಲು; ಗೃಹಂ= ಮನೆಯೂ; ಅಚಿರ= ಅಶಾಶ್ವತವು; ಎನಿಪ್ಪ= ಎನಿಸಿರುವ; ಇಂತಿವಂ= ಇಂಥ ಇವುಗಳನ್ನು ಬಿಟ್ಟು ನಿಮ್ಮಂ= ನಿಮ್ಮನ್ನೇ ನೆನೆಯುತ್ತಿರ್ಪಂತೆ= ನೆನೆಯುತ್ತಿರುವಂತೆ ಮಾಡಿ ಪಂಪಾಪುರದ ಒಡೆಯನಾದ ವಿರೂಪಾಕ್ಷನೇ ರಕ್ಷಿಸು.

ಭಾವಾರ್ಥ: ಬಂಗಾರವೆಂಬುದು ನೀರಿನಮೇಲೆ ಬರೆದ ಅಕ್ಷರಗಳಿದ್ದಂತೆ; ಹೆಂಡತಿ ಕನಸಿನಂತೆ ಕ್ಷಣಿಕ, ಮಕ್ಕಳು ಮಂಜಿನಂತೆ ಶೀಘ್ರವಾಗಿ ಕರಗಿಹೋಗುವವರು. ತಂದೆತಾಯಿಗಳುಕೂಡ ಹುಸಿಯೇ. ಕೊನೆಗೆ ತನ್ನ ದೇಹವಾದರೂ ಶಾಶ್ವತವೇ ಎಂದರೆ ಅದೂ ಮೋಡಗಳ ನೆರಳಿದ್ದಂತೆ ಒಂದೇ ಅರೆಗಳಿಗೆ. ಆಪ್ತಗೆಳೆಯರೆನ್ನುವವರೂ ಕೂಡ ಗಗನಕುಸುಮವಿದ್ದಂತೆ. ಇಷ್ಟರೆನ್ನುವವರಂತೂ ಬಿಸಿಲುಕುದುರೆಯಂತೆ ಕೇವಲ ಕಣ್ಣಿಗೆ ತೋರುವವರೇ ಹೊರತು ವಾಸ್ತವವಾಗಿ ಅಂತಿರುವುದಿಲ್ಲ. ಯೌವನ ಧರ್ಮವಂತೂ ಕಾಮನಬಿಲ್ಲಿನಂತೆ ಅರೆಘಳಿಗೆಯಿದ್ದು ಮರೆಯಾಗುವ ಅತ್ಯಂತಕ್ಷಣಿಕವಾದುದು. ಕೊನೆಗೆ ತಾನು ಹುಟ್ಟಿ ಬೆಳೆದು ಕಟ್ಟಿಸಿದ ಮನೆಯಾದರೂ ಶಾಶ್ವತವೇ. ಎಂದರೆ ಅದುಕೂಡ ಇಲ್ಲ. ಅದೂ ಅಚಿರವೇ. ಇಂಥ ಕ್ಷಣಿಕವಾದ, ಅಶಾಶ್ವತವಾದ, ಕೇವಲ ತೋರ್ಕೆಗಾಗಿ ಇರುವ ವಸ್ತುಗಳನ್ನು ವ್ಯಕ್ತಿಗಳನ್ನು ಬಿಟ್ಟು ಕೇವಲ ನಿನ್ನನ್ನೇ ನೆನೆಯುತ್ತಿರುವಂಥ ಸ್ಥಿತಿಯನ್ನು ಕೊಟ್ಟು ಕಾಪಾಡು ತಂದೇ ಎಂದು ಕವಿ ಯಿಲ್ಲಿ ಮೊರೆಯಿಡುತ್ತಾನೆ.

ಟಿಪ್ಪಣಿ: ಯಾವುದನ್ನು ಭ್ರಮಿಸಿ ಲೋಕ ಹುಚ್ಚುಹಿಡಿದಂತೆ ಬೆಂಬತ್ತಿ ಹೋಗುತ್ತಿದೆಯೋ, ಅದೆಲ್ಲವೂ ಕೇವಲ ಹುಸಿ, ಅಶಾಶ್ವತ, ಕ್ಷಣಿಕ ಎಂಬುದನ್ನು ಕವಿ ಅನ್ಯಾದೃಶ ಉಪಮೆಗಳಿಂದ ಮೂಡಿಸಿದ್ದಾನೆ. ತಾಯ್ತಂದೆಗಳೂ ಹುಸಿ; ಮಿತ್ರರೆನ್ನುವವರೂ ಗಗನಕುಸುಮದಂತೆ ಎಂಬುದು ಕೊಂಚ

ವಿಚಿತ್ರವಾಗಿ ತೋರುತ್ತದೆ. ಬಹುಮಟ್ಟಿಗೆ ತಾಯ್ತಂದೆಗಳು ಮಗನನ್ನು ಕೈ ಬಿಡಲಾರರು; ಮಿತ್ರರು ದ್ರೋಹಮಾಡಲಾರರು. ಸಾಧಾರಣವಾಗಿ ಈ ಮಾತು ನಿಜ. ಹಾಗಾದರೆ ಸಾಧಾರಣವಾಗಿ ಒಂದೋ ಎರಡೋ ಉದಾಹರಣೆಗಳಿಂದ ಇಂಥ ಸರ್ವಸಾಮಾನ್ಯ ಸಾರಸಗಟು (sweeping generalization) ತೀರ್ಮಾನಮಾಡುವುದು ಸರಿಯೇ ? ಎಂಬ ಅನುಮಾನ ಮೂಡುತ್ತದೆ.

ಆದರೆ ಇಲ್ಲಿ ಕವಿ ಇವುಗಳನ್ನು ಕ್ಷಣಿಕ ಹುಸಿ ಅಶಾಶ್ವತ ಎಂದು ಕರೆಯುವಾಗ ಅವನ ದೃಷ್ಟಿಯೆಲ್ಲ ಆತ್ಮೋನ್ನತಿಯ ಕಡೆಗೇಯಿದೆ. ಆತ್ಮದ ಪ್ರಯಾಣಕ್ಕೆ ಇವು ಯಾವುವೂ ಸಹಾಯಕವಾಗಲಾರವು. ಸಹಕಾರಿಯಾಗಲಾರವು. ಕೆಲವು ಸಂದರ್ಭಗಳಲ್ಲಿ ಅತ್ಯಂತ ನೆಚ್ಚಿನಗೆಳೆಯರೇ ಸಾಧಕನ ಪ್ರಗತಿಯ ಮಾರ್ಗದಲ್ಲಿ ಅಡ್ಡಿಯಾಗುವುದುಂಟು. ಮಿತ್ರಮೋಹದಿಂದ ಸತ್ಯದ ದೃಷ್ಟಿ ಮಸುಕಾದರೂ ಆದೀತು. ಅಲ್ಲದೇ, ಆ ಸತ್ ಚಿತ್ ಆನಂದದ ಮುಂದೆ ಎಂಥ ಗಾಢವಾದ ಮೈತ್ರಿಯಾಗಲಿ, ಎಂಥ ಅಗಾಧವಾದ ಪುತ್ರವಾತ್ಸಲ್ಯವಾಗಲಿ ಅದೆಲ್ಲ ಕೇವಲ ಕ್ಷಣಿಕ. ಅದರಮುಂದೆ ಇವು ಕೇವಲ ಕ್ಷಣಿಕ, ಕ್ಷುದ್ರ, ಕ್ಷುಲ್ಲಕ. ಈ ದೃಷ್ಟಿಯಿಂದ ಕವಿಯ ಈ ಮಾತುಗಳು ಸಮಂಜಸವಾಗಿವೆ.

## ವೃತ್ತ: ೩೨

ಎರವೀ ದೇಹಂ ಹಿರಣ್ಯಂ ಪುದು ಸತಿ ಪಗೆಯಾತ್ಮೇಷ್ಟರೌಪಾಧಿಕರ್ ಸೋ-
ದರರೆಲ್ಲಂ ವೈರಿಗಳ್ ತಾವೆನಿಪಿದನಱಿದುಂ ಮತ್ತಮಾವರ್ಥದಿಂದಂ
ಪೊರೆವೆಂ ರಕ್ಷಿಪ್ಪೆನೊಲ್ವೆಂ ಬಿಡದೆ ನಡೆಯಿಪೆಂ ನಂಬಿ ನಚ್ಚಿರ್ಪೆನೆನ್ನಿಂ
ಮರುಳಾರಾರಾನೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೩೨

ಅರ್ಥ: ಈ ದೇಹಂ= ಈ ದೇಹವು; ಎರವು= ನಮ್ಮದಲ್ಲ; ಎರವಲಾಗಿ ತಂದುದು; ಹಿರಣ್ಯಂ= ಬಂಗಾರವು; ಪುದ= ಪರರೊಡನೆ ಹಂಚಿಕೊಳ್ಳಲು ಯೋಗ್ಯವಾದುದು (ಕೇವಲ ಒಬ್ಬರಿಗೇ ಸೇರುವಂತಹದಲ್ಲ) ಸತಿ= ಹೆಂಡತಿ; ಪಗೆ= ಶತ್ರು; ಆತ್ಮೇಷ್ಟರ್= ಆತ್ಮಕ್ಕೆ ಇಷ್ಟರಾದವರೆಂಬ ಜನರೂಕೂಡ; ಔಪಾಧಿಕರ್= ತಮ್ಮತಮ್ಮ

ಸ್ವಹಿತ ಸಾಧನೆಮಾಡಿಕೊಳ್ಳುವಂತಹ ಜನರು; ಸೋದರರೆಲ್ಲರ್= ಒಡಹುಟ್ಟಿದವರೆಲ್ಲ; ವೈರಿಗಳ್= ವೈರಿಗಳು; ತಾವೆನಿಪಿದನ್= ಎಂದೆನಿಸಿದ ಇದನ್ನು; ಅಱಿದುಂ= ತಿಳಿದೂ ತಿಳಿದು; ಮತ್ತಮಾವರ್ಥದಿಂದಂ= ಮತ್ತೆ ಇನ್ನಾವ ಪ್ರಯೋಜನಕ್ಕಾಗಿ; ಪೊರೆವೆಂ= ಕಾಪಾಡುವೆ; ರಕ್ಷಿಪ್ಪೆ= ರಕ್ಷಿಸುವೆ; ಒಲ್ವೆಂ= ಪ್ರೀತಿಮಾಡುವೆ; ಬಿಡದೆನಡೆಯಿಪೆಂ= ಬಿಡದೆ ಕಟ್ಟಿಕೊಂಡ ಬಾಳು ಹೊರೆಯುತ್ತೀಯೆ; ನಂಬಿವಜ್ಜಿಪೆ= ನಂಬಿರುವ; ಎನ್ನಿಂ =ನನಗಿಂತ; ಮರುಳ್= ಹುಚ್ಚನು; ಆರಾರ್ =ಯಾರು ? ಆನೆ= ನಾನೇ; ಪಂಪಾಪುರದರಸ ವಿರೂಪಾಕ್ಷ ರಕ್ಷಿಸು.

**ಭಾವಾರ್ಥ:** ಈ ದೇಹವೇ ನಮ್ಮದಲ್ಲ. ತಂದೆತಾಯಿಗಳಿಂದ ಆದುದು. ಬಂಗಾರವು ಕೇವಲ ನಮ್ಮೊಬ್ಬರಿಗೇ ಸೇರುವಂಥ ವಸ್ತುವಲ್ಲ. ಹೆಂಡತಿ, ಶತ್ರುವಿದ್ದಂತೆ; ನಮ್ಮ ಆಪ್ತೇಷ್ಟರು ಎಂದು ನಾವು ಯಾರನ್ನು ನಂಬಿದ್ದೇವೆಯೋ ಅಂಥವರು ತಮ್ಮತಮ್ಮ ಹಿತಸಾಧನೆಗಾಗಿ ನಮ್ಮ ಸುತ್ತ ಮುತ್ತ ಸುಳಿಯುತ್ತಾರೆಯೇ ಹೊರತು ನಿಜವಾದ ಪ್ರೇಮದಿಂದಲ್ಲ. ಒಡ ಹುಟ್ಟಿದವರಂತೂ ಯಾವಾಗಲೂ ವೈರಿಗಳೆ. ಇವರೆಲ್ಲರೂ ಇಂಥ ಸ್ವಭಾವ ದವರೆಂಬುದನ್ನು ತಿಳಿದೂ ತಿಳಿದು ಇನ್ನಾವ ಪುರುಷಾರ್ಥಕ್ಕಾಗಿ ಹೆಂಡತಿ ಮಕ್ಕಳನ್ನು ಕಾಪಾಡುವೆ ? ಪ್ರೀತಿಸುವೆ ? ಎಡೆಬಿಡದೆ ಕೂಡಿಕೊಂಡು ಬಾಳು ಹೊರೆಯುತ್ತಿರುವೆ ? ಅವರನ್ನು ನಂಬುತ್ತಿರುವೆ ? ನನಗಿಂತ ಹುಚ್ಚನು ನಾನೇ ಅಲ್ಲವೇ ? ಆದಕಾರಣ ಪಂಪಾಪುರದ ಪತಿಯಾದ ವಿರೂಪಾಕ್ಷ ಸ್ವಾಮಿಯೇ ನನ್ನನ್ನು ರಕ್ಷಿಸು.

**ಟಿಪ್ಪಣಿ:** ೩೧ನೆಯ ಪದ್ಯದ ಭಾವವನ್ನೇ ಇನ್ನೊಂದು ವಿಧವಾಗಿ ಇನ್ನಿಷ್ಟು ಚಮತ್ಕಾರದಿಂದ ಚಿತ್ರಿಸಿದ್ದಾನೆ. ನನಗಿಂತ ಹುಚ್ಚನು ಯಾರು ? ಎಂಬ ಪ್ರಶ್ನೆಯನ್ನು ಕೇಳಿ, ಉತ್ತರವಾಗಿ, "ನಾನೆ" ಎಂದು ಹೇಳಿರುವ ಮಾತು ಅಲ್ಪಮಾತುಗಳಲ್ಲಿ ಅಗಾಧ ಅರ್ಥವನ್ನಾಡುವ ದೈವದತ್ತ ಶಕ್ತಿ ಬಹು ಸುಂದರವಾಗಿ ವ್ಯಕ್ತವಾಗಿದೆ.

### ವೃತ್ತ : ೩೩

ಜಲನುಂ ಪೊರ್ದಿರ್ಪ ಶೈವಾಲದ ತೆಱದೆ ಕರಂ ದೀಪಿಕಾಚ್ಛಾಯೆಯಂತೆ-

ಜ್ಜ್ವಲವಾಂತಾ೬ಚಂದ್ರಲಕ್ಷಂ ಮುಕುರದೊಳಗೆ ತೋರ್ಪಾ ಪ್ರತಿಚ್ಛಾಯೆ
ಯೆಂತಂ-
ತಲೆಯುತ್ತುಂ ಪತ್ತಿ ಬೆನ್ನಂ ಬಿಡದಿದೆ ಘನಸಂಸಾರವೀ ಮಾಯೆಯಂ ನೀ-
ರ್ಮಲ ನೀನೇ ತೀರ್ಚಿ ಪಂಪಾಪುರದರಸ ವಿರೂಪಾಕ್ಷ ಪ್ಪುದೆನ್ನಂ ೩೩

ಅರ್ಥ: ಜಲಮಂ= ನೀರನ್ನು; ಪೊರ್ದಿರ್ಪ= ಹೊಂದಿಕೊಂಡಿರುವ; ಶಿಷ್ಕ
ಲದ= ಪಾಚಿಯು; ತೆಱದೆ= ರೀತಿಯಿಂದ; ಕರಂ= ಚೆನ್ನಾಗಿ; ದೀಪಿಕಾ= ದೀಪದ;
ಛಾಯೆ= ಬೆಳಕು; ಯೆಂತು= ಹೇಗೆ; ಉಜ್ವಲಂ= ಪ್ರಕಾಶಮಾನವಾಗಿರುವುದೋ; ಅಂತು
= ಹಾಗೆಯೇ; ಆ ಚಂದ್ರಲಕ್ಷಂ= ಚಂದ್ರನ ಕಲಂಕಗಳು; ಮುಕುರದೊಳಗೆ= ಕನ್ನಡಿ
ಯೊಳಗೆ; ತೋರ್ಪ= ತೋರುವ; ಆಪ್ರತಿಚ್ಛಾಯೆಯೆಂತುಂ= ಆ ಪ್ರತಿಬಿಂಬವು ಹೇಗೋ;
ಅಂತೆ= ಹಾಗೆಯೇ; ಅಲೆಯುತ್ತು= ಹಿಂಬಾಲಿಸಿ; ಪತ್ತಿ= ಹತ್ತಿಕೊಂಡು; ಬೆನ್ನಂ=
ಬೆನ್ನನ್ನು; ಘನಸಂಸಾರಂ= ಘೋರವಾದ ಸಂಸಾರವು; ಈ ಮಾಯೆಯಂ= ಈ ಮಾಯೆ
ಯನ್ನು ಬಿಡದೆ ಅಂಟಿಕೊಂಡಿದೆ. ನಿರ್ಮಲವಾದ ನೀನೇ; ತೀರ್ಚಿ= ಇದನ್ನು ಪಾರು
ಮಾಡಿ; ಪಂಪಾಪುರದ ಅರಸನಾದ ವಿರೂಪಾಕ್ಷಸ್ವಾಮಿಯೇ ನನ್ನನ್ನು ರಕ್ಷಿಸು.

ಭಾವಾರ್ಥ: ನೀರನ್ನು ಹೊಂದಿಕೊಂಡಿರುವ ಪಾಚಿಯಂತೆಯೂ; ದೀ
ಪದ ಪ್ರಕಾಶಮಾನದ ಬೆಳಕಿನ ಅಡಿಯಲ್ಲೇ ಅದರ ನೆರಳೂ ಇರುವಂತೆಯೂ
ಕನ್ನಡಿಯಲ್ಲಿ ಕಾಣುವ ಪ್ರತಿಬಿಂಬದಂತೆ ಚಂದ್ರನಲ್ಲಿರುವ ಕಳಂಕವೂ ಹೇಗೆ
ಒಂದಾನ್ನೊಂದು ಎಡಬಿಡದೆ ಹೊಂದಿಕೊಂಡಿವೆಯೋ ಹಾಗೆಯೇ ಘೋರ
ಸಂಸಾರವನ್ನು ಮಾಯೆಯು ಬೆನ್ನುಹತ್ತಿದೆ. ಇಂಥ ಮಾಯೆಯಿಂದ ನನ್ನ
ನ್ನು ಪಾರುಮಾಡಿ ರಕ್ಷಿಸಿ ಕಾಪಾಡು ತಂದೇ ಪಂಪಾಪುರದ ಒಡೆಯನಾದ
ವಿರೂಪಾಕ್ಷ ಸ್ವಾಮಿಯೇ.

ಟಿಪ್ಪಣಿ: ಈ ಮಾಯೆ ಎಂಬುದು ಜೀವನನ್ನು ಹೇಗೆ ಸುತ್ತಿದೆ,
ಹೇಗೆ ಎಡೆಬಿಡದೆ ಬೆಂಬತ್ತಿದೆ ಎಂಬುದನ್ನು ಕವಿ ಇಲ್ಲಿ ಕೊಟ್ಟಿರುವ ನಾಲ್ಕು
ಉಪಮೆಗಳಿಂದ ಅನ್ಯಾದೃಶವಾಗಿ ಕಣ್ಮುಂದೆ ಕಟ್ಟಿದ್ದಾನೆ. ಒಂದನ್ನೊಂದು
ಹೊಂದಿಕೊಂಡಿರುವ ಎಷ್ಟೋ ವಸ್ತುಗಳು ಲೋಕದಲ್ಲಿವೆ. ದೇಹಕ್ಕೆ ನೆರಳು

ಸಕ್ಕರೆಗೆ ಸಿಹಿ, ಹಾಲಿಗೆ ಬಿಳುಪು - ಹೀಗೆ ಎನಿತೋ ಇವೆ. ಆದರೆ ನೀರನ್ನೇ ಹೊಂದಿಕೊಂಡಿರುವ ಪಾಚಿಯಂತೆ ಎಂಬ ಉಪಮೆಯನ್ನೇ ಏಕೆ ಉಪಯೋಗಿಸಬೇಕಾಗಿತ್ತು ? ಅದರ ಔಚಿತ್ಯವೇನು ? ನೀರಲ್ಲಿ ಕಾಲಿಡುವಾಗ ಪಾಚಿ ಇದೆ ಎಂಬುದು ತಿಳಿಯದು. ಆದರೆ ಕಾಲಿಟ್ಟಾಗ ಜರ್‍ರನೆ ಜಾರಿ ಬೀಳುತ್ತೇವೆ. ಹಾಗೆಯೇ ಈ ಸಂಸಾರವೆಂಬ ನೀರಿಗೆ ಪಾಚಿಯೆಂಬ ಮಾಯೆ ಎಡೆಬಿಡದೆ ಅಂಟಿಕೊಂಡು ನಮ್ಮನ್ನು ಸತ್ಯವಾದುದರಿಂದ, ಶ್ರೇಷ್ಠವಾದುದರಿಂದ ಜಾರಿ ಬೀಳುವಂತೆ ಮಾಡುತ್ತಿದೆ. ಹಾಗೆಯೇ ದೀಪದಕೆಳಗೇ ಯಿರುವ ಕತ್ತಲೆಯೂ ಕೂಡ. ಈ ಸಂಸಾರ ಮೇಲೆಮೇಲೆ ನೋಡಲು ಎಲ್ಲವೂ ಬೆಳಕಾಗಿ ತೋರುತ್ತದೆ. ಆದರೆ ಮಾಯೆಯೆಂಬ ಕತ್ತಲು ಆ ಬೆಳಕಿನ ಅಡಿಯಲ್ಲೆ ಇದೆ. 'ಪತ್ತಿ' (ಹತ್ತಿ) ಎಂಬ ಪದದ ಪ್ರಯೋಗವೂ ಅಷ್ಟೇ ಪ್ರಬಲ ಪರಿಣಾಮಕಾರಿಯಾಗಿದೆ. 'ಹತ್ತಿ' ಎಂಬ ಪದ ಈಗಲೂ ಹಂಪೆಯ ಪ್ರದೇಶದಲ್ಲಿ ಒಂದು ವಿಶಿಷ್ಟಾರ್ಥದಲ್ಲಿ ಬಳಕೆಯಲ್ಲಿದೆ. 'ರೋಗ ಹತ್ತಿ ಬಾರಿಸುತ್ತಿದೆ' ಎಂಬ ಮಾತು ಈಗಲೂ ಪ್ರಯೋಗದಲ್ಲಿದೆ. 'ಬೆನ್ನಂಪತ್ತಿ' ಎಂದು ಕೂಡಿಸಬಾರದೆಂದೇ ತೋರುತ್ತದೆ.

## ವೃತ್ತ : ೩೪

ನೆಳಲೋಳ್ ಪ್ರೋರ್ವಂತಿರಾಕಾಶಮನವಯವದಿಂದೀಸುವಂತುರ್ವಿಯುಂ
ತಾಂ
ತೊಳೆವಂತಭ್ರಾಳಿಯಂ ಕಂಡರಿಸುವ ತೆಱದಿಂ ಧೂಮಮಂ ಸೀಳ್ವ ಪಾಂಗಿಂ
ಬಳಲುತ್ತಿರ್ದಪ್ಪೆನೀ ಮಾಯೆಯ ಮನೆಯ ದುಮಾಳಿಂದೆ ನಿರ್ಮಾಯ
ನಿತ್ಯೋ-
ಜ್ಜ್ವಳ ನಿಸ್ತ್ರೈಗುಣ್ಯ ಪಂಪಾಪುರವರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೩೪

ಅರ್ಥ : ನೆಳಲೋಳ್= ನೆರಳಿನೊಡನೆ; ಪೋರ್ವಂತೆ= ಹೋರಾಡುವಂತೆ; ಆಕಾಶಮನ್=ಆಕಾಶವನ್ನು; ಅವಯವದಿಂದ; ಈಸುವಂತೆ = ಈಸಾಡುವಂತೆ; ಉರ್ವಿಯುಂ= ಭೂಮಿಯನ್ನು; ತೊಳೆಯುವಂತೆ; ಅಭ್ರಾಳಿಯುಂ=ಮೇಘಸಮೂಹವನ್ನು ಕಂಡರಿಸುವ=ಕಂಡುಛೇದಿಸುವ; ತೆಱದಿಂ=ರೀತಿಯಲ್ಲಿ; ಧೂಮಮಂ=ಹೊಗೆಯನ್ನು ಸೀಳ್ವ

=ಸೀಳುವ; ಸಾಂಗಿಂ=ರೀತಿಯಲ್ಲಿ; ಈ ಮಾಯೆಯ ಮನೆಯ ದುವಾಳಿಂದೆ=ಪ್ರಾಬಲ್ಯ ದಿಂದ; ಬಳಲುತ್ತಿರ್ದಪ್ಪೆನ್=ಬಳಲುತ್ತಿದ್ದೇನೆ. ನಿರ್ಮಾಯ=ಮಾಯಾರಹಿತನು;ನಿತ್ಯೋಜ್ವಲ=ಯಾವಾಗಲೂ ಉಜ್ವಲವಾಗಿ ಪ್ರಕಾಶಿಸುತ್ತಿರುವವನು; ನಿಸ್ತ್ರೈಗುಣ್ಯ= ತ್ರಿಗುಣಾತೀತನು ತ್ರಿಗುಣರಹಿತನೂ ಆದ ಪಂಪಾಪತಿ ವಿರೂಪಾಕ್ಷ ಸ್ವಾಮಿಯು ನನ್ನನ್ನು ರಕ್ಷಿಸಲಿ.

ಭಾವಾರ್ಥ: ನೆರಳಿನೊಡನೆ ಹೋಡುವಂತೆಯೂ, ಆಕಾಶವನ್ನು ಅವಯವದಿಂದ ಈಸಿದಂತೆಯೂ, ಭೂಮಿಯನ್ನು ತೊಳೆದು ಶುಭ್ರಮಾಡುವಂತೆಯೂ, ಮೋಡಗಳ ಸಮೂಹವನ್ನು ಕಂಡು ಅವುಗಳನ್ನು ಕತ್ತರಿಸುವ ರೀತಿಯಲ್ಲೂ, ಹೊಗೆಯನ್ನು ಖಡ್ಗದಿಂದ ಸೀಳುವಂತೆಯೂ ವ್ಯರ್ಥ ಪ್ರಯತ್ನ, ನಿಷ್ಫಲಶ್ರಮದ ಈ ಮಾಯೆಯೆಂಬ ಮನೆಯ ಪ್ರಾಬಲ್ಯದಿಂದ, ಮಾಯಾರಹಿತನೂ, ತ್ರಿಗುಣಾತೀತನೂ, ತ್ರಿಗುಣಾರಹಿತನೂ ಆದ ಪಂಪಾಪುರದ ಒಡೆಯನಾದ ವಿರೂಪಾಕ್ಷಸ್ವಾಮಿಯು ನನ್ನನ್ನು ರಕ್ಷಿಸಲಿ.

ಟಿಪ್ಪಣಿ: ಜೀವ ಹುಟ್ಟಿದಂದಿನಿಂದ ಸಾಯುವವರೆಗೆ ವ್ಯರ್ಥಪ್ರಯತ್ನದಲ್ಲಿ ತೊಡಗಿದೆ. ಯಾವುದನ್ನು ನಾವು ಸತ್ಯ, ಶಾಶ್ವತ, ಎಂದು ಭಾವಿಸಿ ಇಲ್ಲಿ ಅವಿಶ್ರಾಂತವಾದ ಕರ್ಮಾಚರಣೆಯಲ್ಲಿ ತೊಡಗಿದ್ದೇವೆಯೋ ಅದೆಲ್ಲವೂ ಕೇವಲ ಅಸತ್ಯ, ಅಶಾಶ್ವತ ಬರೀ ಬಂಧನಕಾರಿ. ವಸ್ತುವನ್ನು ಬಿಟ್ಟು ನೆರಳನ್ನೇ ನಂಬಿ, ಭ್ರಮಿಸಿ ಅದರೊಡನೆ ಕಾದಾಡುವುದು ಎಂಥ ಮೂರ್ಖತನವೋ ವ್ಯರ್ಥ ಶ್ರಮವೋ ಈ ಮಾಯಾಪ್ರಪಂಚದಲ್ಲಿ ಹೋರಾಡುವುದೂ ಅಷ್ಟೇ ಮೂರ್ಖತನ ಮತ್ತು ವ್ಯರ್ಥಪ್ರಯತ್ನ. ಬ್ರಹ್ಮನೇ ಶಾಶ್ವತವಸ್ತು. ಅವನಿಂದಾದ ಈ ಸೃಷ್ಟಿ ಅವನ ನೆರಳು. ಅವನನ್ನು ಹಿಡಿಯಲು ಶ್ರಮಿಸದೆ ಅವನ ನೆರಳೊಡನೆ ನಾವು ಹಗಲಿರುಳೂ ಕಾದಾಡುತ್ತಿದ್ದೆವೆ. ಹಾಗೆಯೇ ಭೂಮಿಯನ್ನು ತೊಳೆದು ಶುಭ್ರಗೊಳಿಸುವ ಮೂರ್ಖಪ್ರಯತ್ನದಲ್ಲಿ ತೊಡಗಿದ್ದೇವೆ. ಭೂಮಿಯನ್ನು ತೊಳೆದು ಶುಭ್ರಗೊಳಿಸಿದವರುಂಟೆ ? ಎಂಥವರಿಗೂ ಕಡುಮೂಖತನವೆಂದು ಮೇಲೆಯೇ ಕಾಣುವ ಇಂಥ ವ್ಯರ್ಥಶ್ರಮದಲ್ಲಿ ಅವಿವೇಕತನದಲ್ಲಿ ಯಾಕೆ ತೊಡಗುತ್ತೇವೆ? ಅದಕ್ಕೆಲ್ಲ ತಮೋ, ರಜೋ,

ಸತ್ವಗಳೆಂಬ ತ್ರಿಗುಣಗಳೇ ಕಾರಣ. ತ್ರಿಗುಣಗಳಿಂದ ಬಂಧಿತನಾಗಿರುವು ದೆಂದರೂ ಒಂದೇ ಮಾಯಬಂಧಿತನೆಂದರೂ ಒಂದೇ. ತ್ರಿಗುಣಾತೀತನಾ ಗುವುದೇ ಮುಕ್ತನ ಲಕ್ಷಣ. ಗೀತೆಯಲ್ಲಿ: "ನಿಸ್ತ್ರೈಗುಣ್ಯೋ ಭವಾರ್ಜುನ" ಎಂದು ಭಗವಾನ್ ಶ್ರೀಕೃಷ್ಣಪರಮಾತ್ಮ ಸಾರಿದ್ದಾನೆ. ಗೀತೆಯ ಹದಿನಾ ಲ್ಕನೆಯ ಅಧ್ಯಾಯದಲ್ಲಿ ಈ ತ್ರಿಗುಣಗಳ ವಿಚಾರವನ್ನು ಹೇಳಿದೆ. ವಿನೋ ಬಾಜಿ ಅವರ ಗೀತಾಪ್ರವಚನದಲ್ಲೂ ಶ್ರೀ ಅರವಿಂದರ "ಎಸ್ಸೇಸ್ ಆಫ್ ಗೀತಾ" ದ ದ್ವಿತೀಯ ಸಂಚಿಕೆಯಲ್ಲೂ ತ್ರಿಗುಣಗಳನ್ನು ಪಳಗಿಸುವ ವಿಚಾ ರವನ್ನು ಬುದ್ಧಿ ಮೆಚ್ಚುವಂತೆ ವಿವರಿಸಲಾಗಿದೆ. ಶ್ರೀರಾಮಕೃಷ್ಣರ: "ಮೂವರು ಕಳ್ಳರ ಕತೆ" ಯಲ್ಲೂ ತ್ರಿಗುಣಗಳೆಂಬ ಕಳ್ಳರ ಆಟವನ್ನೇ ಹೇಳಲಾಗಿದೆ.

## ವೃತ್ತ: ೩೩

ಮದದಿಂದಂ ಪೊಳ್ತು ಪೋಗುತ್ತಿದೆ ಶಿವಶಿವ ಮಾತ್ಸರ್ಯದಿಂ ಪೊಳ್ತು ಪೋಗು
ತ್ತಿದೆ ಆಹಾ ಪೊಳ್ತು ಪೋಗುತ್ತಿದೆ ಮುಸುಕಿದ ತತ್ಕಾಮದಿಂ ಪೊಳ್ತು ಪೋಗು-
ತ್ತಿದೆ ಲೋಭವ್ಯಾಪ್ತಿಯಿಂ ಕೋಪದಿನಱಿಯದೆ ದುರ್ಮೋಹದಿಂ ಪೊಳ್ತು ಪೋಗು-
ತ್ತಿದೆ ತಂದೇ ತಂದೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೩೩

ಅರ್ಥ: ಮದದಿಂದಂ= ಮದದಿಂದ; ಪೊಳ್ತು= ಹೊತ್ತು; ಸಮಯ; ಪೋಗುತ್ತಿದೆ= ಕಳೆದುಹೋಗುತ್ತಿದೆ; ಮಾತ್ಸರ್ಯದಿಂ; ಮುಸುಕಿದ= ಸುತ್ತಿಕೊಂಡಿ ರುವ; ತತ್ಕಾಮದಿಂ= ಆ ಕಾಮದಿಂದ; ಲೋಭವ್ಯಾಪ್ತಿಯಿಂ= ಲೋಭವ್ಯಾಪ್ತಿಯಿಂದ ಕೋಪದಿನರಿಯದೆ= ಕೋಪದಿಂದ ನಮಗರಿಯದೆಯೇ .... ತಂದೆ ಪಂಪಾಪುರದ ಒಡೆ ಯನಾದ ವಿರೂಪಾಕ್ಷಸ್ವಾಮಿಯೇ ನನ್ನನ್ನು ರಕ್ಷಿಸು.

ಭಾವಾರ್ಥ: ಮದದಿಂದ ಹೊತ್ತು ಸುಮ್ಮನೆಕಳೆದು ಹೋಗುತ್ತಿದೆ. ಮಾತ್ಸರ್ಯದಿಂದಲೂ, ಕಾಮ ಕ್ರೋಧ ಲೋಭ ಮೋಹದಿಂದಲೂ ನಮಗೆ ತಿಳಿಯದೆಯೇ ಸಮಯ ಹಾಳಾಗಿ ಹೋಗುತ್ತಿದೆ. ದೈವ ಸಾಕ್ಷಾತ್ಕಾರ

ಸಾಧನೆಯಲ್ಲಿ ವಿನಿಯೋಗವಾಗಬೇಕಾದ ಈ ಸಮಯ ಅರಿಷಡ್ವರ್ಗಗಳ ಹಾವಳಿಯಲ್ಲಿ ಕಳೆದುಹೋಗುತ್ತಿದೆ. ಇದರಿಂದ ನನ್ನನ್ನು ರಕ್ಷಿಸುತಂದೇ ಪಂಪಾಪತಿ ವಿರೂಪಾಕ್ಷಸ್ವಾಮಿಯೇ.

ಟಿಪ್ಪಣಿ : ಭಗವಂತ ಮನುಷ್ಯದೇಹವನ್ನು, ಜನ್ಮವನ್ನು ಕೊಟ್ಟದ್ದು ಅದರಿಂದ ಆತ್ಮಸಾಕ್ಷಾತ್ಕಾರ ಸಾಧಿಸಲಿ ಎಂದು. ಅಂಥ ಪವಿತ್ರವಾದ ಕಾಯವನ್ನು ಸದ್ವಿನಿಯೋಗ ಮಾಡದೆ, ಕಾಮ, ಕ್ರೋಧ, ಮೋಹ, ಲೋಭ, ಮದ, ಮತ್ಸರಗಳಿಗೆ ಅಡಿಮಾಡಿ ಆಳಾಗಿ ದೇವರು ಕೊಟ್ಟ ಈ ಸುಸಮಯವನ್ನು ನಿಷ್ಕಾರಣವಾಗಿ ಹಾಳುಮಾಡುವಂಥ ದುರ್ದೈವ ಇನ್ನೊಂದು ಒದಗಬಹುದೇ ? ಕಾಲ ಯಾವ ಕಾರಣದಿಂದಲೂ ಯಾರಿಗೂ ನಿಲ್ಲುವುದಿಲ್ಲ. ಜೀವಿಗೆ ಇರುವ ಕಾಲ ಅಲ್ಪ. ಸಾಧಿಸಬೇಕಾದ ಗುರಿ ಹಿರಿದು. ಕಳೆದುಹೋದ ಒಂದೊಂದು ಚಣವೂ ಕೋಟಿಕೋಟಿ ಹೊನ್ನು ತೆತ್ತರೂ ತಿರುಗಿಬಾರದು. ಅಂಥ ಪವಿತ್ರ ಸಮಯವನ್ನು ವಿಷಯಲಂಪಟತನದಲ್ಲಿ ಪಂಚೇಂದ್ರಿಯಗಳ ಕೀಳು ಪ್ರವೃತ್ತಿಯಲ್ಲಿ ಕಳೆಯುವುದು ಅತ್ಯಂತ ವಿಷಾದಕರವಾದುದು. ಅದರಿಂದ ಪಾರಾಗಲು ಗುರುಕರುಣೆ, ಹರಕರುಣೆ ಆಗದ ಹೊರತು ಸಾಧ್ಯವಿಲ್ಲ. ಆದ್ದರಿಂದಲೇ ಪಂಪಾಪತಿಯನ್ನು ತಂದೇ, ನನ್ನನ್ನು ರಕ್ಷಿಸು ಎಂದು ಮೊರೆಯಿಡುತ್ತಾನೆ. ಕವಿ ಈ ವೃತ್ತದಲ್ಲಿ ಆದಿಪ್ರಾಸವಸಿಟ್ಟಿರುವಂತೆ ಅಂತ್ಯ ಪ್ರಾಸವನ್ನೂ ಇಟ್ಟಿದ್ದಾನೆ. ಹರಿಹರ ಕವಿ ಅದ್ವಿತೀಯ ಭಕ್ತನೆಂಬುದು ನಿಜ. ಹಾಗೆಯೇ ಅದ್ವಿತೀಯ ಪಂಡಿತನೆಂಬುದೂ ಇದೆಂಥ ಚಮತ್ಕಾರಗಳಲ್ಲಿ ತೋರಿಬರುತ್ತ.

ವೃತ್ತ : ೩೬

ಎರೆದೇವೆಂ ಪೊರ್ದಿಯೇವೆಂ ನಿರುತದೆ ನೆನೆದೇವೆಂ ಮನಂ ಮುಟ್ಟಿಯೇವೆಂ
ಕರೆದೇವೆಂ ಕೂರ್ತುಮೇವೆಂ ಬಿಡದತಿಭರದಿಂ ನಂಬಿಯೇವೆಂ ಶಿವಾ ಮದ್‌-
ಗುರುವೇ ಇನ್ನೇವೆನೇವೆಂ ನಿಜಕರುಣವಣಂಪೊರ್ದದಸ್ಪೃಶ್ಯನಂ ಶಂ-
ಕರ ನೀಂ ಕೈಕೊಂಡು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೩೬

ಅರ್ಥ: ಎರೆದೇವೆಂ= ಬೇಡಿಕೊಂಡೇವು; ಪೊರ್ದಿದೇವೆಂ= ನಿನ್ನನ್ನು ಮೊರೆ ಹೊಕ್ಕೇವು; ನಿರುತನೆ =ಯಾವಾಗಲೂ; ನಿಶ್ಚಯವಾಗಿಯೂ ನೆನೆದೇವೆಂ= ನೆನೆದೇವು; ಮನಂ= ಮನಸ್ಸು ಮುಟ್ಟಿಯೇವೆಂ= ಮುಟ್ಟೇವು; ಕರೆದೇವೆಂ= ಕರೆದೇವು; ಕೂರ್ತ ವೇವೆಂ= ಪ್ರೀತಿಮಾಡೇವು; ಬಿಡದೆ ಅತಿ ಭರದಿಂ= ಗಾಢವಾಗಿ; ನಂಬಿಯೇವೆಂ= ನಂಬೇವು; ಶಿವಾ ಮದ್= ನನ್ನ;ಗುರುವೇ; ಇನ್ನೇವೆನೇವೆಂ= ಇನ್ನು ಏನನ್ನೂಮಾಡೇವು; ನಿಜ= ನಿನ್ನ;ಕರುಣ; ಅಣಂ= ಸ್ವಲ್ಪವು; ಪೊರ್ದದ= ಉಂಟಾಗದ; ಅಸ್ಪೃಶ್ಯನಂ= ಮುಟ್ಟದವನನ್ನು; ಶಂಕರ ನೀನು ಕೈಕೊಂಡು= ಕೈಹಿಡಿದೆತ್ತಿ ಆಸರವನ್ನು ಕೊಟ್ಟು ನನ್ನನ್ನು ರಕ್ಷಿಸು.

ಭಾವಾರ್ಥ: ಎಲೈ ಸ್ವಾಮಿಯೇ ನಿನ್ನನ್ನು ಬೇಡಿಕೊಂಡೇವು ಮೊರೆ ಹೊಕ್ಕೇವು; ಯಾವಾಗಲೂ ಎಡೆಬಿಡದೆ ನಿನ್ನ ಧ್ಯಾನವನ್ನೇಮಾಡಿ ಕೊಂಡಿದ್ದೇವು; ಮನಮುಟ್ಟಿ ಭಜಿಸೇವು; ಕರೆದೇವು; ಪ್ರೀತಿಮಾಡೇವು; ಗಾಢವಾದ ನಂಬಿಕೆಯನ್ನು ನಿನ್ನಲ್ಲಿ ಇಟ್ಟೇವು. ಶಿವನೇ, ನನ್ನ ಗುರುವೇ, ಇನ್ನು ಏನನ್ನಾದರೂ ಮಾಡೇವು. ಆದರೆ ನಿನ್ನ ಕರುಣೆ ಒಂದಿಷ್ಟಾದರೂ ನನ್ನಮೇಲೆ ಆಗಿಲ್ಲದ ಅಸ್ಪೃಶ್ಯನಂತೆ ಇದ್ದೇನೆ. ಅಂಥ ನನ್ನನ್ನು ಕೈಹಿಡಿದು ಮೇಲೆತ್ತಿ ಆಸರಕೊಟ್ಟು ನನ್ನನ್ನುರಕ್ಷಿಸು ಪಂಪಾಪತಿ ವಿರೂಪಾಕ್ಷಸ್ವಾಮಿಯೇ

ಟಿಪ್ಪಣಿ : ನಿಜವಾದ ಅಸ್ಪೃಶ್ಯನು ಹುಟ್ಟಿನಿಂದ ಅಗಲಾರ. ಭಗವಂತನ ಕೃಪೆಗೆ ಸಲ್ಲದ ದುರ್ಮಾರ್ಗವರ್ತಿಯು ನಿಜವಾದ ಅಸ್ಪೃಶ್ಯ. ಅಂಥವನು ಎಂಥ ಉಚ್ಚ ವರ್ಣದಲ್ಲಿ ಹುಟ್ಟಿದರೂ ಅಸ್ಪೃಶ್ಯನೇ.

## ವೃತ್ತ: ೩೭

ತವೆ ರೋಗಂ ಪತ್ತಿ ಗಾತ್ರಂ ಧರಣಿಗೆ ಕೆಡೆದಿರ್ಪಲ್ಲಿಯುಗ್ರದ್ವಿಪಂ ಬಂ-
ದವಿಚಾರಂ ಕಾಯ್ದು ಬಲ್ಪಿಂದೂದೆಯೆ ಮುದುಡಿ ಬೀಳ್ವಲ್ಲಿ ಕಾಳ್ಕಿಚ್ಚು ಸುತ್ತಂ
ಕವಿತಂದಾ ಪೊಳ್ತು ನಾಲ್ಕುಂ ದೆಸೆಗೆ ಪರಿದು ಬೇವದೆ ನೀವಲ್ಲದಾರ್ ಕಾ-
ನವರಿಂ ಕಾಮಾರಿ ಪಂಪಾಪುರವರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೩೭

ಅರ್ಥ : ತವೆ= ಜೆನ್ನಾಗಿ; ರೋಗಂ= ರೋಗವು; ಪತ್ತಿ= ಹತ್ತಿ; ಗಾತ್ರಂ =ದೇಹವು; ಧರಣಿಗೆ= ಭೂಮಿಗೆ; ಕೆಡೆದಿರ್ಪಲ್ಲಿ= ಬಿದ್ದುಹೋಗುವಾಗ; ಉಗ್ರ ದ್ವಿಪಂ= ಮದಿಸಿದ ಆನೆಯೆಂಬ; ಅವಿಚಾರಂ=ಯೋಗ್ಯವಲ್ಲದ ವಿಚಾರಗಳು ಬಂದು; ಕಾಯ್ದು= ಕಾದಿದ್ದು; ಬಲ್ಪಿಂದ= ಬಲವಾಗಿ (ಜೋರಾಗಿ) ಒದೆಯೆ= ಒದೆಯಲಾಗಿ; ಮುದುಡಿ= ಮುದುರಿಕೊಂಡು; ಬೀಳ್ವಲ್ಲಿ= ಬೀಳುತ್ತಿರುವಾಗ; ಕಾಳ್‌ಕಿಚ್ಚು= ಕಾಡು ಕಿಚ್ಚು; ಸುತ್ತಂ= ಸುತ್ತಲೂ ಪರಿತಂದು =ಹಬ್ಬಿಕೊಂಡು; ಅಪ್ಪೋಳ್ತು= ಅಹೊತ್ತಿನಲ್ಲಿ ಪಾಲ್ಕಂ= ನಾಲ್ಕು; ದೆಸೆಗೆ= ದಿಕ್ಕುಗಳಿಗೂ ಪರಿದು= ಹಬ್ಬಿ; ಬೇವಲ್ಲಿ= ಸುಡುತ್ತಿರುವಾಗ ನೀಂಪಲ್ಲದೆ+ಆರ್= ಯಾರು;ಕಾವವರಿಂ= ಕಾಯುವವರು; ಕಾಮನಾರಿ= ಕಾಮನನ್ನೇ ಸುಟ್ಟ ಮುಕ್ಕಣ್ಣನಾದ ಪಂಪಾಪುರದ ಒಡೆಯನೇ ನನ್ನನ್ನು ರಕ್ಷಿಸು.

ಭಾವಾರ್ಥ: ಭಯಂಕರವಾದ ರೋಗವು ಹತ್ತಿ ನೆಲ ಹಿಡಿದು ಮಲಗಿರುವಾದ; ಅವಿಚಾರವೆಂಬ ಆನೆಯು ಬಂದು ಬಲವಾಗಿ ಒದ್ದಾಗ ಮುದಿರಿಕೊಂಡು ಬೀಳುವಾಗಲೂ, ಕಾಡಿನಕಿಚ್ಚು ನಾಲ್ಕು ದಿಕ್ಕುಗಳಲ್ಲೂ ಹಬ್ಬಿಕೊಂಡು ನನ್ನನ್ನು ಸುಡುತ್ತಿರುವಾಗ ನೀವಲ್ಲದೆ ಮತ್ತೆ ಇನ್ನಾರು ನನ್ನನ್ನು ಕಾಪಾಡಬಲ್ಲರು ? ನೀನು ಕಾಮನನ್ನೇ ಸುಟ್ಟ ಮುಕ್ಕಣ್ಣ. ಅಂಥ ನೀನು ನನ್ನನ್ನು ರಕ್ಷಿಸು.

ಟಿಪ್ಪಣಿ : ಮೈಯಲ್ಲಿ ನೆಣವಿದೆ, ಕೈಯಲ್ಲಿ ಹಣವಿದೆ ಎಂದು ಜನ ಯೌವನದಲ್ಲಿ ಕಾಲಿಗೆ ಬಂದಂತೆ ಕುಣಿಯುತ್ತಾರೆ. ಆದರೆ ಯೌವನ ಎಷ್ಟು ದಿನದ ಸಂತೆ ? ಇಂದೊ ನಾಳೆಯೋ ಯೌವನದ ಮದದಲ್ಲಿ ಮಾಡಿದ ಅನಂತ ಅಕೃತ್ಯಗಳಿಗೆ ಚಕ್ರಬಡ್ಡಿಸಹಿತವಾಗಿ ಬಾಕಿ ಫೈಸಲ್ ಮಾಡಲೇಬೇಕು. ಆದರಿಂದ ಯಾರೂ ತಪ್ಪಿಸಿಕೊಳ್ಳಲಾರರು. ಯೌವನದಲ್ಲಿ ಮಾಡಿದ ಕರ್ಮಗಳಿಗೆ ತಕ್ಕ ಪ್ರತಿಫಲವಾಗಿ ಭಯಂಕರವಾದ ರೋಗಕ್ಕೆ ತುತ್ತಾಗಿ ಹಾಸಿಗೆ ಹಿಡಿಯುತ್ತಾನೆ. ಯೌವನಮದದಲ್ಲಿ ಅವಿಚಾರವೆಂಬ ಮದಿಸಿದ ಆನೆ ಬಂದು ಜೀವನನ್ನು ಉರುಳಿಸಿ ಉರುಳಿಸಿ ಒದೆಯುತ್ತದೆ. ಆಗ ಜೀವನಿಗೆ ಗೊತ್ತಾಗುತ್ತದೆ; ತನ್ನನ್ನು ಈ ಸಂಕಟದಿಂದ ಪಾರುಮಾಡುವ ಸಮರ್ಥರು ಯಾರೂ ಇಲ್ಲವೆಂದು. ಕಾಮನನ್ನೇ ಸುಟ್ಟು ಭಸ್ಮಮಾಡಿದ ಶಿವನಲ್ಲದೆ

ಮತ್ತಾರೂ ಅವನನ್ನು ಉಳಿಸಲಾರರು. ಕೊನೆಗೆ ಅವನೇ ಶರಣು ಅವನ ಮರೆಹೊಗದೆ ಇನ್ನು ಅನ್ಯವಿಲ್ಲವೇ ಯಿಲ್ಲ.

ಐದನೆಯ ವೃತ್ತದಿಂದ ೩೭ ನೆಯ ವೃತ್ತದವರೆಗೆ ವಿವಿಧ ಮಟ್ಟಗಳಲ್ಲಿ ವಿವಿಧ ದೃಷ್ಟಿಯಿಂದ ಕವಿ ಯೌವನ ಧರ್ಮವನ್ನು ಕುರಿತು ಕೂಲಂಕಷವಾಗಿ ವರ್ಣಿಸುತ್ತಾನೆ. ಅರಿಷಡ್ವರ್ಗಗಳು ಹೇಗೆ ಜೀವನನ್ನು ಕಾಡುತ್ತವೆ; ಅವುಗಳ ಜೊತೆಗೆ ತಾನು ಕುತ್ತಿಗೆಗೆ ಸುತ್ತುಹಾಕಿಕೊಂಡ ಸಂಸಾರವೆಂಬ ಪಾಶ, ಸೇವೆಯೆಂಬ ನವನರಕ, ತಾಪತ್ರಯಗಳ ಕಂಟಕಸ್ತೋಮ – ಇವೆಲ್ಲವುಗಳ ಆಟವನ್ನು ಕವಿ ವೈಜ್ಞಾನಿಕವಾಗಿ, ಕಂಡ ಸಾಕ್ಷಿಯಂತೆ ಹಾಡಿದ್ದಾನೆ. ಈ ವೃತ್ತಕ್ಕೆ ಯೌವನ ಧರ್ಮವಿಚಾರ ಮುಕ್ತಾಯವಾಯಿತು. ಇಲ್ಲಿಗೆ ಜೀವನಿಗೆ ಅಂಟಿದ ಮೂರನೆಯ ಭಾವ - ಯೌವನ ಧರ್ಮ - ಮುಗಿಯಿತು ಮುಂದಿನ ವೃತ್ತದಲ್ಲಿ ಷಡ್ಭಾವಗಳಲ್ಲಿ ನಾಲ್ಕನೆಯದಾದ ಮುಪ್ಪನ್ನು ಕುರಿತು ಕವಿಮುಂದು ವರಿಯುತ್ತಾನೆ.

## ವೃತ್ತ: ೩೮

ಎಡೆಗೊಂಡೀ ಮುಪ್ಪುದೋಱಿಲ್ ನೆರೆ ನೆಗೆದು ಸಿರಂದೂಗಿ ಬೆನ್ ಬಾಗಿ ಯೆಂತ
ಕ್ಕಡಿಯೆತ್ತಲ್ಕಾಱದೆತ್ತಂ ದಡವಡಿಸಿ ಕರಂ ಜೋಲ್ದು ಕೋಲೂಱಿ ನಿಂದುಂ
ನಡುಗುತ್ತುಂ ಕೆಮ್ಮಿ ಕೊಮ್ಮುತ್ತೊಡಲನೊಲೆಯುತುಂ ಮುಗ್ಗಿ ಬಳ್ಳುಂ ನಿತಾಂತಂ
ಕೆಡೆವಲ್ಲಿಂ ಮುನ್ನ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೩೮

ಅರ್ಥ: ಎಡೆಗೊಂಡು= (ಯೌವನವು ಹಾರಿ, ಮುಪ್ಪಿಗೆ) ಎಡೆಮಾಡಿಕೊಡಲು; ಮುಪ್ಪುದೋಱಿಲ್= ಮುಪ್ಪು ಕಾಣಿಸಿಕೊಳ್ಳಲು; ನೆರೆ= ನೆರೆಕೂದಲು; ನೆಗೆದು= ಬೆಳೆದು; ಸಿರಂದೂಗಿ= ತಲೆಅಲ್ಲಾಡಿ; ಬೆನ್‌ಬಾಗಿ= ಬೆನ್ನುಬಗ್ಗಿ; ಎಂತಕ್ಕೆ= ಹೇಗಾದರೂ; ಅಡಿಎತ್ತಲ್ಕಾಱದೆ= ಹೆಜ್ಜೆ ಯಿಡಲಾರದೆ; ಎತ್ತಂ= ಎತ್ತೆತ್ತಲಾಗಿಯೋ ದಡವಡಿಸಿ= ತಪ್ಪುಹೆಜ್ಜೆಯಿಟ್ಟು ದಡಬಡಿಸಿ, ಕರಂ= ಕೈಗಳು; ಜೋಲ್ದು= ಜೋತುಬಿದ್ದು;

ಕೋಲೂರಿ= ಊರುಗೋಲನ್ನು ಹಿಡಿದುಕೊಂಡು; ನಿಂದುಂ= ನಿಂತುಕೊಂಡು; ನಡುಗುತ್ತುಂ =ಗಡಗಡ ನಡುಗುತ್ತ; ಕೆಮ್ಮಿಕೆಮ್ಮುತ್ತೊಡಲಿಪ್= ಕೆಮ್ಮುತ್ತ ದೇಹವ ನ್ನು; ಒಲೆಯುತುಂ= ಅತ್ತಿತ್ತ ತೂರಾಡಿ; ಮುಗ್ಗಿ= ಮುಂದಕ್ಕೆ ಬಗ್ಗಿ; ಬೀಳ್ವ= ಬಾಳಿ ನಿತಾಂತಂ= ಅಧಿಕವಾಗಿ (Exceedingly) ಕೆಡೆವಲ್ದಿಂ= ಬಿದ್ದುಹೋಗುವುದಕ್ಕೆ ಮುನ್ನ= ಮೊದಲೇ; ಪಂಪಾಪುರದ ಒಡೆಯನಾದ ವಿರೂಪಾಕ್ಷಸ್ವಾಮಿಯೇ ನನ್ನನ್ನು ರಕ್ಷಿಸುವುದು.

**ಭಾವಾರ್ಥ:** ಯೌವನವು ಹೋಗಿ ಮುಪ್ಪು ಕಾಣಿಸಿಕೊಳ್ಳಲು ಬಿಳಿ ಕೂದಲು ಬೆಳೆದು ಬೆನ್ನುಬಾಗಿ ನಡೆಯಲು ಬಾರದಂತಾಗಿ ಹೇಗೊ ಅಡಿಯನ್ನೇ ಎತ್ತಿಡಲಾರದಂತಾಗಿ, ಹೇಗೆಹೇಗೋ ದಡದಡಿಸಿ ಹೆಜ್ಜೆಯಿಡುತ್ತಾ, ಕೈಗಳು ಜೋಲುಬಿದ್ದು, ಕೋಲನ್ನು ಊರಿಕೊಂಡು ನಿಂತು, ಗಡಗಡನೆ ನಡುಗುತ್ತಾ ಕೆಮ್ಮುತ್ತ, ದೇಹವನ್ನು ಅತ್ತಿಂದ ಇತ್ತ, ಇತ್ತಿಂದ ಅತ್ತ ತೂರಾಡಿ ಮುಂದಕ್ಕೆ ಬಗ್ಗಿ ಬಾಳುತ್ತಾ ಬಿದ್ದುಹೋಗುವ ಮುನ್ನವೇ ನನ್ನ ರಕ್ಷಿಸಿ ಕಾಪಾಡು ಸ್ವಾಮಿ.

**ಟಿಪ್ಪಣಿ:** ಹುಟ್ಟು, ಬಾಳು, ಬೆಳವಣಿಗೆ, ಮುಪ್ಪು, ರೋಗ ಸಾವು ಎಂಬ ಷಡ್ಭಾವಗಳಿಗೆ ಜೀವ ಒಳಗಾಗಿದೆ. ಶಿವನೊಬ್ಬನೇ ಷಡ್ಭಾವಗಳಿಗೆ ಒಳಗಾಗದವನು. ಶಿವನೊಬ್ಬನೇ ಷಡ್ಭಾವಶೂನ್ಯನು. ಹರಿಹರ ಕವಿಯು ಈ ಶತಕದ 2ನೆಯ ವೃತ್ತದಲ್ಲಿ ಹುಟ್ಟಿನ ಭಾವವನ್ನೂ 3 - 4 ರಲ್ಲಿ ಬಾಲ್ಯಚೇಷ್ಟೆಯನ್ನು 5 ರಿಂದ 37ರ ವೃತ್ತದವರೆಗೆ ಬಾಳಿನ ಯೌವನದ ಬಂಧನವನ್ನೂ ನಿರೂಪಿಸಿದ್ದಾನೆ. ಈ ವೃತ್ತದಲ್ಲಿ ಷಡ್ಭಾವಗಳಲ್ಲಿ ನಾಲ್ಕನೆಯದಾದ ಮುಪ್ಪನ್ನು ಕುರಿತು ಕವಿ ತನ್ನ ತುಮುಲವನ್ನು ತೋಡಿಕೊಂಡಿದ್ದಾನೆ 39ನೆಯ ವೃತ್ತದಲ್ಲಿ ಜೀವನಿಗೆ ಅನಿವಾರ್ಯವಾಗಿಯೂ ಬಂದೊದಗುವ ರೋಗವನ್ನೂ 40 ಮತ್ತು 41 ನೆಯ ವೃತ್ತಗಳಲ್ಲಿ ಸಾವನ್ನೂ ಕುರಿತು ಹಾಡಿದ್ದಾನೆ. ಹರಿಹರ ಮಹಾಕವಿ ರಕ್ಷಾಶತಕದ ವೃತ್ತಗಳನ್ನು ಹೇಗೋ ಮನಸ್ಸಿಗೆ ಬಂದಂತೆ ರಚಿಸಿಲ್ಲ. ಆದಿಯಲ್ಲಿ ಸ್ವಯಂಭುವಾಗಿದ್ದ ಶಿವ (ಪುರುಷ) ಪರಿಭುವಾಗಿ ಜೀವ (ಪ್ರಕೃತಿ) ನಾಗುತ್ತಾನೆ. ಆಜೀವ ಜನನ, ಬಾಲ್ಯ ವೃದ್ಧಿ, ವೃದ್ಧಾಪ್ಯ, ಜರಾ, ಮರಣಗಳೆಂಬ ಷಡ್ಭಾವಗಳನ್ನು

ಹೊಂದಿ, ಇಲ್ಲಿ ಪಡೆಯಬೇಕಾದ ಸಂಸ್ಕಾರಗಳನ್ನು ಪಡೆದು, ತನ್ನ ಕಾಯ್ತನವನ್ನು ನೀಗಿ ಹಣ್ತನವನ್ನು ಹೊಂದಿ ಕೊನೆಗೆ ಮರಣದಲ್ಲಿ ಬಾಳ್ವೃಕ್ಷಫಲ ಪಡೆಯುತ್ತದೆ. ಈ ಸತ್ಯವನ್ನು ಹರಿಹರಕವಿ ಕಂಡಿದ್ದನಾಗಿ ರಕ್ಷಾಶತಕದ ವೃತ್ತಗಳನ್ನು ವೈಜ್ಞಾನಿಕ ಕ್ರಮದಲ್ಲಿ ರಚಿಸಿದ್ದಾನೆ. ಈ ವೃತ್ತಕ್ಕೆ ಇಲ್ಲಿ ಸ್ಥಾನಸಿಕ್ಕಿರುವುದು ಹೇಗೋ ಆಕಸ್ಮಾತ್ ಆಗಿ ಅಲ್ಲ. ಇದಕ್ಕಿಂತ ಹಿಂದೆಯೂ ಈ ವೃತ್ತ ಬರಲಾಗುತ್ತಿರಲಿಲ್ಲ. ಮುಂದೆಯೂ ಬರಲಾಗದು. ಇದರ ಸ್ಥಳ ಇದೇ.

## ವೃತ್ತ: ೩೯

ಕಿವಿಕಣ್ಗಳ್ ಕೆತ್ತು ಬಾಯೊಗ್ಗುಡಿಸಿ ಕರೆಯೆ ಪೆರ್ಗೂರಿಡುತ್ತಿರ್ದ್ದ ಬಂದಿ-
ರ್ದವರಂಜಲ್ ಶ್ವಾಸಮೋಱುತ್ತಿಳಿಯುತುಮಿರೆಯಂತಲ್ಲಿ ಕೈ ಕಾಲ್ಗಳೊಳ್ ಜೀ-
ವವನಂಟಂಟೆಲ್ಲಿಯುಂ ಕಾಣದೆಯಕಟಕಟಯ್ಯೋ ಗಡಾ ಸತ್ತನೆಂಬೀ
ಪವಣಿಂದಂ ಮುನ್ನ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೪೦

ಅರ್ಥ: ಕಿವಿಕಣ್ಗಳ್ = ಕಿವಿಕಣ್ಣುಗಳು; ಕೆತ್ತು = ಮುಚ್ಚಿ (ಬಲಿಗುಂದಿ) (ಕಿಟ್ ಎಂಬ ಧಾತುವಿನಿಂದ ಹುಟ್ಟಿದ ಶಬ್ದ) ಬಾಯೊಗ್ಗುಡಿಸಿ= ಬಾಯಿ ಮಾತನಾಡಲು ಬಾರದಂತೆ ಒಂದುಗೂಡಿ; ಕರೆಯೆ= ಮಾತನಾಡಿಸಿದರೆ; ಪೆರ್ಗೂರಿಡುತ್ತೆ= ಹಿರಿದಾದ ಗೂರು ಉಂಟಾಗಿ; (ಸಾಯುವುದಕ್ಕೆ ಮುಂಚೆ 'ದೊಡ್ಡಗೇರು' ಹುಟ್ಟುತ್ತದೆ ಎಂದು ಹಂಪೆಯ ಪ್ರದೇಶದ ಜನ ಈಗಲೂ ಮಾತನಾಡುತ್ತಾರೆ )ಬಂದಿರ್ದವರ್= ( ರೋಗಿಯನ್ನು ನೋಡಲೋ ಮಾತನಾಡಿಸಲೋ) ಬಂದವರು; ಅಂಜಲ್= ಹೆದರುವ ರೀತಿಯಲ್ಲಿ ಶ್ವಾಸಮೋಱುತ್ತಿಳಿಯುತು ಮಿರೆ=ಉಸಿರು ಏರುತ್ತಾ ಇಳಿಯುತ್ತಾ ಇರಲು; ಎಂತಲ್ಲಿ =ಹೇಗಾದರೂ ಕೈಕಾಲ್ಗಳೊಳ್= ಕೈಕಾಲುಗಳಲ್ಲಿ ಜೀವನ= ಜೀವವನ್ನು ಅಂಟಂಟಿ =ಹಿಡಿದು ನೋಡಿ; ಎಲ್ಲಿಯುಂ= ಎಲ್ಲೆಲ್ಲಿಯೂ ಒಂದಿಷ್ಟಾದರೂ ಕಾಣದೆ; ಅಕಟಕಟ ಅಯ್ಯೋ; ಗಡಾ= ನಿಶ್ಚಯವಾಗಿಯೂ ಸತ್ತನೇ; ಎಂಬೀ= ಎಂಬ ಈ ಪವಣಿಂದಂ= ರೀತಿಯಾಗುವ ಮುನ್ನ= ಮೊದಲೇ ಪಂಪಾಪುರದರಸ ವಿರೂಪಾಕ್ಷಸ್ವಾಮಿಯೇ ನನ್ನನ್ನು ರಕ್ಷಿಸುವುದು.

ಭಾವಾರ್ಥ : ಮುಪ್ಪಾದಮೇಲೆ ಕಣ್ಣು ಮಂದವಾಗಿ, ಕಿವಿ ಕೇಳಿಸ ದಂತಾಗಿ, ಮಾತನಾಡಲು ಬಾಯಿಯೇ ಬಿದ್ದುಹೋಗಿ ರೋಗಗ್ರಸ್ತನಾಗಿ ಬಿದ್ದಿರುವಾಗ ದೊಡ್ಡ ಗೂರು ಹುಟ್ಟಿ, ನೋಡಲು ಬಂದವರು ಅಂಜುವಂತೆ ಶ್ವಾಸವನ್ನು ಮೇಲಕ್ಕೇರಿಸಿ ಕೆಳಗಿಳಿಸಿ ಹೇಗೋ ಇರುವಾಗ ಜೀವ ಮೆಲ್ಲನೆ ಮೆಲ್ಲನೆ ದೇಹದಿಂದ ಹಾರಿಹೋಗುತ್ತದೆ. ಕೈಕಾಲುಗಳನ್ನು ಹಿಡಿದುನೋಡಿ, ನಾಡಿ ನಿಂತುಹೋದುದನ್ನು ಕಂಡು, ಅಯ್ಯೋ ಸತ್ತುಹೋದನೆಂದು ಹೇಳುವಂತೆ ಆಗುವುದಕ್ಕಿಂತ ಮೊದಲೇ ಪಂಪಾಪುರದ ವಿರೂಪಾಕ್ಷಸ್ವಾಮಿಯೇ ನನ್ನನ್ನು ರಕ್ಷಿಸು.

ಟಿಪ್ಪಣಿ ; ಈ ವೃತ್ತವನ್ನು ದಿ. ಶಿ. ಶಿ. ಬಸವನಾಳರು ಸಂಪಾದಿಸಿದ ರಕ್ಷಾಶತಕ (೧೯೪೩ ರ ಮುದ್ರಣದಲ್ಲಿ) 40 ನೆಯ ವೃತ್ತವೆಂದು ಗಣಿಸಲಾಗಿದೆ. ಹಿಂದಿನ ವೃತ್ತದ ಟಿಪ್ಪಣಿಯಲ್ಲಿ ಹೇಳಲಾದ ಕಾರಣಗಳಿಗಾಗಿ ಈ ವೃತ್ತವನ್ನು ನಾವು 39 ನೆಯ ವೃತ್ತವೆಂದು ಪರಿಗಣಿಸಿದ್ದೇವೆ. ಮುಪ್ಪು ಆದ ತರುವಾಯ ರೋಗ, ರೋಗದಿಂದ ಸಾವು ಉಂಟಾಗುವುದು ಜೀವ ಪಡೆದ ಷಡ್ಭಾವಗಳ ಕ್ರಮ.

## ವೃತ್ತ : ೪೦

ತೆಱಪಿಲ್ಲಿಂ ಸಾವು ಭೋಂಕೆಂದಡಸಿದ ಪದದೊಳ್ ಭಕ್ತಿಸಂಧಾನವೆಲ್ಲಿ-
ತ್ತಱಿವೆಲ್ಲಿತ್ತರ್ಥವೆಲ್ಲಿತ್ತಮಳಗುಣವದೆಲ್ಲಿತ್ತೋ ಸದ್‌ಧರ್ಮವೆಲ್ಲಿ-
ತ್ತೋ ಜಪವೆಲ್ಲಿತ್ತೋ ತೇಜೆಯೆಲ್ಲಿತ್ತತುಳಬಲವುದೆಲ್ಲಿತ್ತದಕ್ಕಂಜಿ ನಿಮ್ಮಂ
ಮಱಿವೊಕ್ಕೆಂ ದೇವ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೪೦

ಅರ್ಥ: ತೆಱಪು=ಬಿಡುವು; ಇಲ್ಲಿಂ= ಇಲ್ಲ;ಸಾವು ಭೋಂಕೆನೆ= ರಭಸದಿಂದ ಅಡಗಿದ= ಉಂಟಾದ; ಒತ್ತಿಬಂದ; ಪದದೊಳ್= ಸಂದರ್ಭದಲ್ಲಿ; ಭಕ್ತಿ ಸಂಧಾನವೆಲ್ಲಿತ್ತು= ಭಕ್ತಿಯಿಂದ ಭಗವಂತನೊಡನೆ ಮಾಡಿದ ಅನುಸಂಧಾನ ಎಲ್ಲಿತ್ತು ? ಅಱಿವೆಲ್ಲಿತ್ತು= ಜ್ಞಾನವೆಲ್ಲಿತ್ತು ? ಅರ್ಥವೆಲ್ಲಿತ್ತು= ಜೀವನದ ಉದ್ದಕ್ಕೂ ಸಂಪಾದಿಸಿದ ಸಂಪತ್ತು ಎಲ್ಲಿತ್ತು ? ಅಮಳಗುಣವದು= ನಿಷ್ಕಲಂಕವಾದ ಸದ್ಗುಣಗಳು ಎತ್ತಿತ್ತೋ =ಏನಾದುವೋ ? ಸದ್ಧರ್ಮವೆಲ್ಲಿತ್ತು= ಚತುರ್ ಪುರುಷಾರ್ಥಗಳಲ್ಲಿ ಮೊದಲನೆಯ

ದಾದ ಧರ್ಮ ಎಲ್ಲಿತ್ತು ? ಒರಪು= ಕಾಂತಿ, ಸೌಂದರ್ಯ ಎಲ್ಲಿತ್ತು ? ಓಜೆ= ಶಕ್ತಿ ಎಲ್ಲಿತ್ತು; ಅತುಳ= ಲೆಕ್ಕವಿಲ್ಲದಷ್ಟು; ಬಲಮದೆಲ್ಲಿತ್ತು= ಇದ್ದ ನಿನ್ನ ಬಲವೆಲ್ಲಿಹೋಯಿತು ? ಇದಕ್ಕಂಜಿ= ಹೀಗಾದೀತು ಎಂಬುದನ್ನು ನೆನೆದು ಅಂಜಿ; ನಿಮ್ಮಂ= ನಿಮ್ಮನ್ನು; ಮಱೆವೊಕ್ಕೆಂ= ಮರೆಹೊಕ್ಕೆನು; ದೇವ ಪಂಪಾಪುರದ ಒಡೆಯನಾದ ವಿರೂಪಾಕ್ಷ ಸ್ವಾಮಿಯೇ ನನ್ನನ್ನು ರಕ್ಷಿಸು.

ಭಾವಾರ್ಥ : ಒಂದಿಷ್ಟಾದರೂ ಬಿಡುವುಕೊಡದೆ ಸಾವು ರಭಸವಾಗಿ ನುಗ್ಗಿ ಬಂದ ಆ ಸಮಯದಲ್ಲಿ ನಮ್ಮ ಭಕ್ತಿ, ಜ್ಞಾನ, ಅರ್ಥ, ಸದ್ಗುಣಗಳು, ಸದ್ಧರ್ಮಗಳು ಎಲ್ಲಿರುತ್ತವೆ ? ಏನು ಮಾಡುತ್ತವೆ ? ನಮ್ಮ ಸೌಂದರ್ಯ ಶಕ್ತಿ ಲೆಕ್ಕವಿಲ್ಲದ ಬಲ- ಇವೊಂದೂ ಸಾವು ಬಂದಾಗ ಏನನ್ನೂ ಮಾಡಲಾರವು. ಸಾವನ್ನು ಒಂದರೆನಿಮಿಷವೂ ತಡೆಹಿಡಿಯಲಾರವು. ಸಾವಿನ ಕೈಯೇ ಮೇಲಾಗುತ್ತದೆ. ಆದಕಾರಣ ಇಂಥ ಅನಿತ್ಯತೆಗೆ ಅಂಜಿ ನಿಮ್ಮ ಮರೆ ಹೊಕ್ಕಿದ್ದೇನೆ. ನನ್ನನ್ನು ರಕ್ಷಿಸು.

ಟಿಪ್ಪಣಿ: ನಾವು ದೊಡ್ಡ ಭಕ್ತರೇ ಆಗಿರಬಹುದು. ದೊಡ್ಡ ಜ್ಞಾನಿಗಳೇ ಆಗಿರಬಹುದು. ತುಂಬ ಧನಿಕರೂ ಆಗಿರಬಹುದು. ಸದ್ಗುಣ ಸಂಪನ್ನರೂ ಆಗಿರಬಹುದು. ಧರ್ಮಾತ್ಮರಾಗಿ ಜೀವಿಸಬಹುದು. ಆದರೆ, ಸಾವು ಬಂದಾಗ ಇವೊಂದೂ, ಅದರಿಂದ ತಪ್ಪಿಸಲಾರವು. ಏನಿದ್ದರೂ, ಎಷ್ಟಿದ್ದರೂ ಸಾವಿನಮುಂದೆ ಕೇವಲ ನಿಷ್ಪ್ರಯೋಜನ ! ಒಂದೆಡೆ ಬಸವಣ್ಣನವರು : "ಆತಜಾಣನು : ಜವನಬಾಯಲು ಬಾಲವ ಕೊಯ್ದು ಹೋದಾತ;" ಎಂದು ಹಾಡಿದ್ದಾರೆ. ನಾವು ದೊಡ್ಡ ಜ್ಞಾನಿಗಳು, ಎಂದು ಭಾವಿಸಿಕೊಳ್ಳಬಹುದು. ಆದರೆ ಯಮನನ್ನು ಗೆಲ್ಲಲಾರದ ಆ ಜ್ಞಾನ ಯಾತಕ್ಕೂ ಸಲ್ಲದು.

## ವೃತ್ತ: ೪೧

ದೇವಾ ನಾನೇವೆನೆಂದೆಂದಬಲೆಯಳುತೆ ತಾಂ ಪೋಗೆ ಪಿಂದಂ ಜನಂಗಳ್
ಸಾವೀತಂಗಾಯ್ತೆನುತ್ತುಂ ಮಱುಗಿ ಬರೆ ತನೂಜಾಳಿಯುಂ ಬಂಧುವರ್ಗಂ

ತಾವೆತ್ತಂ ಮತ್ತೆ ಶೋಕಂ ಮುಸುಕಿ ನಡೆಯೆ ತತ್ಕಷ್ಟದೊಳ್ ಕಾಷ್ಠರೂಪಿಂ
ಬೇವಲ್ಲಿಂ ಮುನ್ನ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೫೧

ಅರ್ಥ: ದೇವಾ; ನಾನ್= ನಾನು; ಏವೆನ್= ಏನಮಾಡಲಿ; ಎಂದೆಂದು; ಅಬಲೆ=ಸ್ತ್ರೀ (ಹೆಂಡತಿ) ಅಳುತೆ=ಅಳುತ್ತಾ; ತಾಂ= ತಾನು; ಪೋಗೆ= ಹೋಗಲು; ಪಿಂದಣ= ಹಿಂದಿನ; ಜನಂಗಳ್= ಜನಗಳು; ಈತಂಗೆ ಸಾವು ಆಯ್ತೆನುತ್ತುಂ= ಆಯಿತು ಎನುತ್ತ; ಮಱುಗಿ= ಕನಿಕರಿಸಿ; ಬರೆ= ಬರಲಾಗಿ; ತನೂಜಾಳಿ= ಮಕ್ಕಳ ಸಮೂಹವು; ಬಂಧುವರ್ಗಂ= ಬಂಧುಗಳ ಗುಂಪು; ತಾವೆತ್ತಂ= ತಾವೆಲ್ಲ; ಮತ್ತೆ ಶೋಕಂ= ದುಃಖವು; ಮುಸುಕಿ= ಮುತ್ತಿಕೊಂಡು ನಡೆಯೆ; ತತ್ಕಷ್ಟದೊಳ್= ಆ ಕಷ್ಟದಲ್ಲಿ ಕಾಷ್ಠರೂಪಿಂ= ಕಡ್ಡಿಯಂತೆ; ಬೇವಲ್ಲಿಂ= ಸುಟ್ಟುಹೋಗುತ್ತಿರುವ; ಮುನ್ನಂ= ಮೊದಲೇ ಪಂಪಾಪುರದ ಒಡೆಯನೇ ನನ್ನನ್ನು ರಕ್ಷಿಸು.

ಭಾವಾರ್ಥ: ಮನುಷ್ಯ ಸಾಯಲು ಆತನ ಮಡದಿ: 'ದೇವಾ ನಾನೇನು ಮಾಡಲಿ' ಎಂದು ಅಳುತ್ತಾ; (ಹೆಣದ) ಹಿಂದೆ ಹೋಗುವ ಜನರು: 'ಈತನಿಗೆ ಸಾವು ಬಂತು' ಎಂದೆನ್ನುತ್ತಾ ಕನಿಕರಿಸಿ ಬರುತ್ತಿರುವಾಗ ಮಕ್ಕಳೂ ಬಂಧುವರ್ಗದವರೂ ಮತ್ತೆ ಮತ್ತೆ ಶೋಕಿಸುತ್ತಾ, ದೇಹ ಕಟ್ಟಿಗೆಯಂತೆ ಸುಟ್ಟು ಭಸ್ಮವಾಗುವ ಮೊದಲೇ ನನ್ನನ್ನು ರಕ್ಷಿಸಿ ಉದ್ಧಾರಮಾಡು ಪಂಪಾಪುರದ ಒಡೆಯನಾದ ವಿರೂಪಾಕ್ಷ ಸ್ವಾಮಿಯೇ.

## ವೃತ್ತ: ೫೨

ಜನನೀಗರ್ಭಾಂಡದಿಂ ಬರ್ಪತಿವಿಷಮತರಕ್ಲೇಶಮಂ ಬಾಲ್ಯದೊಳ್ ಮಾ-
ಳ್ಪ ನಿಷೇಧವ್ರಾತಮಂ ಯೌವನವಿಕಳತೆಯಂ ಮುಪ್ಪಿನಾ ಹೇಯಮಂ ಸಾ-
ವನಿರೋಧಸ್ತೋಮಮಂ ಕಂಡಲಸಿದೆನದಿರ್ದೆಂ ಪೇಸಿದೆಂ ನೊಂದೆನೋರಂ-
ತನುಗೆಟ್ಟಂ ದೇವ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೫೨

ಅರ್ಥ: ಜನನೀ= ತಾಯಿ; ಗರ್ಭಾಂಡದಿಂ= ಗರ್ಭದಿಂದ; ಬರ್ಪ= ಬರುವ; ಅತಿವಿಷಮತರ ಕ್ಲೇಶಮಂ= ಅತ್ಯಂತ ಕಷ್ಟತರವಾದ ದುಃಖವನ್ನು; ಬಾಲ್ಯದೊಳ್

= ಬಾಲ್ಯದಲ್ಲಿ; ಮಾಳ್ಪ= ಮಾಡುವ; ನಿಷೇಧವ್ರಾತಮಂ= ಮಾಡಬಾರದ ಕೆಲಸಗಳ ಸಮೂಹವನ್ನು; ಯೌವನ ವಿಕಳತೆಯಂ= ಯೌವನದಲ್ಲಿ ಒದಗುವ ಮತಿವಿಕಲತೆಯನ್ನು ಮುಪ್ಪಿನ ಹೇಯುವನ್ನು= ಅಸಹ್ಯವಾದ ಸ್ಥಿತಿಯನ್ನು; ಸಾವ= ಸಾವಿನ; ವಿರೋಧ= ಸಂಕಟ; ಸ್ತೋಮಮಂ= ಸಮೂಹವನ್ನು; ಕಂಡು; ಅಲಸಿದೆಂ= ಬೇಸರಪಟ್ಟೆ; ಅದಿರ್ದೆ= ಹೆದರಿದೆ; ಪೇಸಿದೆಂ= ಹೇಸಿದೆ; ನೊಂದೆಂ= ನೊಂದೆನು; ಓರಂತೆ= ಶಿವ್ನಾಗಿ ಅನುಗೆಟ್ಟೆಂ= ಗತಿಗೆಟ್ಟೆನ; ದೇವ ಪಂಪಾಪುರದ ಅರಸನಾದ ವಿರೂಪಾಕ್ಷಸ್ವಾಮಿಯೇ ನನನ್ನು ರಕ್ಷಿಸುವುದು.

ಭಾವಾರ್ಥ: ತಾಯ ಗರ್ಭದಿಂದ ಹೊರಬರುವ ಅತ್ಯಂತ ಕಷ್ಟತರ ವಾದ ಕ್ಲೇಶವನ್ನೂ, ಬಾಲ್ಯದಲ್ಲಿ ಮಾಡಿದ ಮಾಡಬಾರದ ಕೆಲಸಗಳನ್ನೂ, ಯೌವನದಲ್ಲಿ ಉಂಟಾಗುವ ಮತಿವಿಕಲತೆಯನ್ನು ಮುಪ್ಪಿನಿಂದ ಉಂಟಾಗು ವ ಅಸಹ್ಯವಾದ ಸ್ಥಿತಿಯನ್ನು ಸಾವಿನ ಸಂಕಟವನ್ನೂ ಕಂಡು ಬೇಸರಗೊಂಡೆ ಗಡಗಡ ನಡುಗಿದೆ, ಹೇಸಿದೆ, ನೊಂದೆ, ಗತಿಗೆಟ್ಟೆ. ಇಂಥ ನನ್ನನ್ನು ದೇವಾ ರಕ್ಷಿಸು.

ಟಿಪ್ಪಣಿ: 2 ನೆಯ ವೃತ್ತದಿಂದ 41 ನೆಯ ವೃತ್ತದವರೆಗೆ ವಿವರ ವಾಗಿ ಹೇಳಿದ ಹುಟ್ಟುಬಾಲ್ಯ ಬೆಳವಣಿಗೆ ಮುಪ್ಪು ರೋಗ ಸಾವುಗಳೆಂಬ ಷಡ್ಭಾವಗಳನ್ನು ಈ ವೃತ್ತದಲ್ಲಿ ಮತ್ತೆ ಪುನಶ್ಚರಣೆ ಮಾಡುತ್ತಾನೆ. ಇನ್ನು ಮುಂದಿನ ವೃತ್ತಗಳಲ್ಲಿ 43 ರಿಂದ 57 ರ ವರೆಗೆ ಸಾಧಕ ಅನನ್ಯಭಕ್ತಿಯಿಂದ; ನೀನಲ್ಲದೆ ಮತ್ತೆ ಇನ್ನಾರೂ ನನಗೆ ಶರಣಿಲ್ಲ ಎಂಬ ಆರ್ತ ಧ್ವನಿಯಿಂದ ನೊರೆಯಿಡುತ್ತಾನೆ.

## ವೃತ್ತ : ೪೩

ಆನೆಂತೆಂತಕ್ಕೆ ಬಂದೆಂ ಮನುಜಭವದೊಳೆಂತಕ್ಕ ನೂನಾಂಗಸಂಗಂ
ತಾನಾಯ್ತೆಂತಕ್ಕೆ ಕೂಡಿತ್ತ ಘಟಿತಘಟಿತಂ ಸತ್ಕುಲಂ ಮತ್ತ ಮೆಂತ-
ಕ್ಕಾ ನಿಮ್ಮಂಘ್ರಿದ್ವಯಕ್ಕಾನೆಱಗಿದೆನಿನ್ನಿತಾಯಾಸದಿಂ ಬಂದೆನಯ್ ಸ-
ತ್ಯಾನಂದಜ್ಯೋತಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೪೩

ಅರ್ಥ: ಆನ್= ನಾನು; ಎಂತೆಂತಕ್ಕೆ= ಹೆಗೋಹೇಗೋ; ಮನುಜ ಭವದೊಳ್= ಮನುಷ್ಯ ಜನ್ಮದಲ್ಲಿ; ಬಂದೆಂ= ಬಂದೆನು; ಎಂತಕ್ಕೆ= ಹೇಗೋ; ಅನೂನಾಂಗ= ಊನವಾಗದ; ಪವಿತ್ರವಾದ; ಸಂಗಂ= ಸತ್ಸಂಗ; ಕಾನಾಯ್ತು=ಸಂಭವಿಸಿತು; ಅಘಟಿತಘಟಿತಂ= ಮೊದಲಿಂದೂ ಸಂಭವಿಸಿದ (ಹಿಂದೆ ಎಂದೂ ಘಟಿಸದ ಘಟನೆ) ಎಂತಕ್ಕೆ= ಹೇಗೋ; ಕೂಡಿತ್ತು= ಉಂಟಾಯಿತು; ಸತ್ಕುಲಂ= ಸತ್ಕುಲವು; ಮತ್ತಂ =ಇದು ಸಾಲದೆ; ಎಂತಕ್ಕೆ= ಹೇಗೋ; ೞ ನಿಮ್ಮಂಘ್ರಿದ್ವಯಕ್ಕೆ= ನಿಮ್ಮ ಪಾದಗಳ ಜೊತೆಗೆ; ಆನ್= ನಾನು; ಎರಗಿದೆನ್= ಆಶ್ರಯಕ್ಕೆ; ಇನಿತು= ಇಷ್ಟು; ಆಯಾಸದಿಂ= ಆಯಾಸದಿಂದ; ಬಂದೆನಯ್=ಬಂದೆನು; ಸತ್ಯಾನಂದಜ್ಯೋತಿ=ಸತ್‌ಚಿತ್ ಆನಂದ ಸ್ವರೂಪಿಯಾದ ಜ್ಯೋತಿರ್ಮೂರ್ತಿಯೇ ಪಂಪಾಪುರದರಸ ವಿರೂಪಾಕ್ಷ ನನ್ನನ್ನು ರಕ್ಷಿಸು.

ಭಾವಾರ್ಥ: ಹೇಗೋಹೇಗೋ ಮನುಷ್ಯ ಜನ್ಮ ದೊರೆಯಿತು; ಹೇಗೋ ಸಜ್ಜನರಸಂಘ ಲಭಿಸಿತು. ಹಿಂದೆಯೆಂದೂ ಸಂಭವಿಸದ ಸತ್ಕುಲದಲ್ಲೂ ಹುಟ್ಟಿದೆ. ಇಷ್ಟೆಲ್ಲವೂ ಸಾಲದೆಂಬಂತೆ ನಿಮ್ಮ ಪಾದಗಳ ಮೊರೆ ಹೊಕ್ಕೆ. ಇಷ್ಟು ಆಯಾಸದಿಂದ ಬಂದ ನನ್ನನ್ನು ಸಚ್ಚಿದಾನಂದ ಸ್ವರೂಪಿಯೂ ಜೋತಿಸ್ವರೂಪಿಯೂ ಆದ ಪಂಪಾಪುರದರಸ ವಿರೂಪಾಕ್ಷನೇ ರಕ್ಷಿಸು.

ಟಿಪ್ಪಣಿ: ಮನುಷ್ಯಜನ್ಮ ದೊರೆಯಬೇಕಾದರೆ ಎಷ್ಟೋ ಜನ್ಮಜನ್ಮಾಂತರಗಳನ್ನು ಪಡೆದು ಅನೇಕ ಶತಶತಶತ ಜನ್ಮಗಳ ಸಂಸ್ಕಾರದ ಪರಿಣಾಮವಾಗಬೇಕು. ಹಾಗೆ ಮನುಷ್ಯಜನ್ಮ ಧಾರಣೆಮಾಡಿದರೂ ಸಜ್ಜನ ಸಂಗ ದೊರೆಯುವುದೇನೂ ಸುಲಭವಲ್ಲ. ಅದೂ ಅವನ ಕರುಣೆಯಿಂದ ಹೇಗೋ ದೊರೆಯಿತು. ಮನುಷ್ಯಜನ್ಮವಾಯಿತು, ಸಜ್ಜನಸಂಗವಾಯಿತು ಆದರೆ ಹಿಂದೆಯೊಂದೂ ಘಟಿಸದಂತ ಇನ್ನೊಂದು ಸೌಲಭ್ಯವೂ ದೊರೆತಿದೆ. ಸತ್ಕುಲದಲ್ಲಿ ಜನಿಸಿದುದು ಆ ಪುಣ್ಯ. ಹೀಗೆ ಮಾನವಜನ್ಮ ಸತ್ಕುಲದಲ್ಲಿ ಆಗಿ ಸಜ್ಜನ ಸಂಗವೂ ದೊರೆಯುತ್ತದೆ. ಆದರೆ ಇಂಥ ಅನುಕೂಲ ಸನ್ನಿವೇಶದಲ್ಲಿ, ಸೌಲಭ್ಯಗಳನ್ನು ಪಡೆದಿದ್ದರೂ ಎಷ್ಟುಜನ ಭಗವಂತನ ಕಡೆಗೆ ತಿರುಗುತ್ತಾರೆ? ಆದರೆ, ಈ ಕವಿಯು ಸುದೈವದಿಂದ ಅವನ ಪಾದಗಳಿಗೆ ಅಡ್ಡ

ಬೀಳುವ ಸದ್ಭಾಗ್ಯ ದೊರೆಯುತ್ತದೆ. ಹೀಗೆ ಸಕಲ ಕಾರ್ಯಗಳೂ ಸೌಲಭ್ಯಗಳೂ ಹೇಗೋ ಅವನ ಕೃಪೆಯಿಂದ ಉಂಟಾಗಿದೆ. ಅವುಗಳನ್ನು ನಿಷ್ಕಾರಣವಾಗಿ ಹೋಗಗೊಡುವುದು ಜಾಣತನವಲ್ಲ. ಹಿಂದೆ, ಅಹಲ್ಯೆ, ಜಟಾಯು ಅಂತಹ ಮಹಾ ಭಕ್ತರಿಗೆ ಮನುಜಜನ್ಮ ಇಲ್ಲದೆ ಪರಿತಪಿಸುತ್ತಿದ್ದರು. ಅವರ ಆ ಮೂಕ ವೇದನೆಯನ್ನು ಯಾರು ವರ್ಣಿಸಬಲ್ಲರು? ಒಂದುವೇಳೆ ಮನುಷ್ಯಜನ್ಮ ದೊರೆತರೂ ಸತ್ಕುಲದಲ್ಲಿ ಜನಿಸದೆ ಇರುವುದರಿಂದ, ಮಾದಾರ ಚೆನ್ನಯ್ಯ, ಹರಳಯ್ಯ ಮುಂತಾದ ಭಕ್ತರು ಅನಂತ ಕಷ್ಟಪರಂಪರೆಗಳನ್ನೇ ಎದುರಿಸಬೇಕಾಯಿತು. ಅಷ್ಟೇ ಅಲ್ಲ. ಸತ್ಕುಲದಲ್ಲಿ ಜನಿಸಿದ ಎಷ್ಟು ಜನರು ಭಕ್ತಿಯನ್ನು ಮಾಡಬಲ್ಲರು? ಈ ಕವಿಯ ಸುದೈವದಿಂದ ಅದೂ ದೊರೆತಿದೆ.

ವೃತ್ತ : ೪೪

ಶರಣಾರ್, ನೀಂ; ಕಾವರಾರ್, ನೀಂ; ಗತಿಮತಿಪತಿಯಾರ್, ಕೃಪಾಂ
ಭೋಧಿಯಾರ್, ನೀಂ;
ಗುರುವಾರ್, ನೀಂ; ಗೋತ್ರವಾರ್ ನೀಂ; ಜನನಿಜನಕರಾರ್ ನೀಂ;
ಮಹಾಬಂಧುವಾರ್, ನೀಂ;
ವರರಾರ್, ನೀಂ; ವಂದ್ಯರಾರ್, ನೀನೆನಗತಿಹಿತರಾರ್ ನೀಂ ಮಹಾದೇವ
ನಿನ್ನಿಂ
ಪರರಾರಾರ್ ನೀನೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೪೪

ಅರ್ಥ: ಶರಣರ್= ಆಶ್ರಯದಾತನು; ಆರ್ =ಯಾರು; ನೀಂ =ನೀನು; ಕಾವರ್= ಕಾಪಾಡುವವರು; ಆರ್; ನೀಂ; ಪತಿ= ಒಡೆಯನು; ಕೃಪಾಂಭೋಧಿ= ಕೃಪೆಯ ಸಮುದ್ರ; ಗೋತ್ರ =ರಕ್ಷಣೆ; (Protection or shelter); ವರರ್ = ವರವನ್ನು ಕೊಡುವವರು; ವಂದ್ಯರ್= ವಂದನೆಯನ್ನು ಕೈಕೊಳ್ಳುವಂಥರು; ಎನಗೆ+ಅತಿ+ಹಿತರ್= ಎನಗತಿಹಿತರ್; ಪರರ್= ಶ್ರೇಷ್ಠವರು.

ಭಾವಾರ್ಥ: ನನಗೆ ಆಶ್ರಯದಾತನು, ಕಾಪಾಡುವವನು, ಗತಿಮತಿಪತಿಯೂ, ಕೃಪಾಸಾಗರನೂ, ರಕ್ಷಕನೂ, ಜನನಿ ಜನಕನೂ, ಮಹಾ ಬಂಧು

ವ್ವೂ, ವರಗಳನ್ನು ಕೊಡುವವನೂ; ವಂದನೆಯನ್ನು ಕೈಕೊಳ್ಳುವವನೂ, ಆಶ್ರಿ
ತವನ್ನುಂಟುಮಾಡುವವನೂ, ಎಲ್ಲರಿಗಿಂತಲೂ ಹೆಚ್ಚಿನವನೂ ನೀನೇ,
ಅಂಥ ಪಂಪಾಪುರದ ಅರಸನಾದ ವಿರೂಪಾಕ್ಷಸ್ವಾಮಿಯು ನನ್ನನ್ನು ರಕ್ಷಿಸಲಿ.

ಟಿಪ್ಪಣಿ : ಜಗತ್ತಿನ ಜಂಜಡ, ಸಂಸಾರದ ತಾಪತ್ರಯ, ಅರಿಷಡ್ವ
ರ್ಗಗಳ ದಾಳಿಯಿಂದ ನೊಂದ ಜೀವ, ಯಾರಿಂದಲಾದರೂ ಶಾಂತಿ ದೊರೆ
ತೀತೇ ಸುಖದೊರತೀತೆ ಎಂದು ಕಂಡಕಂಡವರ, ಕಂಡಕಂಡುದರ ಬೆನ್ನುಹತ್ತಿ
ಹೋಗುತ್ತದೆ. ಮನೆಯೆಂದು ಮಕ್ಕಳೆಂದು ಜನನಿ ಜನಕರೆಂದು ಪತ್ನಿಯೆಂ
ದು ಧನವೆಂದು ಧಾನ್ಯವೆಂದು, ಬಂಧುಬಾಂಧವರೆಂದು, ಮಿತ್ರರೆಂದು ಯಾರ
ಯಾರನ್ನೇ ನಂಬಿ (ವೃತ್ತ ೨೨ ನ್ನು ನೋಡಿ) ಜೀವ ಸುಖಕ್ಕಾಗಿ ಸಂತೋಷ
ಕ್ಕಾಗಿ ಪರಿತಪಿಸುತ್ತದೆ. ಆದರೆ ಅವರು ಯಾರೂ ಆ ಶಾಂತಿಯನ್ನು ಸುಖ
ವನ್ನು ಕೊಡಲಾರರು. ಅವರೆಲ್ಲರೂ ಕೇವಲ ಕ್ಷಣಿಕ ಅಶಾಶ್ವತ; ದುಃಖದಾ
ಯಕ ಎಂಬುದನ್ನು ಜೀವ ಕೊನೆಗೆ ಒಂದಲ್ಲ ಒಂದುದಿನ ಅರಿತುಕೊಳ್ಳುತ್ತದೆ.
ಆಗ, ನಿತ್ಯನೂ, ಶಾಶ್ವತವೂ, ನಿಜವಾಗಿಯೂ ನೊಂದಜೀವಕ್ಕೆ ಭರವಸೆಯ
ನ್ನು ಕೊಡಬಲ್ಲವನು ಅವನೊಬ್ಬನೇ ಎಂಬ ಅರಿವು ಉದಿಸುತ್ತದೆ. ಆಗ
ಎಲ್ಲದೂ ನೀನೆ; ನಿನ್ನಿಂದಲೇ ಉದ್ಧಾರ - ಎಂದು ಭಗವಂತನ ಪಾದಾರವಿಂ
ದವನ್ನು ಗಟ್ಟಿಯಾಗಿ ಹಿಡಿದುಕೊಳ್ಳುತ್ತಾನೆ. ನೀನಲ್ಲದೆ ಇನ್ನಾರು ನನಗಿಲ್ಲ
ಎಂದು ಸಂಪೂರ್ಣವಾಗಿ ಶರಣಾಗತನಾಗುತ್ತಾನೆ.

### ವೃತ್ತ : ೪೫

ಮರುಳರಾಂ ಮತ್ತನಾರಂ ಮತಿವಿರಹಿತನಾರಂ ಬುಧದ್ವೇಷಿಯಾರಾಂ
ಪರನಾರಾಂ ಕರ್ಮಿಯಾರಾಂ ಖಲಜನಸಖನಾರಾಂ ಸದಾಕ್ರೂರವಾಕ್
ಸಾ-
ಹಸನಾರಾಂ ನೀಚನಾರಾಂ ವಿಷಯವಿಕಳನಾರಾಂ ಮಹಾಕ್ಷುದ್ರನಾರಾಂ
ಪರರಾರಾನೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೪೫

ಅರ್ಥ : ಮರುಳ= ಹುಚ್ಚ; ಆರ್= ಯಾರು; ನಾಂ= ನಾನು (ಮರುಳ್ +ಆರ್+ಆಂ= ಮರುಳಾರಾಂ) ಮತ್ತನ್= ಮದಿಸಿದವನು; ಸೊಕ್ಕಿದವನು; ಆರ್+

ದಾರು ? ಅಂ= ನಾನೇ ! ಮತಿ= ತಿಳುವಳಿಕೆ; ವಿರಹಿತ= ಇಲ್ಲದವನು; ಬುಧ= ಬಲ್ಲವರ; ದ್ವೇಷಿಯೂ ನಾನೇ; ಪರನ್= ಭಗವಂತನಿಗೆ ಬೇಡವಾದವನು; ದೂರವಾದವನು; ಕರ್ಮಿ= ವ್ಯರ್ಥಾಕರ್ಮಗಳಲ್ಲಿ ತೊಡಗಿದವನು; ಸದಾ= ಯಾವಾಗಲೂ; ಕ್ರೂರವಾಕ್= ಕಠೋರವಾದ (ಮನನೋಯುವ) ಮಾತನಾಡುವವನು; ಖಲಜನ= ದುಷ್ಟಜನರ; ಸಖನು= ಸ್ನೇಹಿತನು; ಪಾಮರನು= ಮೂರ್ಖನು; ವಿಷಯ= ವಿಷಯಸುಖಗಳಿಂದ; ವಿಕಳನ್= ಮತಿಗೆಟ್ಟವನು; ಎನ್ನಿಂ= ನನಗಿಂತ; ಮಹಾಕ್ಷುದ್ರನ್= ಮಹಾನೀಚನು; ಪರರ್= ಬೇರೆ ಇನ್ನು ಆರ್= ಯಾರಿದ್ದಾರೆ; ? ಅನೆ= ನಾನೆ ಪಂಪಾಪುರದರಸ ವಿರೂಪಾಕ್ಷನೇ ಎನ್ನನ್ನು ರಕ್ಷಿಸುವುದು.

**ಭಾವಾರ್ಥ:** ಹುಚ್ಚನು ನಾನೆ. ಮದಿಸಿದವನು ನಾನೆ. ಬುದ್ಧಿಯಿಲ್ಲದವನುನಾನೆ. ಬಲ್ಲಜನರ ದ್ವೇಷಿಯೂ ನಾನೆ. ಭಗವಂತನಿಂದ ದೂರೀಕರಿಸಲ್ಪಟ್ಟು ಅವನಿಗೆ ಬೇಡವಾದವನು, ಕರ್ಮಠನು, ದುಷ್ಟಜನರ ಸಹವಾಸಿಯೂ, ಕಠೋರ ಮಾತಿನವನೂ, ಮೂರ್ಖನೂ, ವಿಷಯಗಳಿಂದ ಮತಿವಿಕಲನಾದವನೂ ನಾನೆ. ನನಗಿಂತ ಮಹಾ ಪಾತಕಿ ಯಾರು? ಯಾರೂ ಇಲ್ಲ. ನಾನೇ. ಅಂಥವನನ್ನು ಹಿಡಿದೆತ್ತಿ ಉದ್ಧಾರಮಾಡು ತಂದೇ ಎಂದು ಸಾಧಕ ಪ್ರಾರ್ಥಿಸುತ್ತಾನೆ.

**ವೃತ್ತ: ೪೬**

ಗುರು ನೀಂ ತ್ವಚ್ಛಿಷ್ಯನಾಂ ನಿರ್ಮಳಘನನಿಧಿ ನೀಂ ಕ್ಷುದ್ರನಾಂ ದಾನಿ ನೀನಾ-
ತುರನಾಂ ನಿಷ್ಕಾಮಿ ನೀಂ ಕಾಮುದ ನೆಳೆವನೆಯಾಂ ತಂದೆ ನೀಂ ಪುತ್ರನಾಂ ಶಾಂ-
ತರಸಂ ನೀಂ ಕ್ರೋಧಿಯಾಂ ಪುಣ್ಯದ ಫಲತತಿ ನೀಂ ಪಾಪಿಯಾಂ ಸ್ವಾಮಿ ನೀಂ ಕಿಂ-
ಕರನಾಂ ಕೈಕೊಂಡು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೪೬

ಅರ್ಥ: ನೀಂ =ನೀನು; ಗುರು; ತತ್= ನಿನ್ನ; ಶಿಷ್ಯನಾಂ= ಶಿಷ್ಯನು ನಾನು; ನಿರ್ಮಳ= ನಿರ್ಮಲವಾದ ಘನನಿಧಿ= ಘನನಿಧಿ ನೀನು; ಕ್ಷುದ್ರನು ನಾನು; ನೀನು

ದಾನಿ= ದಾನಮಾಡಲು ಶಕ್ತನಾದವನು; ನಾನು ಆತುರನ್= ಅದುಬೇಕು ಇದುಬೇಕು ಎಂದು ಬೇಡುವವನು; ನಿಷ್ಕಾಮಿ ನೀಂ= ಬೇಕೆಂಬುದೇ ಇಲ್ಲದವನು ನೀನು; ಕಾಮದ = ಎಲ್ಲದೂ ಬೇಕೆಂಬ ಆಸೆಯ; ನೆಲೆವನೆ= (ನೆಲೆ+ಮನೆ) ವಾಸದಮನೆಯೇ ನಾನು. ಕ್ರೋಧಿ= ಕೋಪಿಷ್ಠನು; ಪುಣ್ಯದ ಫಲತತಿ= ಪುಣ್ಯದ ಫಲದ ಸಮೂಹವೇ ನೀನು, ನಾನು ಪಾಪಿ; ನೀನು ಸ್ವಾಮಿ; ನಾನು ಕಿಂಕರ= ನಾನು ಸೇವಕ; ಕೈಕೊಂಡು= ಕೈ ಹಿಡಿದೆತ್ತಿ ರಕ್ಷಿಸು ತಂದೆ.

**ಭಾವಾರ್ಥ:** ನೀನು ಗುರು ನಾನು ಶಿಷ್ಯ. ಪರಿಶುದ್ಧತೆಯ ನಿಧಿಯೇ ನೀನು, ನಾನು ಅಪವಿತ್ರನು. ನೀನು ದಾನಿ ನಾನು ಭಿಕ್ಷುಕ. ನೀನು ನಿಷ್ಕಾಮಿ ನಾನು ಕಾಮದ ವಾಸದಮನೆಯೇ ನಾನು. ನೀನು ತಂದೆ ನಾನು ಮಗು. ನೀನು ಶಾಂತರಸ ನಾನು ಕೋಪಿಷ್ಠ. ನೀನು ಪುಣ್ಯದನಿಧಿ, ನಾನು ಪಾಪಿ. ನೀನು ಸ್ವಾಮಿ ನಾನು ಸೇವಕ ಇಂಥ ನನ್ನನ್ನು ನೀನು ಉದ್ಧರಿಸಿ ಕಾಪಾಡು ಪಂಪಾಪತಿಯೇ

**ಟಿಪ್ಪಣಿ:** ನಾವು ಅವನಾಗಲು ಪ್ರಯತ್ನಿಸುತ್ತಿದ್ದೇವೆ. ಆದರೆ ಅವನಿಗೂ ನಮಗೂ ಎಲ್ಲಿಯೂ ಸಾಮ್ಯಗುಣಗಳಿಲ್ಲವೇ ಯಿಲ್ಲ. ನಾವು ಇದ್ದಲು ಇದ್ದಂತೆ. ಅವನೋ ವಜ್ರವಿದ್ದಂತೆ. ಆದರೂ ಇದ್ದಲೂ ವಜ್ರ ವಾಗಬೇಕೆಂಬ ಹಾರೈಕೆ ಮಾತ್ರ ಇದೆ. ಆ ಹಾರೈಕೆ ಈಡೇರುವುದು ಭಗವತ್ಕೃಪೆಯಿಂದಲ್ಲದೆ, ಇನ್ನು ಯಾರಿಂದಲೂ ಸಾಧ್ಯವಿಲ್ಲ.

ಸಾಧಕವರೇಣ್ಯ ಮಹಾಕವಿ ಹರಿಹರನು, ತನ್ನ ಅವಗುಣಗಳನ್ನು ಹೇಳಿಕೊಳ್ಳುವನೆವದಿಂದ ಭಗವಂತನ 'ಗುಣ'ವನ್ನು ವರ್ಣಿಸಿದ್ದಾನೆ. ಗುರುವೂ, ದಾನಿಯೂ, ನಿಷ್ಕಾಮಿಯೂ, ತಂದೆಯೂ, ಶಾಂತರಸನೂ ಆದವನು ಅವನೊಬ್ಬನೇ.

## ವೃತ್ತ: ೪೩

ಖಳನಂ ದುರ್ಬೋಧನಂ ದುರ್ವಿಷಯನಿರತಂ ದುಷ್ಟನಂ ಧೂರ್ತನಂ ದುರ್ಬಳನಂ ದುರ್ಮೋಹಿಯಂ ದುರ್ಜನಜನಹಿತಂ ಸಜ್ಜನದ್ವೇಷಿಯಂ ಸಂ-

ಚಳನಂ ದೋಷಾರ್ತಿಯಂ ದುರ್ಧರತರವಿರಸ ಕ್ರೀಡನಂ ಕೋಪಿಯಂ ವ್ಯಾ-
ಕುಳನಂ ಕೈಕೊಂಡು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ. ೪೭

ಅರ್ಥ: ಖಳನಂ= ದುಷ್ಟನನ್ನು; ದುರ್ಬೋಧನಂ= ಕೆಟ್ಟವಿಷಯಗಳನ್ನು ತಿಳಿದವನು; ದುರ್ವಿಷಯ= ಕೆಟ್ಟವಿಷಯಗಳಲ್ಲಿ; ವಿರತನಂ= ಆಸಕ್ತನಾದವನು; ದುರ್ಬಳನಂ= ದರ್ಬಲನೂ; ದುರ್ಮೋಹಿಯಂ= ಕೆಟ್ಟ ಮೋಹಿಯೂ; ದುರ್ಜನ ಜನ ಹಿತನಂ= ಕೆಟ್ಟಜನರ ಸ್ನೇಹಿತನು; ಸಜ್ಜನ= ಒಳ್ಳೆಯಜನರ; ದ್ವೇಷಿಯಂ= ಶತ್ರುವನ್ನು; ಪಂಚಳನಂ= ಕುಟಿಲನು; ದೋಷಾರ್ತಿಯ= ದೋಷವನ್ನು (ಕೆಟ್ಟುದನ್ನು) ಪ್ರೀತಿಸುವವನು; ದುರ್ಧರ ತರ= ತಡೆಯಲಾರದಂಥ; ವಿರಸ= ಅಸಂತೋಷಕ್ಕೆ ಎಡೆಕೊಡುವಂಥದುರಲ್ಲೇ ಕ್ರೀಡನಂ= ಕ್ರೀಡಿಸುವವನು; ವ್ಯಾಕುಳನಂ= ದುಖಿಯನ್ನು ಕೈಕೊಂಡು ಉದ್ಧಾರಮಾಡಿ ರಕ್ಷಿಸು ಪಂಪಾಪತಿಯೇ.

ಭಾವಾರ್ಥ: ನಾನು ದುಷ್ಟ; ಕೆಟ್ಟುದನ್ನೇ ತಿಳಿಯುವುದರಲ್ಲೇ ಆಸಕ್ತ. ಕೆಟ್ಟವಿಷಯಗಳಲ್ಲೇ ಆಸಕ್ತಿಯುಳ್ಳವನು. ದುಷ್ಟನು, ಧೂರ್ತನು, ದುರ್ಬಲನು. ಅತಿಯಾದ ಮೋಹಾಂಧಕಾರ ಕವಿದವನು. ದುರ್ಜನರ ಗೆಳೆಯ; ಸಜ್ಜನರ ಶತ್ರು. ಕುಟಿಲನು, ದೋಷವನ್ನು ಪ್ರೀತಿಸುವವನು, ಸಹಿಸಲಸದಳವಾದ ಅಸಂತೋಷಕ್ಕೆ ಎಡೆಕೊಡುವಂಥವನು. ಕೋಪಿಷ್ಟನು, ದುಃಖಿಯೂ ಆದ ನನ್ನನ್ನು ನೀನು ರಕ್ಷಿಸಿ ಉದ್ಧಾರಮಾಡು ಪಂಪಾಪತಿ ವಿರೂಪಾಕ್ಷಸ್ವಾಮಿಯೇ.

## ವೃತ್ತ: ೪೮

ಅಳಿಪಂ ಸನ್ಮಾನಹೀನಂ ಸುಜನಜನವಿದೂರಂ ವೃಥೋತ್ಸಾಹಿ ಮೂರ್ಖಂ
ಖಳನತ್ಯಾಸ್ವಾದಿ ವಿದ್ಯಾವಿನಯನಯವಿಹೀನಂ ಕುಜಾತಿಪ್ರಸಂಗಂ
ಗಳಪಂ ಚರ್ವಾಕನಜ್ಞಂ ಗುಣರಹಿತನೆನಿಪ್ಪೆನ್ನನೊಲ್ದೀಶ ನೀಂ ವ್ಯಾ-
ಕುಳನಂ ಕೈಕೊಂಡು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ. ೪೮

ಅರ್ಥ: ಅಳಿಪಂ= ಪರಧನಪರವಧುವಿಗಾಗಿ ಆಸೆಮಾಡುವವನು. ಸನ್ಮಾನಹೀನಂ= ಮಾನಮರ್ಯಾದೆಗಳು ಇಲ್ಲದವನು. ಸುಜನ= ಒಳ್ಳೆಯಜನರ; ಜನವಿದೂರಂ

= ಸಂಗವಿಲ್ಲದವನು. ವ್ಯರ್ಥೋತ್ಸಾಹಿ= ವ್ಯರ್ಥವಾದ ಉತ್ಸಾಹದಲ್ಲಿ ತೊಡಗಿದವನು. ಖಳನ್= ದುಷ್ಟನು. ಅತ್ಯಾಸ್ವಾದಿ= ಅತ್ಯಂತ ಹೆಚ್ಚಾಗಿ ತಿನ್ನುವ ಕೋಳುಬಾಕ; ವಿದ್ಯಾವಿನಯ ನಯವಿಹೀನಂ= ವಿದ್ಯೆ ವಿನಯ, ನಯ (ಸಂಸ್ಕೃತಿ) ಇಲ್ಲದವನು. ಕುಜಾತಿ= ಕೆಟ್ಟಜಾತಿಯ ವಿಚಾರಗಳಲ್ಲಿ ತೊಡಗಿರುವವನು. ಗಳಪಂ= ಹಾಳುಹರಟೆ ಕೊಚ್ಚುವವನು. ಚಾರ್ವಾಕಂ= ದೇವರಿಲ್ಲವೆಂದು ನಂಬಿದವನು. ಅಜ್ಞಂ = ಅಜ್ಞಾನಿ. ಗುಣರಹಿತನ್= ಸದ್ಗುಣಗಳಿಲ್ಲದವನು ಎನಿಪ್ಪ= ಎನಿಸಿರುವ; ಎನ್ನನೊಲಿದು= ನನ್ನನ್ನು ಒಲಿದು; ಈಶ= ಈಶ್ವರನೇ ನನ್ನನ್ನು ರಕ್ಷಿಸು.

ಭಾವಾರ್ಥ: ಪರಧನಪರವಧುವಿಗಾಗಿ ಆಸೆಮಾಡುವನೂ, ಸಜ್ಜನಸಂಗ ವಿಲ್ಲದವನೂ, ವೃಥಾ ಕರ್ಮದಲ್ಲಿ ತೊಡಗಿದವನೂ, ಮೂರ್ಖನೂ, ದುಷ್ಟನೂ, ಅತಿಯಾದ ನಾಲಗೆಚಾಪಲ್ಯಕ್ಕೆ ಸಿಕ್ಕವನೂ (ಸಂಯಮರಹಿತನೂ) ವಿದ್ಯೆ, ವಿನಯ, ಸಂಸ್ಕೃತಿಗಳಿಲ್ಲದವನೂ, ಕುಜಾತಿ ಪ್ರಸಂಗಿಯೂ, ಹಾಳು ಹರಟೆಯನ್ನು ಕೊಚ್ಚುವುದರಲ್ಲೇ ಕಾಲಹರಣ ಮಾಡುವಂಥವನೂ, ಗುಣವಿಲ್ಲದವನೂ ಎನಿಸಿರುವ ನನ್ನನ್ನು ಒಲಿದು ಈಶನೇ ಈ ದುಃಖಿಯನ್ನು ಉದ್ಧರಿಸಿ ರಕ್ಷಿಸು.

ಟಿಪ್ಪಣಿ : ರಜೋಗುಣ ಪ್ರಧಾನ್ಯವಾದ ಮನುಷ್ಯ, ಅದನ್ನು ಮಾಡಬೇಕು, ಇದನ್ನು ಮಾಡಬೇಕು, ಕೆರೆ ಕಟ್ಟಿಸೇನು, ಭಾವಿ ತೋಡಿಸೇನು, ಆಸ್ಪತ್ರೆ ಮಾಡಿಸೇನು - ಎಂದು ಏನೇನೋ ನೂರೈವತ್ತು ರಗಳೆಗಳನ್ನು ಹಚ್ಚಿಕೊಳ್ಳುತ್ತಾನೆ. ಆದರೆ, ನೂರು ಆಸ್ಪತ್ರೆಗಳನ್ನು ಕಟ್ಟಿಸಿದರೂ ಭಗವಂತನಲ್ಲಿ ಒಂದಾಗುವುದು ಸಾಧ್ಯವಿಲ್ಲ. ಆದ್ದರಿಂದ ಎಂಥ ಲೋಕೋಪಯೋಗಿ ಕೆಲಸವಾದರೂ ವ್ಯರ್ಥ ಶ್ರಮವೇ - ಭಕ್ತನ ದೃಷ್ಟಿಯಲ್ಲಿ.

ರಜೋಗುಣ ಪ್ರಧಾನ್ಯವಾದ ಮನುಷ್ಯನ ಮತ್ತೊಂದು ಗುಣ ಸುಮ್ಮನೆ 'ಲೊಡಲೊಡ' ಮಾತನಾಡುವುದು. ಅವೂ ಉಪಯೋಗವಿಲ್ಲದ ಮಾತನ್ನಾಡುವುದರಲ್ಲೇ ಕಾಲಕಳೆಯುವುದು ಅವನ ಗುಣ. ಭಗವಂತನ ಧ್ಯಾನದಲ್ಲಿ, ಜಪದಲ್ಲಿ ಕಳೆಯಬೇಕಾದ ನಾಲಗೆಯ ಶಕ್ತಿಯನ್ನು ಹಾಳುಹರಟೆಯಲ್ಲಿ

ಕಳೆಯುವಂಥ ದುರ್ದೈವ ಇನ್ನೊಂದಿರಬಹುದೆ ? ದೇವರ ಪೂಜೆಗೆ, ಪ್ರಾರ್ಥನೆಗೆ ಸಮಯವಿಲ್ಲ ಎಂಬ ಈ ಜನ ಹಗಲಿರಳೂ ಏನಾದರೊಂದು ನಿರರ್ಥಕ ವಿಚಾರಗಳನ್ನು ಮಾತನಾಡುವುದರಲ್ಲೇ ಕಾಲ ಕಳೆಯುತ್ತಾರೆ.

'ಚಾರ್ವಾಕನಾದ ನನ್ನನ್ನು ಉದ್ಧಾರಮಾಡು ತಂದೇ' ಎಂದು ಇಲ್ಲಿ ಕವಿ ಪ್ರಾರ್ಥಿಸುವುದು ವಿರೋಧಾಭಾಸವಾಗಿ ತೋರುತ್ತದೆ. ದೇವರಿಲ್ಲ ಎಂದು ನಂಬಿದ 'ಚಾರ್ವಾಕ' ನನ್ನನ್ನು ಉದ್ಧಾರಮಾಡು ಎಂದು ದೇವರನ್ನು ಪ್ರಾರ್ಥಿಸುವುದುಂಟೇ ? ಆದರೆ ಇಲ್ಲಿ ಕವಿ ಹೇಳುವ ಚಾರ್ವಾಕ, ಸಂಪ್ರದಾಯದ ಚಾರ್ವಾಕನಲ್ಲ. ಆದರೆ ದೇವರಿದ್ದಾನೆಎಂದು ಬಾಯಲ್ಲಿ ನುಡಿಯುತಿದ್ದು ದೇವರಿಲ್ಲವೇಇಲ್ಲವೆಂಬಂತೆ ನಡೆಯುತ್ತಿದ್ದಾನಲ್ಲ - ಅಂಥವನ್ನು ಕುರಿತು ಹೇಳಿದ ಮಾತು ಇದಾಗಿರಬೇಕು: ಇಂಥ ಚಾರ್ವಾಕ (ದೇವರಿದ್ದಾನೆಂದು ನುಡಿದು ದೇವರಿಲ್ಲವೆಂಬಂತೆ ನಡೆಯುವವ) ಅಂಥ ಚಾರ್ವಾಕ (ದೇವರಿಲ್ಲವೆಂದು ನಂಬಿ ದೇವರಿಲ್ಲದವನಂತೆ ನಡೆಯುವವ) ಸಿಗಿಂತ ಅಧಮನೆನ್ನಬೇಕು. ಆ ಚಾರ್ವಾಕ ತಾನು ನುಡಿದಂತೆ, ನಂಬಿದಂತೆ ನಡೆಯುತ್ತಾನೆ. ಆದರೆ ಈ ಚಾರ್ವಾಕ ನುಡಿಯುವುದೊಂದು, ನಡೆಯುವುದೊಂದು. ಇಂಥವನನ್ನೇ ಮಿಥ್ಯಾಚಾರಿ ಯೆಂದು ಹೇಳುತ್ತಾರೆ.

ಹಾಗೆಯೇ ಇನ್ನೊಂದು ವಿಶೇಷವನ್ನಿಲ್ಲಿ ಗಮನಿಸಬೇಕು. 'ಅತ್ಯಾಸ್ವಾದಿ' ಮತ್ತು 'ಗಳಪಂ' ಎಂಬ ಎರಡು ದುರ್ಗುಣಗಳನ್ನು ಕವಿ ಇಲ್ಲಿ ಎತ್ತಿ, ಒತ್ತಿ ಹೇಳುತ್ತಾನೆ. ಇವುಗಳಿಗೆ ಅಷ್ಟೊಂದು ಪ್ರಾಮುಖ್ಯತೆ ಕೊಡಬೇಕಾದ ಅಗತ್ಯ ಏನು ? ಅತಿಯಾಗಿ ತಿನ್ನುವುದು, ಅತಿಯಾಗಿ ಮಾತನಾಡುವುದು - ಎರಡೂ ಮಹಾ ಎಡರುಗಳು. ನಾಲಗೆಯ ಚಾಪಲ್ಯ ಎರಡು ವಿಧವಾದುದು. ಒಂದು ಚೆನ್ನಾಗಿ ತಿನ್ನಬೇಕೆಂಬುವುದು. ಇನ್ನೊಂದು ಬಾಯಿಗೆಬಂದಂತೆ ಮಾತನಾಡುವುದು. ಎರಡನ್ನು ಗೆಲ್ಲದಹೊರತು ಸಾಧಕ ಒಂದಂಗುಲವೂ ಮುಂದುವರಿಯಲಾರ. ಚೈತನ್ಯ ದೇವರ ವಿಚಾರದಲ್ಲಿ ಒಂದು ಸ್ವಾರಸ್ಯವಾದ ಕತೆಯಿದೆ. ಅವರು ಅತ್ಯಂತ ಚಿಕ್ಕಂದಿನಲ್ಲಿಯೇ ಸನ್ಯಾಸ ದೀಕ್ಷೆ ಬೇಕೆಂದು ಗುರುವಿನಲ್ಲಿಗೆ ಹೋದರಂತೆ. ಗುರು ದೀಕ್ಷೆಯನ್ನು ಕೊಡುವುದಕ್ಕೆಮುಂಚೆ

ಶಿಷ್ಯನನ್ನು ಪರೀಕ್ಷೆಮಾಡಿದರಂತೆ. ಚೈತನ್ಯದೇವನ ನಾಲಗೆಯನ್ನು ಮುಂ ದೆ ಚಾಚುವಂತೆ ಹೇಳಿದರು. ಚೈತನ್ಯ ನಾಲಗೆ ಚಾಚಿದ. ಗುರು ಒಂದು ಚಿಟಿ ಕೆ ಸಕ್ಕರೆಯನ್ನು ಅವನ ನಾಲಗೆಯಮೇಲೆ ಹಾಕಿದರಂತೆ. ಸಕ್ಕರೆ ಕರಗದಿ ದ್ದರೆ ಸಂನ್ಯಾಸದೀಕ್ಷೆ ಕೊಡುವುದಾಗಿ ಹೇಳಿದರಂತೆ. ಸಕ್ಕರೆ, ನಾಲಗೆಯ ಮೇಲೆಯೇ ಇದ್ದರೂ ಅದು ಕರಗಲಿಲ್ಲವಂತೆ. ಆಗ, ಗುರು ಮೆಚ್ಚಿದನಂತೆ ಹಾಗೆಯೇ ಮೌನವನ್ನು ಸಾಧಿಸಲಾರದವನು ಮುನಿಯಾಗಲಾರ. ಈ ಸತ್ಯ ವನ್ನಿಲ್ಲಿ ಕವಿ ಮೂಡಿಸಿದ್ದಾನೆ.

ವೃತ್ತ : ೪೯

ಸತತಂ ನಿಂದಾಕರಂ ನಿಷ್ಠುರನತಿಕೃಪಣಂ ಸಜ್ಜನದ್ವೇಷಿ ದಶ್ಚಿಂ-
ತಿತಚಿತ್ತಂ ಜ್ಞಾನದೂರಂ ಪರಹಿತರಹಿತಂ ಭಕ್ತಿವಿಶ್ವಾಸಹೀನಂ
ಸ್ತುತಿಲೋಲಂ ರಾಗಶೀಲಂ ಸುಕೃತವಿಮುಖನಾನಂದಹೀನಂ ವಿಮಾನಂ
ನತಕಲ್ಪೋರ್ವೀಜ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೪೯

ಅರ್ಥ : ಸತತಂ= ಯಾವಾಗಲೂ; ನಿಂದಾಕರಂ= ನಿಂದೆಯ ಗಣಿಯಂತಿರು ವವನು; ನಿಷ್ಠುರನ್= ಮುಲಾಜಿಲ್ಲದವನು; ಕೃಪಣಂ= ಲೋಭಿ; ಸಜ್ಜನರದ್ವೇಷಿ; ದುಶ್ಚಿಂತಿತಚಿತ್ತಂ= ದುಷ್ಟಚಿಂತನೆಗಳೇ ತುಂಬಿಕೊಂಡಿರುವ ಚಿತ್ತವುಳ್ಳವನು; ಜ್ಞಾನ ದೂರಂ= ಬ್ರಹ್ಮಜ್ಞಾನದಿಂದ ಬಹುದೂರದೂರ ಇರುವವನು; ಪರಹಿತರಹಿತಂ= ಪರರಹಿ ತವೆಂಬುದೇ ಯಿಲ್ಲದವನು. ಭಕ್ತಿವಿಶ್ವಾಸಹೀನಂ= ಭಕ್ತಿವಿಶ್ವಾಸವಿಲ್ಲದವನು. ಸ್ತುತಿ ಲೋಲಂ =ಆತ್ಮಸ್ತುತಿಗೆ ಬಾಯಿ ತೆರೆದುಕೊಂಡಿರುವವನು; ರಾಗಶೀಲಂ= ಅನುರಾಗ ಆಸಕ್ತಿಯುಳ್ಳವನು; ವಿರಕ್ತಿಯಿಲ್ಲದವನು; ಸುಕೃತ= ಒಳ್ಳೆಯ ಕೆಲಸಗಳಿಂದ; ವಿಮು ಖನ್= ಮುಖದಿರುಹಿದವನು; ಆನಂದಹೀನಂ= ಆನಂದವಿಲ್ಲದವನು; ವಿಮಾನಂ= ಆಳತೆಯಿಲ್ಲದ ಸಂಯಮರಹಿತನು; ನತ = ಶರಣಾಗತರಿಗೆ; ಕಲ್ಪೋರ್ವೀಜ= ಬೇಡಿರು ದನ್ನೆಲ್ಲ ಕೊಡುವ ಕಲ್ಪವೃಕ್ಷದಂಥ ಪಂಪಾಪುರದ ಒಡೆಯನಾದ ವಿರೂಪಾಕ್ಷ ಸ್ವಾಮಿಯೇ ನನ್ನನ್ನು ರಕ್ಷಿಸು.

ಭಾವಾರ್ಥ: ನಾನು ಯಾವಾಗಲೂ ನಿಂದೆಯ ಗಣಿಯಿದ್ದಂತೆ, ನಿಷ್ಠುರ ಸ್ವಭಾವದವನು, ಅತಿ ಕೃಪಣನು. ಸಜ್ಜನರದ್ವೇಷಿ, ಕೆಟ್ಟ ಯೋಚ

ನೆಗಳನ್ನೇ ಚಿಂತಿಸುವ ಚಿತ್ತದವನು. ಬ್ರಹ್ಮಜ್ಞಾನಕ್ಕೆ ಬಹುದೂರ ಇರುವವನು. ಪರರಹಿತವನ್ನು ಎಣಿಸದವನು. ಭಕ್ತಿವಿಶ್ವಾಸಗಳಿಲ್ಲದವನು. ಆತ್ಮಸ್ತುತಿಯಲ್ಲಿ ಆಸಕ್ತನಾದವನು. ಅನುರಾಗದಲ್ಲಿ ತೊಡಗಿದವನು, ಸತ್ಕಾರ್ಯಗಳಿಗೆ ಮುಖವಿಡದವನು. ಆನಂದವಿಲ್ಲದವನು. ಬಾಳಿನಲ್ಲಿ ಸಂಯಮವಿಲ್ಲದವನು. ಇಂಥವನನ್ನು, ಬೇಡಿದ್ದನ್ನು ನೀಡುವ ಕಲ್ಪವೃಕ್ಷದಂತಿರುವ ಪಂಪಾಪತಿ ವಿರೂಪಾಕ್ಷ ಸ್ವಾಮಿಯೇ ನನ್ನನ್ನು ರಕ್ಷಿಸು.

## ವೃತ್ತ: ೫೦

ಅತಿದೀನಂ ಧೂರ್ತಮಾನಂ ಪರಧನವನಿತಾಧೀನನಾನಂದಹೀನಂ
ಮತಿಶೂನ್ಯಂ ಡಂಭಮಾನ್ಯಂ ವಿಷಯವಿಸರದನ್ಯಂ ವಿಮೂಢರ್ಗನನ್ಯಂ
ನುತದೂರಂ ದುಃಖಸಾರಂ ಸುಜನಜನಘನಕ್ರೂರನೀ ಭೂಮಿಭಾರಂ
ಸತತಂ ಕೈಕೊಂಡು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೫೦

ಅರ್ಥ : ಅತಿದೀನಂ= ಅತಿದೀನನು; ಧೂರ್ತಮಾನಂ= ದುರುಳನು; ಪರಧನ= ಪರರ ಹಣ; ವನಿತಾ= ಹೆಣ್ಣಿನ; ಅಧೀನನ್= ಅಧೀನನಾದವನು; ಆನಂದಹೀನ= ಆನಂದವಿಲ್ಲದವನು; ಮತಿಶೂನ್ಯಂ= ಬುದ್ಧಿಯಿಲ್ಲದವನು; ಡಂಭಮಾನ್ಯಂ= ಅಹಂಕಾರಿ; ವಿಷಯ= ಪ್ರಾಪಂಚಿಕ ವಿಷಯಗಳಲ್ಲಿ; ವಿಸರದನ್ಯಂ= ಆಸಕ್ತಿವಹಿಸಿದವನು; ವಿಮೂಢರ್ಗೆ= ಮೂರ್ಖರಿಗೆ; ಅನನ್ಯಂ= ಅತ್ಯಂತ ಸಮೀಪದವನು; (ವಿಕಟವರ್ತಿ) ನುತದೂರಂ= ಒಳ್ಳೆಯ ಹೆಸರಿಗೆ ದೂರವಾದವನು; ದುಃಖಸಾರಂ= ದುಃಖದಸಾರವನ್ನುಂಡವನು; ಸುಜನ= ಒಳ್ಳೆಯಜನರ; ಘನಕ್ರೂರನ್= ಘನವಾದ ಕ್ರೂರನು; ಈ ಭೂಮಿಭಾರಂ= ಭೂಮಿಗೆ ಭಾರವಾದವನು; ಸತತಂ= ಯಾವಾಗಲೂ ಕೈಕೊಂಡು ಉದ್ಧರಿಸಿ ಪಂಪಾಪುರದ ಒಡೆಯನೇ ಎನ್ನನ್ನು ರಕ್ಷಿಸು.

ಭಾವಾರ್ಥ : ಅತಿ ದೀನನೂ ದುರುಳನೂ ಪರಧನಪರಸ್ತ್ರೀಗೆ ಆಸೆ ಮಾಡುವವನೂ ಆನಂದರಹಿತನೂ ಬುದ್ಧಿ ಹೀನನೂ ದುರಹಂಕಾರಿಯೂ ವಿಷಯಾಸಕ್ತನೂ, ಮೂರ್ಖರಗೆಳೆಯನೂ, ದುಃಖಿಯೂ, ಒಳ್ಳೆಯ ಜನರಿಗೆ ಹಿಂಸೆಯನ್ನು ಕೊಡುವವನೂ ಭೂಮಿಗೆ ಭಾರವಾದವನೂ ಆದ ನನ್ನನ್ನು

ಯಾವಾಗಲೂ ಉದ್ಧಾರಮಾಡಿ ರಕ್ಷಿಸು ಪಂಪಾಪತಿ ವಿರೂಪಾಕ್ಷ ಸ್ವಾಮಿಯೇ.

### ವೃತ್ತ : ೫೧

ಖರರೂಪಂ ಪಾಪದೀಪಂ ಕುಜನಜನ ಕಲಾಪಂ ಸದಾರಬ್ಧ ಕೋಪಂ
ಸ್ಥಿರಭಂಗಂ ದುಷ್ಪ್ರಸಂಗಂ ವಿಷಯಕುಸುಮಭೃಂಗಂ ದುರಾಶಾಂತರಂಗಂ
ಪರಧೂರ್ತಂ ದಂಭಕಾರ್ತಂ ಖಳಜನಸಲಿಲಾವರ್ತನಜ್ಞಾನಗರ್ತಂ
ಕರುಣೀ ಕೈಕೊಂಡು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೫೧

ಅರ್ಥ : ಖರ= ಕ್ರೌರ್ಯ; ರೂಪಂ= ಮೂರ್ತಿವೆತ್ತ ಆಕಾರ; ಪಾಪವೆಂಬ ದೀಪ; ಕುಜನ=ಕೆಟ್ಟ; ಜನ; ಕಲಾಪಂ=ಒಡನಾಡಿಯು; ಸದಾ=ಯಾವಾಗಲೂ; ಆರಬ್ಧ =ಪ್ರಾರಂಭಿಸಲ್ಪಟ್ಟ; ಕೋಪಂ=ಕೋಪವುಳ್ಳವನು; ಸ್ಥಿರಭಂಗಂ=ಮನಸ್ಸಿನ ಸ್ಥಿರತೆಯ ನ್ನು ಕಳೆದುಕೊಂಡವನು; ದುಷ್ಪ್ರಸಂಗಂ =ಕೆಟ್ಟ ವಿಚಾರಗಳಲ್ಲಿ ತೊಡಗಿರುವವನು. ವಿಷಯವೆಂಬ ಕುಸುಮ= ಹೂವಿಗೆ ಎರಗುವ ಭೃಂಗಂ= ಜೇನುಹುಳುವು; ದುರಾಶಾಂತ ರಂಗಂ= ದುರಾಸೆಯನ್ನು ತುಂಬಿಟ್ಟುಕೊಂಡ ಅಂತರಂಗವುಳ್ಳವನು; ಪರಧೂರ್ತಂ= ದುರುಳನೂ; ದಂಭಕಾರ್ತಂ= ಅಹಂಕಾರಿಯೂ; ಖಳಜನಸಲಿಲಾವರ್ತನಜ್ಞಾನಗರ್ತಂ =ಕೆಟ್ಟಜನರ ಸಂಗದಲ್ಲಿಯೇ ತಿರುಗಣಿಮಡುವಿನಲ್ಲಿ ಗರಗರನೆ ತಿರುಗುವವನು ಕರುಣೀ = ಕಾರುಣ್ಯಮಯಿಯಾದ ಪಂಪಾಪತಿ ವಿರೂಪಾಕ್ಷಸ್ವಾಮಿಯೇ ನನ್ನನ್ನು ರಕ್ಷಿಸು.

ಭಾವಾರ್ಥ : ಕ್ರೌರ್ಯವೇ ಮೈವೆತ್ತುಬಂದವನೂ; ಪಾಪದ ದೀಪ ವೆಂಬಂತೆ ಇರುವವನೂ, ದುರ್ಜನರ ಒಡನಾಡಿಯೂ ಸದಾ ಕೋಪಿಷ್ಠನೂ, ಸ್ಥಿರಮನಸ್ಸಿಲ್ಲದವನೂ, ದುರ್ವಿಚಾರಗಳಲ್ಲೇ ತೊಡಗಿರುವವನೂ, ವಿಷಯ ವೆಂಬ ಹೂವಿಗೆ ಎರಗುವ ಜೇನು ಹುಳುವಿನಂತೆಯೂ, ದುರಾಸೆಯನ್ನು ತುಂಬಿಟ್ಟುಕೊಂಡ ಅಂತರಂಗವುಳ್ಳವನೂ, ದುರುಳನೂ, ಅಹಂಕಾರಿಯೂ ದುಷ್ಟಜನರೊಡನೆ ತಿರುಗಣಿಮಡುವಿನಲ್ಲಿ ಸಿಕ್ಕಿಕೊಂಡು ಅಜ್ಞಾನವೆಂಬ ಆಳ ವಾದ ತಗ್ಗಿನಲ್ಲಿ ಬಿದ್ದಿರುವವನೂ ಆದ ನನ್ನನ್ನು ಪಂಪಾಪತಿ ವಿರೂಪಾಕ್ಷ ಸ್ವಾಮಿಯು ರಕ್ಷಿಸಲಿ.

## ವೃತ್ತ: ೫೨

ಘನವೆನ್ನೊಳ್ ಮಾಣದೀ ಕಾಮದ ವಿಕಳತೆಯೀ ಕ್ರೋಧವೀ ಲೋಭವೀ ದು-
ರ್ಮನನವೀ ದುಶ್ಚಿಂತೆಯೀ ದುರ್ಮದದ ಮಮತೆಯೀ ಮೋಹವೀಯಾಸೆಯೀ ದು-
ರ್ಜನಸಂಗಪ್ರೇಮವೀ ಮತ್ಸರದ ಮಸಕವೀ ದುಃಖಸಂಸ್ತೋಮಮಂ ಛೇ-
ದನೆಯಂ ಮಾಡುತ್ತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೫೨

**ಅರ್ಥ:** ಎನ್ನೊಳ್= ನನ್ನಲ್ಲಿ; ಮಾಣದ= ತೊಲಗದ; ಈ ಘನ= ಘನವಾದ; ಕಾಮದವಿಕಳತೆ= ಕಾಮದಿಂದ ಉಂಟಾದ ಮತಿವಿಕಲತೆ; ಈ ಕ್ರೋಧವು ಈ ಲೋಭವು ಈ ದುರ್ಮದವು, ಈ ದುಷ್ಟಮನಸ್ಸು; ಈ ದುಶ್ಚಿಂತೆ=ಕೆಟ್ಟಯೋಚನೆಗಳು; ಹವ್ಯಾಸಗಳು= ಜೂಜು ಹಾದರ ಸುರಾಪಾನ ಮುಂತಾದ ದುಷ್ಟಚಿಂತೆಗಳು; ಈ ದುರ್ಮದದ ಮಮತೆ= ಕೆಟ್ಟಮದದ ಪ್ರೇಮ; ಮೋಹ; ಈಯಾಸೆ= ಈ ಆಸೆಯು; ದುರ್ಜನ ಸಂಗಪ್ರೇಮವು; ಈ ಮತ್ಸರದ= ಹೊಟ್ಟೆಕಿಚ್ಚಿನ; ಮಸಕದ= ಪ್ರಾಬಲ್ಯದ; ಈ ದುಃಖದ ಸಂಸ್ತೋಮಮಂ= ಸಮೂಹವನ್ನು ಛೇದಿಸಿ= ಹರಿದುಹಾಕಿ ಪಂಪಾಪುರದ ಒಡೆಯನಾದ ವಿರೂಪಾಕ್ಷಸ್ವಾಮಿಯು ನನ್ನನ್ನು ರಕ್ಷಿಸಲಿ.

**ಭಾವಾರ್ಥ:** ನನ್ನಿಂದ ತೊಲಗದ ಈ ಘನವಾದ ಕಾಮದ ಮತಿ ವಿಕಲತೆಯು, ಈ ಕ್ರೋಧದ, ಲೋಭದ, ಮೋಹದ, ಮದದ, ಮತ್ಸರದ ದುರ್ಜನ ಸಂಗಿಯ, ಸಜ್ಜನದ್ವೇಷಿಯ ಅನಂತ ದುಃಖಪರಂಪರೆಗಳನ್ನು ಹರಿ ದೊಗೆದು ನನ್ನನ್ನು ಕಾಪಾಡಿ ರಕ್ಷಿಸು ಹಂಪೆಯೊಡೆಯ ವಿರೂಪಾಕ್ಷನೇ.

**ಟಿಪ್ಪಣಿ:** ಅರಿಷಡ್ವರ್ಗಗಳ ದೆಸೆಯಿಂದ ಜೀವನಿಗೆ ಉಂಟಾಗುವ ದುಃಖದಿಂದ ನನ್ನನ್ನು ಪಾರುಮಾಡಿ ಕಾಪಾಡು ತಂದೇ ಎಂದು ಇಲ್ಲಿ ಕವಿ ಹೇಳುತ್ತಾನೆ. 2 ರಿಂದ 7 ನೆಯ ವೃತ್ತದವರೆಗೆ ಅರಿಷಡ್ವರ್ಗಗಳ ಲಕ್ಷಣ ವನ್ನು ಹೇಳಿದ್ದಾನೆ. ಇಲ್ಲಿ ಆ ಶತ್ರುಗಳಿಂದ ಉಂಟಾಗುವ ದುಃಖವನ್ನು ಮಾಣಿಸೆಂದು ಮೊರೆಯಿಡುತ್ತಾನೆ.

## ವೃತ್ತ: ೫೩

ಅಲೆ ಮಾಯಾಮೋಹವಾಚ್ಛಾದಿಸೆ ನೆಱೆಧೃತಿಗೆಟ್ಟಿಂ ವೃಥಾ ಧಾತುಗೆಟ್ಟಿಂ
ಪೊಲಗೆಟ್ಟಿಂ ಮುಂದುಗೆಟ್ಟಿಂ ನೆನೆಯದೆ ಮತಿಗೆಟ್ಟಿಂ ಕರಂ ಬುದ್ಧಿಗೆಟ್ಟಿಂ
ನೆಲೆಗೆಟ್ಟಿಂ ನೀತಿಗೆಟ್ಟಿಂ ಮಱೆದು ಮಿಗೆ ಮನಂಗೆಟ್ಟೆ ನಾನುರ್ಬುಗೆಟ್ಟಿಂ
ತಲೆಗೆಟ್ಟಿಂ ತಂದೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೫೩

ಅರ್ಥ : ಮಾಯಾಮೋಹ= ಮಾಯೆಯೆಂಬ ಮೋಹವು; ಅಲೆ= ಚೆನ್ನಾಗಿ; ಆಚ್ಛಾದಿಸೆ= ಆವರಿಸಿ ಕೊಳ್ಳಲಾಗಿ ನೆಱೆ= ಹೆಚ್ಚಾಗಿ; ಧೃತಿಗೆಟ್ಟಿಂ= ಧೃಢತೆಯು ತಪ್ಪಿ ಹೋಯಿತು; ವೃಥಾ= ವ್ಯರ್ಥವಾಗಿ; ಧಾತುಗೆಟ್ಟಿಂ= ಶಕ್ತಿಗುಂದಿದೆ; ಪೊಲಗೆಟ್ಟಿಂ =ಸ್ಥಾನಭ್ರಷ್ಟನಾದೆ; ಮುಂದುಗೆಟ್ಟಿಂ=ಭವಿಷ್ಯತ್ತನು ಹಾಳುಮಾಡಿಕೊಂಡೆ; ಮತಿಗೆಟ್ಟೆ; ಕರಂ =ಚೆನ್ನಾಗಿ ಬುದ್ಧಿಗೆಟ್ಟೆ; ನೆಲೆಗೆಟ್ಟೆ =ಸ್ಥಾನಭ್ರಷ್ಟನಾದೆ ನೀತಿಗೆಟ್ಟೆ; ಮಱೆದು= ನಿಮ್ಮನ್ನು ಮರೆತು; ಮಿಗೆ= ಹೆಚ್ಚಾಗಿ; ಮನಂಗೆಟ್ಟೆ =ಮನಸ್ಸೇ ಕೆಟ್ಟುಹೋದವನಾದೆ ನಾನು= ನಾನು; ಉರ್ಬುಗೆಟ್ಟಿಂ= ಸುಖಬಾಹಿರನಾದೆ, ತಲೆಗೆಟ್ಟಿಂ=ತಲೆಯೇ ಕೆಟ್ಟು ಹೋಯಿತು, ಅಂಥ ನನ್ನನ್ನು ಪಂಪಾಪತಿಯೇ ರಕ್ಷಿಸು.

ಭಾವಾರ್ಥ : ಮಾಯೆಯೆಂಬ ಮೋಹವು ಆವರಿಸಿಕೊಳ್ಳಲಾಗಿ ಮನಸ್ಸಿನ ಧೃಢತೆಯು ತಪ್ಪಿಹೋಯಿತು; ಶಕ್ತಿಗುಂದಿತು; ಸ್ಥಾನಭ್ರಷ್ಟನಾದೆ; ಭವಿಷ್ಯವನ್ನು ಹಾಳುಮಾಡಿಕೊಂಡೆ. ನಿಮ್ಮನ್ನು ನೆನೆಯದೆ ಮತಿಗೆಟ್ಟೆ, ಬುದ್ಧಿಗೆಟ್ಟೆ, ನೆಲೆಗೆಟ್ಟೆ, ನೀತಿಗೆಟ್ಟೆ ನಿಮ್ಮನ್ನು ಮರೆತು ಮನಸ್ಸೇ ಕೆಟ್ಟುಹೋಯಿತು. ಸುಖಬಾಹಿರನಾದೆ. ತಾಳ್ಮೆಯೇ ಕೆಟ್ಟುಹೋಯಿತು. ನನ್ನನ್ನು ರಕ್ಷಿಸಿ ಕಾಪಾಡು ತಂದೆ ಶ್ರೀ ವಿರೂಪಾಕ್ಷಸ್ವಾಮಿ.

## ವೃತ್ತ : ೫೪

ನೆನೆವೆಂ ಸ್ವಪ್ನೋಪಮಸ್ಮಾರಕುವಿಷಯದ ಸಂಯೋಗಮಂ ಭೋಗಮಂ ಕೇ
ಮ್ಮನೆ ನಿಮ್ಮೀ ಭಕ್ತಿಯೊಂದಂ ನೆನೆಯೆನೊಸೆದು ಸತ್ಯತ್ವ-ನಿತ್ಯತ್ವಮಂ ಯಾ
ತನೆಗೊಂಡರ್ಥಾರ್ಥದಿಂದನ್ಯರನನುದಿನಮೋರಂತೆ ಬೋಧಿರ್ಪ ದುರ್ಬೋ-
ಧನನಯ್ಯೋ ನೋಡಿ ಪಂಪಾಪುರವರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೫೪

ಅರ್ಥ: ಸ್ವಪ್ನೋಪಮ= ಸ್ವಪ್ನಕ್ಕೆ ಹೋಲಿಸಬಹುದಾದ; ಕುವಿಷಯದ= ಕೆಟ್ಟ ವಿಷಯವಾಸನೆಗಳ; ಸಂಯೋಗವಂ= ಕೂಡಿದ್ದುದನ್ನು; ಭೋಗವಂ= ಭೋಗ ಗಳನ್ನು; ಸ್ಮರ= ನೆನಪುಮಾಡಿಕೊಂಡು; ನೆನೆವೆಂ= ನೆನೆಸುವೆ; ಒಸೆದು= ಪ್ರೀತಿಯಿಂ ದ; ಸತ್ಯತ್ವ ನಿತ್ಯತ್ವಮಂ= ಸತ್ಯವೂ ಶಾಶ್ವತವೂ ಆದ ನಿಮ್ಮ ಈ ಭಕ್ತಿಯೊಂದಂ= ಭಕ್ತಿ ಯೊಂದನ್ನು; ಕಿಮ್ಮನೆ= ಸುಮ್ಮನೆ ನೆನೆಯೆ= ನೆನೆಸುವುದಿಲ್ಲ. ಯಾತನೆಗೊಂಡ= ದುಃಖಕ್ಕೆ ಒಳಗಾದ; ಅರ್ಥ= ಧನದ; ಅರ್ಥಿನಿಂದ= ದೆಸೆಯಿಂದ; ಅನ್ಯರ ಅನುದಿನ= ಇತರರನ್ನು ಅನುದಿನವೂ; ಓರಂತೆ = ಚೆನ್ನಾಗಿ; ಬೋಧಿಸೆ= ಬೋಧಿಸ ಲ್ಪಟ್ಟಿರುವ ದುರ್ಬೋಧನನ= ಕೆಟ್ಟ ಬೋಧನೆಗೆ ಒಳಗಾದ ನನ್ನನ್ನು ಅಯ್ಯೋ ನೋಡಿ ಪಂಪಾಪುರದರಸ ರಕ್ಷಿಸುವುದು.

ಭಾವಾರ್ಥ: ಸ್ವಪ್ನದಂತೆ ಅಚಿರವಾದ ಕೆಟ್ಟ ವಿಷಯವಾಸನೆಗಳನ್ನು ಅನುಭೋಗಿಸಿದ ಹಿಂದಿನ ಅನುಭವಗಳನ್ನು ನೆನೆಯುತ್ತಿರುವೆನೇ ಹೊರತು, ಸತ್ಯವೂ ಶಾಶ್ವತವೂ ಆದ ನಿಮ್ಮ ಭಕ್ತಿಯನ್ನು ಮಾತ್ರ ನೆನೆಯುತ್ತಿಲ್ಲ. ಧನದ ದೆಸೆಯಿಂದ ದುಃಖಕ್ಕೆ ಈಡಾದ ಕಾರಣದಿಂದ ಇತರರ ಕೆಟ್ಟ ಹೇಳಿಕೆ ಮಾತುಗಳನ್ನು ಕೇಳಿದ ನನ್ನನ್ನು ಕರುಣೆಯಿಂದ ನೋಡಿ ಕಾಪಾಡು ಸ್ವಾಮಿಯೇ.

ಟಿಪ್ಪಣಿ: ಸಾಧಕ ಮುಂದುವರಿದಂತೆಲ್ಲ ತನ್ನ ಯೌವನದಲ್ಲಿ ಅನುಭ ವಿಸಿ ಬಿಟ್ಟುಬಂದ ವಿಷಯವಾಸನೆ, ಭೋಗ, ಮುಂತಾದುವುಗಳನ್ನು ಆಗಾಗ ನೆನೆಸಿಕೊಳ್ಳುವುದುಂಟು. ಹೆಂಡಕುಡಿಯುವ ದುರಭ್ಯಾಸವಿದ್ದವನು, ಅದ ನ್ನು ಬಿಟ್ಟಮೇಲೆ ಕೆಲವುಕಾಲ ಕುಡಿಯುವ ಸಮಯವಾದೊಡನೆಯೇ, ಸುರೆ ಯನ್ನು ನೆನೆಸಿಕೊಂಡು ಬಾಯಿಚಪ್ಪರಿಸಿದಂತೆ ಲಲನಾಸಂಭೋಗದ ರುಚಿ ನೋಡಿದ ಈ ಜೀವ ಆಗಾಗ ಆ 'ಸುಖ'ವನ್ನು ನೆನೆದು ಬಾಯಿ ಚಪ್ಪರಿಸುವು ದುಂಟು. ಹೀಗೆ ಬಿಟ್ಟು ಬಂದ ಭೋಗವನ್ನು ನೆನೆಯುವುದು ಎಲ್ಲ ಸಾಧಕರ ಜೀವನದಲ್ಲೂ ಬರುವಂಥದೇ. ಭಕ್ತಿಭಂಡಾರಿ ಬಸವಣ್ಣನವರೂ ಕೂಡ:

"ಬೆಲ್ಲವತಿಂದ ಕೋಡಗನಂತೆ ಸಿಹಿಯ ನೆನೆಯದಿರಾ ಮನವೇ,
ಕಬ್ಬುತಿಂದ ನರಿಯಂತೆ ಹಿಂದಕ್ಕೆಳಸದಿರಾ, ಮನವೇ
ಗಗನವನಡರಿದ ಕಾಗೆಯಂತೆ ದೆಸೆದೆಸೆಗೆ ಹಂಬಲಿಸದಿ ಮನವೇ
ಕೂಡಲಸಂಗನ ಶರಣರ ಕಂಡು ಲಿಂಗವೆಂದೇ ನಂಬು, ಮನವೇ"

ಎಂದು ತಮ್ಮ ಹೃದಯದ ತಳಮಳವನ್ನು ತೋಡಿಕೊಂಡಿದ್ದಾರೆ. ಆದರೆ ಈ ಮನ ಅಷ್ಟುಬೇಗನೆ ಪರಿಶುದ್ಧವಾಗುವುದಿಲ್ಲ. 'ಕಂಬಳಿಯಲ್ಲಿ ಕಣಕವ ನಾದಿದಂತೆ, ಕಾಣಿರೇ, ಎನ್ನ ಮನ!' ಎಂದಿದ್ದಾರೆ ಬಸವಣ್ಣನವರು. ಕಂಬಳಿಯಲ್ಲಿ ಕಣಕವನ್ನು ನಾದಿದರೆ ಅದು ಶುದ್ಧವಾಗುವ ಮಾತು ಎಲ್ಲಿಂದ ಬಂತು? ಕಂಬಳಿಯ ಉಣ್ಣೆಯ ಗುಂಜು ಮತ್ತೆಮತ್ತೆ ಹತ್ತಿ ಕಣಕನಾದಿದಂತೆಲ್ಲ ಕೆಟ್ಟುಹೋಗುತ್ತದೆ. ಬಸವಣ್ಣನವರಂಥ ಮಹಾ ವಿಭೂತಿಗಳೇ ಅಂತು ನೊರೆಯಿಟ್ಟಿರುವಾಗ ಸಾಮಾನ್ಯರ ಮಾತೇನು? ಆದರೆ, ಈ ಬಗೆಯ ವ್ಯಾಕುಲ ಮೂಡಬೇಕಾದರೆ ಸಾಧಕ, ತನ್ನ ಗುರಿಯ ಸಾಧನೆಯಲ್ಲಿ ಕೆಲವುಮಟ್ಟಿಗಾದರೂ ಮುಂದುವರಿದಿದ್ದಾನೆಂದು ಖಂಡಿತ ಹೇಳಬಹುದು.

### ವೃತ್ತ : ೫೫

ಏಕೆನ್ನಂ ನೋಡದಯ್ಯೋ ಭವ ಭವ ಬವದೊಳ್ ತಂದೆ ಚಂದ್ರಾವತಂಸಾ
ಏಕೆನ್ನಂ ಮಾಯೆಯಿಂದಂ ಶಿವ ಶಿವ ಶಿವ ಬೆಳ್ಮಾಡುತಿರ್ದಪ್ಪೆ ಈಶಾ
ಏಕೆನ್ನಂ ಕಾಲಸಿಂದಂ ಹರ ಹರ ಹರ ನೀಂ ಕಾಡುತಿರ್ದಪ್ಪೆ ದೇವಾ
ಲೋಕೈಕಾರಾಧ್ಯ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೫೫

ಅರ್ಥ : ಏಕೆ+ಎನ್ನಂ=ನನ್ನನ್ನು ಯಾಕೆ; ಭವಭವಭವದೊಳ್ =ಅನೇಕಾನೇಕ ಜನ್ಮಗಳಲ್ಲಿಯೂ ನೋಡದ= ನೋಡದೆ ಇದ್ದೀಯೆ, ಅಯ್ಯೋ; ತಂದೆ; ಚಂದ್ರಾವತಂಸಾ= ಚಂದ್ರನನ್ನು ಧರಿಸಿದವನೇ; ಬೆಳ್ಮಾಡುತಿರ್ದಪ್ಪೆ= ಬೆಪ್ಪುಮಾಡುತ್ತಿದ್ದೀಯೆ; ಕಾಲಿವಿಂದಂ= ಮೃತ್ಯುವಿನಿಂದ; ಕಾಡುತಿರ್ದಪೆ =ಕಾಡುತ್ತಿದ್ದೀಯೆ; ಲೋಕೈಕಾರಾಧ್ಯ= ಲೋಕಕ್ಕೆಲ್ಲ ಆರಾಧ್ಯದೇವತೆಯಾದ ಪಂಪಾಪುರದ ಅರಸನೇ ನನ್ನನ್ನು ರಕ್ಷಿಸು.

ಭಾವಾರ್ಥ: ಅಯ್ಯೋ ಶಿವನೇ, ತಂದೆ, ಚಂದ್ರಚೂಡನೇ ನನ್ನನ್ನು ಜನ್ಮಜನ್ಮಾಂತರಗಳಲ್ಲೂ ಯಾತಕ್ಕೆ ಕೃಪಾದೃಷ್ಟಿಯಿಂದ ನೋಡಲೊಲ್ಲೆ? ನನ್ನನ್ನು ಮಾಯೆಯಿಂದ ಸುತ್ತಿ ಏಕೆ ಬೆಪ್ಪು ಹಿಡಿಸುತ್ತೀ? ಹರನೇ ನನ್ನನ್ನು ಮೃತ್ಯುವಿನಿಂದ ಯಾಕೆ ಕಾಡುತ್ತೀ? ಲೋಕಕ್ಕೆಲ್ಲ ಆರಾಧ್ಯಮೂರ್ತಿಯಾದ ಪಂಪಾಪತಿ ವಿರೂಪಾಕ್ಷ ಸ್ವಾಮಿಯೇ ನನ್ನನ್ನು ರಕ್ಷಿಸಿ ಕಾಪಾಡು.

ಟಿಪ್ಪಣಿ: ಹಾರೈಕೆ, ವ್ಯಾಕುಲತೆ, ಕಾತರ ಪ್ರಬಲವಾಗದೆ ಹೊರತು ಭಗವತ್ ಸಾಕ್ಷಾತ್ಕರ ಸಾಧ್ಯವಿಲ್ಲ. "ಹೆಂಡತಿ ಮಕ್ಕಳಿಗಾಗಿ ಕೊಡಗಟ್ಟಲೆ ಕಣ್ಣೀರು ಸುರಿಸುತ್ತಾರೆ. ಆದರೆ ಭಗವಂತನಿಗಾಗಿ ಯಾರು ಅಳುತ್ತಾರೆ? ಹೃದಯಾಂತರಾಳದಿಂದ ಅತ್ತರೆ ದೇವರು ನಿಶ್ಚಯವಾಗಿಯೂ ಕಾಣುವನು" ಎಂದು ಶ್ರೀ ರಾಮಕೃಷ್ಣ ಪರಮಹಂಸರು ಹೇಳುತ್ತಿದ್ದರು. ಈ ಮಾತು ಸತ್ಯಸ್ಯಸತ್ಯ. ಹೃದಯ ವ್ಯಾಕುಲತೆ ನಿರ್ಭರವಾದಾಗಲೇ ಸಾಧಕನಿಗೆ ಇಂಥ ಸಂಕಟ ಹುಟ್ಟುವುದು. ಕವಿ ಇಲ್ಲಿ ವ್ಯಾಕುಲತೆಯಿಂದ ಕರೆಯುತ್ತಾನೆ.

## ವೃತ್ತ : ೫೬

ಭವವೇಕಾನೇಕೆ ಸತ್ವಾದಿಗುಣದ ಪುದುವಾಳೇಕದಾನೇಕೆ ಕಾಮೋ-
ತ್ಸವವೇಕಾನೇಕೆ ತಾಪತ್ರಿತಯದ ಪೊಡೆಗಿರ್ಚೇಕದಾನೇಕೆ ಕೋಪೋ-
ದ್ಭವವೇಕಾನೇಕೆ ಕರ್ಮದ್ವಯದ ಕಡುದೊಡಂಕೇಕದಾನೇಕೆ ದೇವಾ
ಭವಕರ್ಮಧ್ವಂಸಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೫೬

ಅರ್ಥ: ಭವವೇಕೆ= ಈ ಜನ್ಮವೇಕೆ ? ಆನೇಕೆ =ನಾನು ಯಾತಕ್ಕೆ; ಸತ್ವಾದಿಗುಣದ= ರಜೋತಮೋ ಸತ್ವಗಳೆಂಬ ಗುಣಗಳೊಡನೆ; ಪುದುವಾಳ್= ಕೂಡಿಬಾಳುವ ಈ ಪೀಕಲಾಟವೇಕೆ; ಅದು+ಆನ್+ಏಕೆ= ಅದಾನೇಕೆ= ಅದೇತಕ್ಕಾಗಿ ನಾನು ಜೀವಿಸಿದ್ದೇನೆ. ಕಾಮೋತ್ಸವವೇಕೆ= ಕಾಮದ ಅಟ್ಟಹಾಸವೇಕೆ? ಆನೇಕೆ; ತಾಪತ್ರಿತಯದ = ತಾಪತ್ರಯದ; ಪೊಡೆ= ಹೊಡೆಯುವ ಕಿರ್ಚೇಕೆ= ಬೆಂಕಿಯನ್ನೇಕೆ ಇಟ್ಟೆ. ಆನೇಕೆ; ಕೋಪೋದ್ಭವವೇಕೆ= ಕೋಪವನ್ನೇಕೆ ಹುಟ್ಟಿಸುತ್ತೀ; ಆನ್+ಏಕೆ ಕರ್ಮದ್ವಯದ= ಸತ್ಕರ್ಮ ದುಷ್ಕರ್ಮ ಎಂಬ ಕರ್ಮಗಳ ದ್ವಂದದ ಕಡು+ತೊಡಕು =ಕಡುತೊಡಕು = ಭದ್ರವಾದ ತೊಡಕು ಏತಕ್ಕೆ ? ಭವಕರ್ಮಧ್ವಂಸಿ= ಜನನವೆಂಬ ಕರ್ಮಗಳನ್ನು ಕಟ್ಟಿ ಪುಡಿಮಾಡಬಲ್ಲಂಥ ಪಂಪಾಪತಿ ವಿರೂಪಾಕ್ಷ ಸ್ವಾಮಿಯೇ ನನ್ನನ್ನು ರಕ್ಷಿಸು.

ಭಾವಾರ್ಥ: ಭವಬಂಧನಗಳಿಂದ ಕಟ್ಟಿಹಾಕಿ, ನನ್ನನ್ನೇಕೆ ಹುಟ್ಟಿಸಿದೆ? ತ್ರಿಗುಣಗಳಿಂದ ಕೂಡಿ ಬಾಳಬೇಕಾದಂಥ ಪ್ರಸಂಗದಲ್ಲಿ ನನ್ನನ್ನೇಕೆ ಇಟ್ಟೆ? ಕಾಮದ ಅಟ್ಟಹಾಸವನ್ನಿಟ್ಟು ನನ್ನನ್ನೇಕೆ ಸೃಷ್ಟಿಸಿದೆ? ತಾಪತ್ರ

ಯುಗಳೆಂಬ ಹೊಡೆದೊಯ್ವ ಕಿಚ್ಚಿನ ಮಧ್ಯದಲ್ಲಿ ಇರುವಂತೆ ನನ್ನನ್ನೇಕೆ ಮಾಡಿದೆ? ಕೋಪವನ್ನು ಹುಟ್ಟಿಸುವಂಥ ಸಂನ್ನಿವೇಶದಲ್ಲಿಟ್ಟು ನನನ್ನೇಕೆ ಇಲ್ಲಿಗೆ ತಂದೆ? ಸತ್ಕರ್ಮ ದುಷ್ಕರ್ಮಗಳೆಂಬ ತೊಡಕಿನಲ್ಲಿ ಸಿಕ್ಕಿಸಿ ನನ್ನನ್ನೇಕೆ ನಿರ್ಮಿಸಿದೆ? ದೇವಾ, ಭವವೆಂಬ ಕರ್ಮವನ್ನು ಕುಟ್ಟಿ ಪುಡಿಪುಡಿಮಾಡಲು ಶಕ್ತನಾದ ಪಂಪಾಪತಿ ವಿರೂಪಾಕ್ಷನಾದ ನೀನೇ ನನ್ನನ್ನು ರಕ್ಷಿಸು.

**ಟಿಪ್ಪಣಿ :** ಮಾನವಜನ್ಮವೇನೋ ದೊಡ್ಡದು. ನನ್ನನ್ನು ನೀನು ಸೃಷ್ಟಿಸಿದೆ, ಅದಕ್ಕೆ ನಾನು, ಆದರೆ ಈ ಉಪಕಾರದ ಜೊತೆಗೆ, ಇನ್ನನಿತೋ ಅಪಕಾರವನ್ನು ಮಾಡಿದ್ದೀಯೆ! ಒಂದುಕಡೆ ಮಾನವಜನ್ಮ ಲಭಿಸಿದ ಹಿಗ್ಗಾದರೆ, ಅವನ್ನು ವ್ಯರ್ಥಗೈಯಲು ಅನುವಾಗಿ ನಿಂತಿರುವ ತ್ರಿಗುಣಗಳು, ಕಾಮು, ತಾಪತ್ರಯ, ಕೋಪ ಕರ್ಮಬಂಧನ ಸುತ್ತಿಕೊಂಡಿವೆ.

ಯಾವುದು ಸತ್ಕರ್ಮ, ಯಾವುದು ದಷ್ಕರ್ಮ ಎಂಬುದನ್ನು ನಿಷ್ಕರ್ಷಿಸುವುದು ಕಷ್ಟದಕೆಲಸ ವೆಂಬುದನ್ನು ಗೀತೆಯಲ್ಲಿ ಶ್ರೀ ಕೃಷ್ಣನೇ ಹೇಳಿದ್ದಾನೆ - ಎಂದಮೇಲೆ ಈ ಹುಲುಮಾನವರ ಪಾಡೇನು? ಸತ್ಕರ್ಮ, ದುಷ್ಕರ್ಮ, ಸದಾಚಾರ, ದುರಾಚಾರ, ಜ್ಞಾನ, ಭಕ್ತಿ, ಕರ್ಮ, ಅಕರ್ಮ, ವಿಕರ್ಮ-ಮುಂತಾದವುಗಳ ವಿಚಾರದಲ್ಲಿ ತೊಡಗುವುದು ಕೇವಲ ವ್ಯರ್ಥ. ಪಂಡಿತರ ಬುದ್ಧಿಗೆ ಆ ಎಲ್ಲ ತರ್ಕದಿಂದ ತೃಪ್ತಿಯಾಗಬಹುದು. ಆದರೆ ಸಾಧಕನ ದೃಷ್ಟಿಯಿಂದ ಈ ಎಲ್ಲ ವಿಚಾರಗಳು ಕೇವಲ ತೌಡುಮೆದ್ದಂತೆ. ಅದರಿಂದ ರುಚಿಯೂ ಇಲ್ಲ; ಪುಷ್ಟಿಯೂ ಇಲ್ಲ; ಪ್ರಯೋಜನವಂತೂ ಮೊದಲೇ ಇಲ್ಲ. ಸಾಧಕನಿಗೆ ವ್ಯಾಕುಲತೆಯೊಂದಕ್ಕೇ ಪ್ರಾಮುಖ್ಯತೆ. ಜಪ, ತಪ, ಧ್ಯಾನ, ಜ್ಞಾನ, ಭಕ್ತಿ, ಕರ್ಮ, ಆಚಾರ, ವಿಚಾರವೆಲ್ಲ, ಗೌಣ ಭಗವತ್ ಸಾಕ್ಷಾತ್ಕಾರಕ್ಕೆ, ಸ್ವಸ್ವರೂಪ ದರ್ಶನಕ್ಕೆ ಬೇಕಾದುದು ಕೇವಲ, ಪರಿಶುದ್ಧ ವ್ಯಾಕುಲತೆಯೇ ಹೊರತು, ಸತ್ಕರ್ಮ ದುಷ್ಕರ್ಮದ ತಾರ್ಕಿಕ ವಿಚಾರವಲ್ಲ. ಭಗವಂತನಿಗಾಗಿ ಯಾರು ವ್ಯಾಕುಲತೆಯಿಂದ ಕಣ್ಣೀರು ಕರೆಯುತ್ತಾರೆಯೋ ಅವರಿಗೆ ಸತ್ಕರ್ಮ ದುಸ್ಕರ್ಮ, ಧರ್ಮ - ಅಧರ್ಮ ಮುಂತಾದ ದ್ವಂದ್ವರಾಜ್ಯದ ಧೂರ್ತಚೋರರ ವಿಚಾರವೇನೂ ಬೇಕಾಗಿಲ್ಲ. ಬೇಕಾದುದು ಕೇವಲ ವ್ಯಾಕುಲತೆ. ನೀರಿನಲ್ಲಿ ಮುಳುಗಿದವನು ಗಾಳಿಗಾಗಿ ಪರಿತಪಿಸಿದಂತೆ

ನೀರಿನಿಂದ ತೆಗೆದು ನೆಲಕ್ಕೆ ಬೀಸಾಡಿದ ಮೀನು ನೀರಿಗಾಗಿ ಒದ್ದಾಡುವಂತೆ, ಜೀವ ಅವನಿಗಾಗಿ ಚಡಪಡಿಸಿ ಒದ್ದಾಡಿದರೆ ಅವನು ದೊರೆಯುತ್ತಾನೆ. ಆ 'ಚಡಪಡಿಕೆ' (ವ್ಯಾಕುಲತೆ) ಹೇಗೆ ಹುಟ್ಟುತ್ತದೆ ? ಕರ್ಮ ಯೋಗದಿಂದ ಲೋ, ಭಕ್ತಿ ಯೋಗದಿಂದಲೋ, ಜ್ಞಾನಯೋಗದಿಂದಲೋ? ತಪಸ್ವಿಗೋ ? ಜ್ಞಾನಿಗೋ ? ಕರ್ಮಿಗೊ ? ಯೋಗಿಗೊ ?

ತಪಸ್ವಿಭ್ಯೋಽಧಿಕೋ ಯೋಗಿ ಜ್ಞಾನಿಭ್ಯೋಽಪೀ ಮತೋಽಧಿಕಃ ।
ಕರ್ಮಿಭ್ಯಶ್ಚಾಧಿಕೋ ಯೋಗೀ ತಸ್ಮಾದ್ಯೋಗೀ ಭವಾರ್ಜುನ ॥

ಗೀತಾ VI ಶ್ಲೋ॥ 46

ತಪಸ್ವಿಗಳಿಗಿಂತಲೂ, (ಕೇವಲ ಫಲಾಪೇಕ್ಷೆಯಿಂದ ತಪಸ್ಸು ಮಾಡುವವರಿಗಿಂತಲೂ) ಜ್ಞಾನಿಗಳಿಗಿಂತಲೂ (ಶಾಸ್ತ್ರಾರ್ಥವನ್ನು ತಿಳಿದುಕೊಂಡಿರುವವರಿಗಿಂತಲೂ) ಕರ್ಮಿಗಳಿಗಿಂತಲೂ (ಅಗ್ನಿ ಹೋತ್ರಾದಿ ಕರ್ಮಗಳನ್ನು ಮಾಡುವವರಿಗಿಂತಲೂ) ಯೋಗಿಯು ಶ್ರೇಷ್ಠನೆಂದು ನನ್ನ ಅಭಿಪ್ರಾಯ; ಆದುದರಿಂದ, ಅರ್ಜುನ, ಯೋಗಿಯಾಗು ಎಂದು ಶ್ರೀಕೃಷ್ಣ ಹೇಳುತ್ತಾನೆ. ಆದಕಾರಣ "ಯೋಗೀ ಭವಾರ್ಜುನ" ಎಂಬುದೇ ಶ್ರೀಕೃಷ್ಣನ ಸರ್ವಶ್ರೇಷ್ಠಮತ ಎಂದು ಸಾರುತ್ತಾರೆ. ಆದರೆ "ಯೋಗೀಭವಾರ್ಜುನ" ಎಂಬುದೇ ಶ್ರೀಕೃಷ್ಣನ ಆತ್ಯಂತಿಕ ಮತವಲ್ಲ. ಅದರ ಮುಂದಿನ ಶ್ಲೋಕದಲ್ಲಿಯೇ ಎಲ್ಲಾ ಯೋಗಿಗಳಿಗಿಂತಲೂ ಶ್ರದ್ಧಾವಂತನೇ, ಶ್ರೇಷ್ಠನೆಂದು ಶ್ರೀಕೃಷ್ಣ ಹೇಳುತ್ತಾನೆ :

"ಯೋಗಿನಾಮಪಿ ಸರ್ವೇಷಾಂ ಮದ್ಗತೇ ನಾಂತರಾತ್ಮನಾ ।
ಶ್ರದ್ಧಾವಾನ್ ಭಜತೇ ಯೋ ಮಾಂ ಸಮೇಯುಕ್ತತಮೋಮತಃ ॥

ಗೀತಾ VI ಶ್ಲೋ: 47

"ಯಾವನು ಶ್ರದ್ಧಾವಂತನೋ ಮತ್ತು ನನನ್ನು ಹೊಂದಿರುವ ಮನಸ್ಸಿನಿಂದ ನನ್ನನ್ನು ಭಜಿಸುವನೋ, ಅವನು ಎಲ್ಲ ಯೋಗಿಗಳಿಗಿಂತಲೂ ಶ್ರೇಷ್ಠನೆಂದು ನನ್ನ ಅಭಿಪ್ರಾಯ." ಕೊನೆಗೆ ಶ್ರದ್ಧೆ, ವ್ಯಾಕುಲತೆಯೊಂದೇ ಶ್ರೇಷ್ಠ ಅದೊಂದು ಇದ್ದರೆ ಇನ್ನೆಲ್ಲದೂ - ಭಕ್ತಿ, ಜ್ಞಾನ, ವೈರಾಗ್ಯ, ಭಕ್ತಿ ಮುಕ್ತಿ

ಎಲ್ಲದೂ ತಾನಾಗಿಯೇ ದೊರೆಯುತ್ತದೆ! ಆದ್ದರಿಂದಲೇ ವಚನಕಾರ ಬಸವಣ್ಣನವರೂ ಕೂಡ :

'ಅಯ್ಯಾ, ಅಯ್ಯಾ' ಎಂದು ಕರೆಯುತ್ತಲಿದ್ದೇನೆ;
'ಅಯ್ಯಾ, ಅಯ್ಯಾ' ಎಂದೊಱಲುತ್ತಿದ್ದೇನೆ:
'ಓ' ಎನ್ನಲಾಗದೇ, ಅಯ್ಯಾ ?''

ಎಂದು ವ್ಯಾಕುಲತೆಗೇ ಪ್ರಾಶಸ್ತ್ಯಕೊಟ್ಟಿದ್ದಾರೆ.

ಇಲ್ಲಿಯುವರೆಗೆ ಸಾಧಕವರೇಣ್ಯನ ವ್ಯಾಕುಲವನ್ನು ವಿವಿಧ ರೀತಿಯಿಂದ ಕವಿ ವರ್ಣಿಸಿ ಇನ್ನು ಮುಂದಿನ ವೃತ್ತಗಳಲ್ಲಿ ಸಾಧಕನ ಜೀವನದ ಮುಂದಿನ ಹೆಜ್ಜೆಯನ್ನು ವರ್ಣಿಸಿದ್ದಾನೆ.

ವೃತ್ತ : ೫೭

ಅದು ಸಂಸಾರಾಬ್ಧಿಯಂ ದಾಂಟಿಸುವುದದು ದುರಾಚಾರ-ದುರ್ಬುದ್ಧಿಯಂ ಕೀ-
ಳ್ವುದು ನಿತ್ಯಂ ಶ್ರೀಗುರು ಶ್ರೀಪದಸರಸಿಜಮುಂ ತೋರ್ಪುದಾ ಹಾ ಬಳಿಕ್ಕಂ-
ತದು ಲಿಂಗಾರೂಢನಂ ಮಾಡುವುದು ಶರಣಸಾಂಗತ್ಯವಾ ಸಂಗಮುಂ ಪಿಂ-
ಗದವೊಲ್ ನೀಂ ಮಾಡಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೫೭

ಅರ್ಥ : ಅದು= ಶರಣರ ಸಂಗವು; ಸಂಸಾರಾಬ್ಧಿಯಂ = ಸಂಸಾರವೆಂಬ ಸಮುದ್ರವನ್ನು; ದಾಂಟಿಸುವುದು= ದಾಟಿಸುವುದು; ದುರಾಚಾರ ದುರ್ಬುದ್ಧಿಯನ್ನು ಕೀಳ್ವುದು= ಕಿತ್ತುಹಾಕುವುದು; ನಿತ್ಯಂ= ಯಾವಾಗಲೂ; ಶ್ರೀಗುರು ಶ್ರೀಪದಸರಸಿಜಮುಂ= ಶ್ರೀಗುರುವಿನ ಶ್ರೀಪಾದಪದ್ಮಂಗಳನ್ನು ತೋರ್ಪುದು= ತೋರಿಸುವುದು. ಆಹಾ! ಬಳಿಕ್ಕ= ಬಳಿಕ; ಅಂತು= ಆರೀತಿಯಾಗಿ; ಅದು= ಶರಣರಸಂಗವು; ಲಿಂಗಾರೂಢನಂ= ಲಿಂಗದಲ್ಲಿ ಆರೂಢನಾಗಿರುವಂತೆ; ತಾದಾತ್ಮ್ಯ ಹೊಂದಿರುವಂತೆ ಮಾಡುವುದು. ಶರಣಸಾಂಗತ್ಯ=ಶರಣರ ಸಂಗವು; ಆಸಂಗಮುಂ=ಶರಣಸಂಗವನ್ನು; ಪಿಂಗದವೋಲ್=ಹಿಂಗದರೀತಿಯಲ್ಲಿ ನೀಂ= ನೀನು ಮಾಡಿ ಪಂಪಾಪುರದ ಒಡೆಯ ಶ್ರೀ ವಿರೂಪಾಕ್ಷಸ್ವಾಮಿಯೇ ರಕ್ಷಿಸು.

**ಭಾವಾರ್ಥ:** ಶರಣಸಂಗವು ಸಂಸಾರಸಾಗರವನ್ನೇ ದಾಟಿಸುವುದು. ದುರಾಚಾರ ದುರ್ಬುದ್ಧಿಯನ್ನು ಕಿತ್ತೆಸೆಯುವುದು. ನಿತ್ಯವೂ ಶ್ರೀಗುರುಗಳ ಶ್ರೀಪಾದಪದ್ಮಂಗಳ ದರ್ಶನ ಕೊಡುವುದು. ಲಿಂಗದಲ್ಲಿಯೇ ತಲ್ಲೀನನಾಗಿರುವಂತೆಮಾಡುವ ಆ ಶರಣರ ಸಂಗವು ಹಿಂಗದಂತೆ ಮಾಡಿ ನನ್ನನ್ನು ರಕ್ಷಿಸು ಪಂಪಾಪತಿ ವಿರೂಪಾಕ್ಷ ಸ್ವಾಮಿಯೇ.

**ಟಿಪ್ಪಣಿ:** ಕವಿ ಈ ವೃತ್ತದಲ್ಲಿ ಶರಣರ ಸಂಗದ ಮಹತ್ವವನ್ನು, ಅದರ ಲಾಭವನ್ನು ವರ್ಣಿಸಿದ್ದಾನೆ. ಸಾಧುಸತ್ಪುರುಷರ ಸಂಗವೇ ಮೋಕ್ಷ ಎನ್ನಬಹುದಾದಷ್ಟು ಮಹಿಮೆಯನ್ನು ಇಲ್ಲಿ ತೋರಿಸಿದ್ದಾನೆ. ಶರಣರ ಸಂಗದ ಸವಿಯನ್ನು ಸ್ವಲ್ಪಮಟ್ಟಿಗಾದರೂ ಸವಿದವರು, ಈ ವೃತ್ತದಲ್ಲಿ ಹೇಳಿದುದದರ ಸತ್ಯತೆಯನ್ನು ಅಹುದೆಂದು ಒಪ್ಪಲೇಬೇಕು.

ಸಾಧು ಸತ್ಪುರುಷರ ಶರಣರ ಸಂಗವು ಆಧ್ಯಾತ್ಮಿಕ ಸಾಧನೆಯಲ್ಲಿ ಅತ್ಯಂತ ಮಹತ್ವದ ಆವಶ್ಯಕವಾದ ಪರಿಸರ. ಜಪತಪ ಗುರು, ಮಂತ್ರ ಇವು ಹೇಗೋ ಹಾಗೆಯೇ ಶರಣಸಂಗವೂ ಕೂಡ. ಎಲ್ಲ ಸಾಧನೆಯ ಗುರಿಯೂ, ಅಲ್ಪಮಾನವರಾದ ನಮ್ಮನ್ನು ಅತಿಮಾನವರನ್ನಾಗಿ ಮಾಡುವುದೇ. ಅಲ್ಪ ಮನಸ್ಸಿನವರಾದ ನಮ್ಮನ್ನು ಅತಿ ಮನಸ್ಸಿಗೆ ಒಯ್ಯುವುದೇ ನಮ್ಮ ಬಾಳಿನ ಗುರಿ. ಅಲ್ಪತ್ವವನ್ನು ತೊಡೆದು ಭೂಮತ್ವವನ್ನು ಕೊಡುವುದೇ ಶರಣಸಂಗದ ಪ್ರಯೋಜನ. ಒಂದೇ ತಾಯಿಯ ಹೊಟ್ಟೆಯಲ್ಲಿ ಹುಟ್ಟಿದ ಎರಡು ಗಿಳಿಮರಿಗಳು ಕಟುಕನ ಗುಡಿಸಲ್ಲಿ ಬೆಳೆದರೆ ಒಂದು ಬುದ್ಧಿ, ಬ್ರಾಹ್ಮಣನ ಮನೆಯಲ್ಲಿ ಬೆಳೆದರೆ ಒಂದು ಬುದ್ಧಿ. ನಾವು ಬೆಳೆವ ಸನ್ನಿವೇಶ, ಮಾಡುವ ಸ್ನೇಹ ನಮ್ಮ ಅಂತರಂಗವನ್ನು ರೂಪಿಸುವುದರಲ್ಲಿ ಪ್ರಮುಖಪಾತ್ರವನ್ನು ವಹಿಸುತ್ತವೆ.

'ದುರ್ಜನರ ಮನಸ್ಸು ನಾಯಿಯ ಡೊಂಕುಬಾಲದಂತೆ' ಎಂದು ಶ್ರೀ ರಾಮಕೃಷ್ಣ ಪರಮಹಂಸರು ಹೇಳುತ್ತಿದ್ದರು. ನಾಯಿ ಬಾಲವನ್ನು ಕೊಳವೆಯಲ್ಲಿಟ್ಟಾಗ ನೆಟ್ಟಗಿರುತ್ತದೆ. ಕೊಳವೆಯನ್ನು ತೆಗೆದುಕೊಂಡಕೂಡಲೇ ಅದು ಯಥಾಪ್ರಕಾರ ಡೊಂಕೇ ಶರಣಸಂಗ ಅಂಥ ಕೊಳವೆ. ಅದು ಸದಾ ದೊ

ರೆತರೆ ನಮ್ಮ ಮನ ಡೊಂಕಾಗಲು ಸಾಧ್ಯವೇ ಯಿಲ್ಲ. ಆದರೆ ಶರಣ ಸಂಗ ದೊರೆವುದೇನೂ ಸುಲಭವಲ್ಲ. ಪ್ರಾಪಂಚಿಕ ವಿಷಯವೆಂಬ ಹೆಂಡದ ಗಲ್ಲದಲ್ಲೇ ಮುಳುಗೆದ್ದ ಜೀವಿಗಳು ಸುವಾಸನೆಯನ್ನು ಬೀರಬಲ್ಲರೇ ? ಮೂರೂ ಹೊತ್ತು ಅದೇ ಪ್ರಾಪಂಚಿಕ ದುರ್ವಾಸನೆಯೇ.

ಸಜ್ಜನರ, ಶರಣರ ಸಂಗದಲ್ಲಿರುವಷ್ಟು ಕಾಲ ನಮ್ಮ ಪ್ರಜ್ಞೆ ಈ ಸಾಧಾರಣ ಮನೋಮಯ ಭೂಮಿಕೆಯಲ್ಲೇ ಇರುವುದಿಲ್ಲ ಅದು ಎತ್ತರವಾದ ಭೂಮಿಕೆಯಲ್ಲಿ ವಿಹರಿಸುತ್ತದೆ. ಹರಿಶ್ಚಂದ್ರನ ಕತೆ ಕೇಳುವಾಗ ನಾಟಕ ನೋಡುವಾಗ ನಮ್ಮ ಮನವಿದ್ದಂತೆ, ನಾವು ನಾಟಕಮಂದಿರದಿಂದ ಎದ್ದು ಬಂದಮೇಲೆ ಇರುವುದಿಲ್ಲ. ಆದರೆ ನಾಟಕ ಮಂದಿರದಿಂದ ಎದ್ದು ಬಂದ ಕೂಡಲೇ ಅದೇ ಕೊಳೆಯೇ ! ಹಾಗಾಗಬಾರದು. ನಾಟಕ ನೋಡುವಾಗ ಯಾವ ಉನ್ನತಮಟ್ಟಕ್ಕೆ ನಮ್ಮ ಪ್ರಜ್ಞೆ ಏರಿರುತ್ತದೆಯೋ, ಅದೇ ಮಟ್ಟದಲ್ಲೇ, ನಾಟಕ ಮಂದಿರದಿಂದ ಹೊರಬಿದ್ದಮೇಲೆಯೂ ಇರಬೇಕು. ದ್ವಿಮುಖ ಇರಬಾರದು. ಏಕ ಮುಖವೇ ಬೇಕು. ಹಾಗೆ ನಮ್ಮ ಬಾಳು ಏಕಮುಖವಾಗಿರಲು ಶರಣಸಂಗ ಅನಿವಾರ್ಯ, ಅಗತ್ಯ. ಶರಣಸಂಗ ಪ್ರೇಮಿ ಶ್ರೀ ಬಸವಣ್ಣನವರು ತಮ್ಮ ಅನೇಕ ವಚನಗಳಲ್ಲಿ ಶರಣಸಂಗ ಹಿರಿಮೆಯನ್ನು ಹೇಳಿದ್ದಾರೆ :

ಭಕ್ತಿ ಭಂಡಾರಿ, ಶರಣಸಂಗ ಪ್ರೇಮಿ ಬಸವಣ್ಣನವರು, ಶರಣನೇ ತನ್ನ ದೈವ ಎಂದು ಭಾವಿಸಿದ್ದಾರೆ. "ನಿಮ್ಮ ಶರಣರ ಚಮ್ಮಾವುಗೆಗೆ ಪೃಥ್ವಿಸಮಬಾರದು - ಸರಿಯಲ್ಲಾ, ನೋಡಾ, ಕೂಡಲ ಸಂಗಮದೇವಾ, ನಿಮ್ಮ ಶರಣರ ಚಮ್ಮಾವುಗೆಗೆ" ಎಂದು ಶರಣರ ಹಿರಿಮೆ, ಮಹತ್ವವನ್ನು ವೀರಭಾಷೆಯಲ್ಲಿ ಸಾರಿದ್ದಾರೆ. ಒಮ್ಮೆ ಶರಣರ ಸಂಗವನ್ನು ಸವಿದಮೇಲೆ ಇನ್ನುಳಿದ ಸಂಗ ಕೇವಲ ತುಚ್ಛ ಎಂಬುದನ್ನು : "ಶರಣರ ಸಂಬಂಧವನಜಿದ ಬಳಿಕ ಮರಳಿ ಭವಿಯ ಬೆರಸಬಾರದು : ಬ್ರಹ್ಮಹತ್ಯ, ಬ್ರೂಣಹತ್ಯ ವೈತರಣಿ, ದುರ್ಗತಿ, ಪಂಚಮಹಾಪಾತಕದಿಂದಧಿಕ ನೋಡಾ!" ಎಂದು ಹಾಡಿದ್ದಾರೆ. ಒಂದುವೇಳೆ ಶರಣಸಂಗದಲ್ಲಿ ತಪ್ಪುಗಳಾದರೂ, ಅದೂ ಲಾಭವೇ : "ಶರಣ

ಬೊಶನೆ ಶ್ರವವ ಮೂಡಿ ಮೂಜುಗೋಲ ಬಿಡುವೆನಯ್ಯಾ : ತಾಗಲಿ, ತಪ್ಪಲಿ ಗೆಲವೆನ್ನದೆಂದೆನಯ್ಯಾ. ಕಳಸಿಂದ ಕಡೆಗಳಕ್ಕೆ ಓಡುವೆ, ಕೂಡಲ ಸಂಗಯ್ಯಾ," ಎಂದು ಭಾವಿಸುತ್ತಾರೆ. ಹರಿಹರ ಕವಿಯೇ "ಭಸವರಾಜ ದೇವರ ರಗಳೆ" ಏಳು ಮತ್ತು ಎಂಟನೆಯ ಸ್ಥಲದಲ್ಲಿ ಬಸವಣ್ಣನವರ ಶರಣಸಂಗ ಸುಖವನ್ನು, ಭಕ್ತಿ ಮೈಮೇಲೆ ಬರವಂತೆ ವರ್ಣಿಸಿದ್ದಾನೆ. ಕೊನೆಗೆ ಬಸವಣ್ಣನವರು :

ಶರಣರ ಬಂಟರ ಬಂಟಂ
ಶರಣರ ಕಿಂಕರರ ಕಿಂಕರರ ಕಿಂಕರನಾಂ।
ಶರಣರ ಲೆಂಕರ ಲೆಂಕಂ
ಶರಣರ ತೊತ್ತಿನಗೆ ಬೇಜಿ ಗತಿಮತಿಯುಂಟೆ

ಎಂದು ಹಾಡಿದ್ದಾನೆ.

"ಬಸವರಾಜದೇವರ ರಗಳೆ" - ಎಂಟನೆ ಸ್ಥಳ.

ವೃತ್ತ: ೫೮

ಹರಭಕ್ತರ್ ಬಂದೊಡುರ್ಬುತ್ತವರ ಚರಣಮಂ ಕಣ್ಗಳೊಳ್ ಕಂಠದೊಳ್ ಪೇ-
ರುರದೊಳ್ ಭಾಳಾಗ್ರದೊಳ್ ದೋಯುರ್ಗದೊಳುಭಯಗಂಡಂಗಳೊಳ್ ತಾಳ್ದು ನೆತ್ತಿ-
ತ್ತೊರೆಯುತ್ತಪ್ಪತ್ತೆ ಹಿಗ್ಗುತ್ತತುಳಸುಖದೊಳಾಳುತ್ತುಮೇಳುತ್ತೆ ಬಾಳ್ದಿ-
ರ್ಪಿರವಂ ನೀನಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೫೮

ಅರ್ಥ : ಹರಭಕ್ತರ್= ಶಿವಭಕ್ತರು; ಬಂದೊಡೆ= ಬಂದರೆ; ಉರ್ಬುತ್ತ =ಉಬ್ಬುತ್ತ; ಅವರ ಚರಣಮಂ=ಪಾದಗಳನ್ನು (ಪಾದಧೂಳಿಯನ್ನು) ಕಣ್ಗಳೊಳ್= ಕಣ್ಣುಗಳಲ್ಲಿ; ಕಂಠದೊಳ್= ಕೊರಳಿನಲ್ಲಿ; ಪೇರುರದೊಳ್= ಅಗಲವಾದ ಎದೆಯಲ್ಲಿ; ಭಾಳಾಗ್ರದೊಳ್= ಹಣೆಯ ಕೊನೆಯಲ್ಲಿ; ದೋರ್ಯುಗದೊಳ್= ಬಾಹುಯುಗ; ರಟ್ಟೆಗಳಲ್ಲಿ; ಉಭಯಗಂಡಂಗಳೊಳ್= ಎರಡು ಗಂಡಸ್ಥಳಗಳಲ್ಲಿ; ತಾಳ್ದುಂ= ಧರಿಸಿ; ಎತ್ತುತ

=ಕೈಗಳಲ್ಲಿ ಹಿಡಿದೆತ್ತಿ; ಒರೆಯುತ್ತ= ಸ್ತುತಿಸುತ್ತ; ಅಪ್ಪುತ್ತ= ಅಪ್ಪಿಕೊಳ್ಳುತ್ತ ಹಿಗ್ಗುತ್ತ; ಅತುಳ= ಅಗಾಧವಾದ; ಸುಖದೊಳು ಆಳುತ್ತ= ಬಿದ್ದು ಮುಳುಗಿ; ಏಳುತ್ತ; ಬಾಳ್ವ= ಬಾಳಿ; ಇರ್ಪಿರವಂ= ಇರುವಂಥ ಸ್ಥಿತಿಯನ್ನು ನೀನಿತ್ತು= ನೀನು ಕೊಟ್ಟು ಪಂಪಾಪುರದರಸ ವಿರೂಪಾಕ್ಷ ಸ್ವಾಮಿಯೇ ರಕ್ಷಿಸು.

**ಭಾವಾರ್ಥ:** ಶಿವಭಕ್ತರು ಬಂದೊಡನೆಯೆ ಭಕ್ತಿಯಿಂದ ಉಬ್ಬಿಹೋಗಿ ಅವರ ಪಾದಗಳನ್ನು (ಪಾದಧೂಳಿಯನ್ನು) ಎದೆಗೂ ಕಣ್ಣುಗಳಿಗೂ, ಕೊರಳಿಗೂ, ಗಂಡಸ್ಥಳಗಳಿಗೂ, ಹಣೆಗೂ, ರಟ್ಟೆಗಳಿಗೂ ಒತ್ತಿಕೊಂಡು, ಆ ಪಾದಪದ್ಮಂಗಳನ್ನು ಹಿಡಿದು ಎತ್ತುತ್ತ, ಅಪ್ಪುತ್ತ ಅತ್ಯಂತ ಸುಖದ ಸಾಗರದಲ್ಲಿ ಮುಳುಗಿ ತೇಲುವಂಥ ಸ್ಥಿತಿಯನ್ನು ಕರುಣಿಸಿ ಕಾಪಾಡು ಪಂಪಾಪತಿ ವಿರೂಪಾಕ್ಷಸ್ವಾಮಿ.

**ಟಿಪ್ಪಣಿ :** ಭಕ್ತನಿಗೆ ಭಕ್ತನದರ್ಶನಕ್ಕಿಂತ ಹಿರಿದಾದ ಸೌಭಾಗ್ಯ ಇನ್ನಿಲ್ಲ. ಭಕ್ತನಭಾಗಕ್ಕೆ ಭಕ್ತನೇ ಭಗವಂತ; ಭಾಗವತನೂಕೂಡ. ಭಕ್ತನ ಸ್ಥಾನ ಭಗವಂತನಷ್ಟೇ ದೊಡ್ಡದು. ದೇವರಿಗಿಲ್ಲದ ಸೌಲಭ್ಯ, ಸುಖ, ಭಕ್ತನಿಗಿದೆ.

"ಹೂವ ತರುವರ ಮನೆಗೆ ಹುಲ್ಲ ತರುವ
ಅವ್ವ ಲಕುಮೀರಮಣಗಿನಿತಿಲ್ಲ ಗುರುವ"

ಎಂಬ ದಾಸರ ನುಡಿಯಲ್ಲಿ ಹುದುಗಿರುವ ಭಕ್ತಾಧಿಕ್ಯದಲ್ಲಿ ಅದೇ ಭಾವವೇ ಧ್ವನಿಸುತ್ತಿದೆ. ಭಗವಂತನನ್ನು ಭಕ್ತನು, ಕೂತು ಭಜಿಸಿದರೆ, ಭಗವಂತ ನಿಂತು ಕೇಳುತ್ತಾನೆ. ಅವನು ಮಲಗಿ ಭಜಿಸಿದರೆ, ಭಗವಂತ ಕೂತು ಕೇಳುತ್ತಾನಂತೆ! ಬಾಣ ತನ್ನ ಭಕ್ತಿಯಿಂದ ಭಗವಂತನೇ ತನ್ನ ಮನೆಯ ಬಾಗಿಲನ್ನು ಕಾಯುವಂತೆ ಮಾಡಿದ್ದ. ಭಗವಂತ ಭಕ್ತರ ಆಳು. ದೇವರನ್ನೇ ತನ್ನ ಆಜ್ಞಾಪಾಲಕನನ್ನಾಗಿ ಮಾಡಿಕೊಂಬ ಶಕ್ತಿ ಭಕ್ತ.

ಭಕ್ತಿ ಭಂಡಾರಿ ಬಸವಣ್ಣನವರ ವಚನಗಳಲ್ಲಂತೂ ಭಕ್ತರ ಆಧಿಕ್ಯವನ್ನು

ನೂರಾರೂ ಸಂದರ್ಭಗಳಲ್ಲಿ ಕಾಣಬಹುದು. "ಭಕ್ತನ ಮುಖದರ್ಪಣದಲ್ಲಿ ಲಿಂಗವ ಕಾಣಬಹುದು .... ಕೂಡಲ ಸಂಗಮದೇವ, ಭಕ್ತನ ನುಡಿಯ ನಡುವೆ ರಾಶಿಯಾಗಿರ್ಪನು." "ಭಕ್ತನಿರ್ದಟಾವೇ ದೇವಲೋಕ; ಭಕ್ತನಂಗಳವೇ ವಾರಣಾಶಿ; ಕಾಯಕವೇ ಕೈಲಾಸ !" "ನಿಮ್ಮ ನಂಬಿದ ಶರಣರ ಡಿಂಗರಿಗ ನಾನು," "ಕೂಡಲಸಂಗನ ಶರಣರೊಡೆಯರಾಗಿ ತಮ್ಮ ತೊತ್ತಿನವಗನೆಂದು ಒಲಿದಂತೆ ನುಡಿದರು." ಎಂಬ ಬಸವಣ್ಣನವರ ವಚನಗಳಲ್ಲಿ ಭಕ್ತರಿಗಿಂತ ಇನ್ನಿಲ್ಲ ಎಂಬ ಭಾವ ಸ್ಫುಟವಾಗಿ ಮೂಡಿದೆ.

ಅಂಥ ಭಕ್ತರ ದರ್ಶನದಿಂದ ಭಕ್ತನಿಗೆ ಭಕ್ತಿ ನಿರ್ಭರವಾಗಿ, ಅವರ ಪಾದಧೂಳಿಯನ್ನು ಕಣ್ಣೊತ್ತಿಕೊಂಡು ಭಾವಪರವಶತೆಯಿಂದ ಮೈಮರೆತು ಆನಂದದಲ್ಲಿ ಮುಳುಗಿ ಏಳುವಂಥ ಭಾಗ್ಯವನ್ನು ಕರುಣಿಸು ತಂದೇ ಎಂದು ಪ್ರಾರ್ಥಿಸುತ್ತಾನೆ.

## ವೃತ್ತ : ೫೯

ಮೃಡಭಕ್ತವ್ರಾತವಾನಂದದೊಳಿದಿರ್ವರೆ ಕಂಡಾರ್ತದಿಂ ಸ್ನೇಹದಿಂ ಸೈ-
ಗೆಡೆದೆನ್ನೈಶ್ವರ್ಯವೆನ್ನಾಗಿನ ತವನಿಧಿಯೆನ್ನಾಯುವೆನ್ನೆಲ್ಲಮುಂ ನಿ-
ಮ್ಮಡಿಗಳ್ ಸರ್ವಸ್ವಮುಂ ನಿಮ್ಮಡಿಗಳೊಡವೆಯೂಂ ಕಾಪಿನಾಳೆಂದುಚಿತ್ತಂ-
ಗುಡುತಿರ್ಪಂತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೫೯

ಅರ್ಥ : ಮೃಡಭಕ್ತ=ಶಿವಭಕ್ತ; ವ್ರಾತ= ಸಮೂಹವು; ಆನಂದದೊಳ್=ಆನಂದದಿಂದ ಇದಿರ್ವರೆ= ಎದುರಿಗೆ ಬರಲಾಗಿ; ಕಂಡು; ಆರ್ತದಿಂ= ಪ್ರೀತಿಯಿಂದ ಸ್ನೇಹದಿಂದ; ಸೈಗೆಡೆದು= ದೀರ್ಘದಂಡ ನಮಸ್ಕಾರಮಾಡಿ;÷ಎನ್ನೈಶ್ವರ್ಯವೇ; ಎನ್ನಾಗಿನ= ನನ್ನ ಆಗಿನ; ತವನಿಧಿಯೆ= ಅಕ್ಷಯನಿಧಿಯೇ; ಎನ್ನಾಯುವೇ= ಎನ್ನ ಆಯುಷ್ಯವೇ; ಎನ್ನೆಲ್ಲಮುಂ =ನನ್ನದೇನಿದ್ದರೂ; ನಿಮ್ಮಡಿಗಳ್= ನಿಮ್ಮ ಪಾದಗಳಿಗೆ ಅರ್ಪಿತವು; ಸರ್ವಸ್ವಮುಂ = ಸರ್ವಸಂಪತ್ತು; ನಿಮ್ಮಡಿಗಳ್= ನಿಮ್ಮಪಾದಗಳ; ಒಡವೆ= ಒಡವೆ; (ನಿಮ್ಮ ಪಾದ ಸೇವೆಗಾಗಿಯೇ ಇರುವ ವಸ್ತು) ಆಂ= ನಾನು; (ಅದರ) ಕಾಪಿನಾಳ್= ರಕ್ಷಕ (trustee) ಎಂದು; ಚಿತ್ತಂ= ಚಿತ್ತವನ್ನು ಕುಡುತಿರ್ಪಂತೆ= ಮನಸ್ಸು ಕೊಡು

ವಂತೆ; ಇತ್ತು, ಕೃಪೆಮಾಡಿ; ಪಂಪಾಪುರದರಸ ವಿರೂಪಾಕ್ಷಸ್ವಾಮಿಯೇ ನನ್ನನ್ನು ರಕ್ಷಿಸು.

**ಭಾವಾರ್ಥ:** ಶಿವಭಕ್ತರು ಸಂತೋಷದಿಂದ ಎದುರಿಗೆ ಬರುವುದನ್ನು ಕಂಡಾಕ್ಷಣವೇ ಅವರನ್ನು ಪ್ರೇಮದಿಂದ ಸ್ನೇಹದಿಂದ ದೀರ್ಘ ದಂಡ ನಮಸ್ಕಾರ ಮಾಡಿ: "ಎನ್ನ ಐಶ್ವರ್ಯವೇ ಎನ್ನ ಅಕ್ಷಯ ನಿಧಿಯೇ, ಎನ್ನ ಆಯುಷ್ಯವೇ, ಎನ್ನದೆಂಬುದೇನಿದೆಯೋ ಅದೆಲ್ಲವೂ. ನನ್ನ ಸರ್ವಸ್ವವೂ ನಿಮ್ಮ ಅಡಿಗಳ ಸೇವೆಗಾಗಿಯೇ ಇರುವ ಒಡವೆ; ನಾನು ಅವರ ಕಾವಲುಗಾರ, ರಕ್ಷಕ" ಎಂಬ ಮನಸ್ಸನ್ನು ಕೊಟ್ಟು ಕಾಪಾಡು ಪಂಪಾಪತಿ ವಿರೂಪಾಕ್ಷ ಸ್ವಾಮಿಯೇ.

**ಟಿಪ್ಪಣಿ:** ಸಾಧಕನಾದವನು, ಭಕ್ತನಾದವನು ಐಶ್ವರ್ಯವನ್ನು, ಸಂಪತ್ತನ್ನು ಜೀವನ ಸೌಕರ್ಯಗಳನ್ನು ತುಚ್ಛೀಕರಿಸಬೇಕೆಂದಿಲ್ಲ. ಭಕ್ತನೆಂದ ಮಾತ್ರಕ್ಕೆ ಅವನು ಅರೆ ಮೈ ಬರಿಹೊಟ್ಟೆಯಿಂದ ಇರಬೇಕೆಂದಲ್ಲ. ಬೀದಿಯ ಭಿಕಾರಿಗೆ ಮಾತ್ರ ಭಗವದ್ದರ್ಶನ ಸಾಧ್ಯ ಎಂದು ಭಾವಿಸಬಾರದು. ಸಾಧಕ ಧನಾರ್ಜನೆಮಾಡಿದರೆ ತಪ್ಪಿಲ್ಲ. ಆದರೆ ಆ ಸಂಪತ್ತು ಐಶ್ವರ್ಯ ಎಲ್ಲದೂ ತಾಯಿಕೊಟ್ಟ ಹರಕೆ ಎಂಬ ವಿವೇಕ ಪ್ರಜ್ಞೆ ಸದಾ ಎಚ್ಚತ್ತಿರಬೇಕು ನಾವೇ ದೊಡ್ಡ ತಿರುಕರು. ಅಂಥವರು ಐಶ್ವಯವನ್ನು ಹೇಗೆ ಗಳಿಸೇವು? ಕೂಡಿಟ್ಟೇವು? ತಾಯಿ ಕೊಡದಿದ್ದರೆ ಮಗನಿಗೆಲ್ಲಿಂದ ಬಂದೀತು? ಏನೇನು ಐಶ್ವರ್ಯ, ಸಿರಿ, ಸಂಪತ್ತು ಲಭಿಸುತ್ತಿದೆಯೋ ಅದೆಲ್ಲವೂ ಅವನ ಕೃಪೆಯೇ. ಸಕಲ ವಿಶ್ವಕ್ಕೂ ಒಡೆಯ ದೇವರು. ಆ ವಿಶ್ವದೊಳಗಿರುವ ತೃಣಕಿಂತ ತೃಣವಾದ ಈ ಮಾನವ ಅಹಂಕಾರದಿಂದ "ಈ ಸಂಪತ್ತೆಲ್ಲ ನನ್ನದು; ನಾನು ಗಳಿಸಿದ್ದು" ಎಂದು ಹೇಳಿದರೆ ಅವನೊಬ್ಬ ಕಳ್ಳ. ಇವರ ಸ್ವಾಮಿತ್ವವೆಲ್ಲ ಸ್ವಾಮಿಯದು. ಅವನ ಒಡವೆಯನ್ನು ನಮ್ಮದೆಂದು ಹೇಳುವುದು ಚೌರ್ಯವಲ್ಲದೆ ಮತ್ತೇನು? ಆದ್ದರಿಂದ ಇರುವ ಐಶ್ವರ್ಯವೆಲ್ಲ ಅವನಿಗೇ ಸೇರಿದೆ. ಆದರೆ ನಮ್ಮಲ್ಲಿ ಹೇಗೆ ಬಂತು? ಯಾಕೆ ಬಂತು? ಅವನುಕೊಟ್ಟನೆಂದು ಬಂತು. ಅವನೆಡೆಗೆ ನಮ್ಮನ್ನು ಕರೆದೊಯ್ಯಲೆಂದು ಬಂತು. ನಮಗೆ ದೊಡ್ಡ ಬಂಗಲೆಯನ್ನು ಭಗವಂತ ಕೊಟ್ಟದ್ದು ಅದರಲ್ಲಿ ತಿಂದು ಕುಡಿದು ರಮಿಸಲೆಂದ

ಇಲ್ಲ. ನಿಶ್ಚಿಂತತೆಯಿಂದ, ತನ್ನ ಮನೆಯವರಿಂದಲೂ ತೊಂದರೆಯಾಗದಂತೆ ಅವನ ಧ್ಯಾನದಲ್ಲಿ ತೊಡಗಲಿ ಎಂದು. ಬಡವ, ದೈವಪ್ರಾರ್ಥನೆ ಮಾಡದಿದ್ದ ರೆ, ಅವನನ್ನು ದೇವರು ಕ್ಷಮಿಸುತ್ತಾನೆ. ಹೊಟ್ಟೆಯ ಹೋರಾಟದಲ್ಲೇ ಸತ್ತು ಹುಟ್ಟುವ ಅವನಿಗೆ ದೈವಚಿಂತನೆಗೆ ಅವಕಾಶವೆಲ್ಲಿ? ಆದರೆ, ಹೊಟ್ಟೆ ಯ ಚಿಂತೆಯೇ ಇಲ್ಲದವನು ದೇವರನ್ನು ನೆನೆಯದಿದ್ದರೆ ಅವನಿಗೆ ಕ್ಷಮೆ ಯೆ ಲ್ಲಿದೆ? ನಿಜವಾಗಿಯೂ ಸಂಪತ್ತು ನಮ್ಮನ್ನು ಪತಿತರನ್ನಾಗಿ ಮಾಡಬೇಕಾ ಗಿಲ್ಲ. ಅದರ ಉದ್ದೇಶವೂ ಅದಲ್ಲ. ಅದೆಲ್ಲವೂ ಅವನದೇ ಎಂಬ ಭಾವನೆ ಅನುಭವವಾದಾಗ, ನಮ್ಮಲ್ಲಿರುವ ಐಶ್ವರ್ಯದ ಕಾವಲುಗಾರನಲ್ಲದೆ ಮತ್ತೇನು? ಇದೇ ಸತ್ಯವನ್ನೇ ಮಹಾಯೋಗಿ ಶ್ರೀಅರವಿಂದ ಮಹರ್ಷಿಗಳು:

"ಎಲ್ಲ ಸಂಪತ್ತೂ ಭಗವಂತನದೇ, ಅದನ್ನು ಇಟ್ಟುಕೊಂಡವರು ವಿಶ್ವಸ್ತ ರೇ ಹೊರತು ಒಡೆಯರಲ್ಲ. ಇಂದು ಅದು ಅವರ ಹತ್ತಿರವಿದೆ; ನಾಳೆ ಅದು ಬೇರೆ ಕಡೆಗೆ ಇರಬಹುದು. ಧನವು ಹತ್ತಿರ ಇದ್ದಾಗ ಆ ಧನದ ಪಾರುಪತ್ಯ ಗಾರಿಕೆಯ ಹೊಣೆಯನ್ನು ಅವರು ಹೇಗೆ ನಿರ್ವಹಿಸಿದರು, ಯಾವ ಭಾವನೆ ಯಿಂದ, ಯಾವ ಪ್ರಜ್ಞೆಯಿಟ್ಟುಕೊಂಡು, ಯಾವ ಉದ್ದೇಶಕ್ಕಾಗಿ ಅದನ್ನು ಉಪಯೋಗಿಸಿದರು ಎಂಬುವರ ಮೇಲೆ ಎಲ್ಲವೂ ಅವಲಂಬಿಸಿವೆ".

"ನೀನು ಹಣವನ್ನು ಸಂತಕ್ಕಾಗಿ ಉಪಯೋಗಿಸುವಾಗ ನಿನ್ನ ಹತ್ತಿರ ಇರುವ, ನಿನಗೆ ದೊರಕುವ, ಹಾಗೂ ನೀನು ತರುವ ಧನವೆಲ್ಲ ಮಾತೆಯದೇ ಎಂದು ತಿಳಿ. ನೀನಾಗಿ ಬೇಕೆಂದು ಕೇಳಬೇಡ; ಆದರೆ ಆಕೆ ಕೊಟ್ಟದ್ದನ್ನು ಸ್ವೀಕರಿಸು. ಮತ್ತೆ, ಕೊಟ್ಟ ಉದ್ದೇಶಕ್ಕಾಗಿಯೇ ಅದನ್ನು ಬಳಸು. ಸಂಪೂ ರ್ಣ ನಿಸ್ವಾರ್ಥಿಯಾಗು; ನಿಷ್ಕಾಮವಂತನಾಗು. ಹೆಚ್ಚುಕಡಿಮೆ ಯಾಗದ ಹಾಗೆ ನೋಡಿಕೋ. ವಿವರಗಳ ಬಗ್ಗೆ ಜಾಗರೂಕನಾಗಿರು. ಒಳ್ಳೆಯ ವಿಶ್ವ ಸ್ತನಾಗು. ನೀನು ವಿನಿಯೋಗಿಸುತ್ತಿರುವದು ನಿನ್ನ ಆಸ್ತಿಯಾಗಿರದೆ ಮಾತೆ ಯದೇ ಆಸ್ತಿಯಾಗಿರುವುದೆಂದು ಯಾವಾಗಲೂ ತಿಳಿದುಕೋ. ಆಕೆಗಾಗಿ ಯೆಂದು ನಿನ್ನೆಡೆಗೆ ಬಂದುದನ್ನು, ಶ್ರದ್ಧೆಯಿಂದ ಆಕೆಗೆ ಅರ್ಪಿಸು. ನಿನ್ನ ಸಲುವಾಗಿಯಾಗಲಿ, ಬೇರೊಬ್ಬರ ಸಲುವಾಗಿಯಾಗಲಿ ಅದನ್ನು ಬಳಸ ಬೇಡ".

"ಈ ಬಗೆಯ ಆದರ್ಶ-ಸಾಧಕನು ಬಡತನದಲ್ಲಿ ಇರಬೇಕಾಗಿಬಂದರೆ ಹಾಗೆ ಇರಬಲ್ಲನಷ್ಟೇ ಅಲ್ಲ, ಯಾವುದೇ ಅಭಾವದ ಭಾವನೆ ಅವನನ್ನು ಬಾಧಿಸದು. ಅಥವಾ ಅವನ ಅಂತರುಗದಲ್ಲಿ ಪರಮೇಶ್ವರಿಯ ಚೈತನ್ಯವು ಸ್ವಚ್ಛಂದವಾಗಿ ಸುಳಿದಾಡುವದಕ್ಕೆ ಆ ಬಡತನದಿಂದ ಯಾವ ಆತಂಕವೂ ಉಂಟಾಗದು. ಸಿರಿವಂತಿಕೆ ಯಲ್ಲಿ ಇರಬೇಕಾಗಿ ಬಂದರೆ ಅವನು ಹಾಗೂ ಇರಬಲ್ಲನು, ಮತ್ತು ಒಂದು ಕ್ಷಣ ಸಹ ಧನದ ಆಸೆಗೆ ಬಲಿಬೀಳನು. ಧನದ ಬಗ್ಗೆಯಾಗಲಿ, ತಾನು ಉಪಯೋಗಿಸುವ ಸಾಮಗ್ರಿಗಳ ಬಗ್ಗೆಯಾಗಲಿ, ಆಸಕ್ತಿತಾಳನು. ಭೋಗಕ್ಕೆ ದಾಸನಾಗನು; ಅಥವಾ ಶ್ರೀಮಂತಿಕೆಯಿಂದ ಹುಟ್ಟುವ ದುರಭ್ಯಾಸಗಳಿಗೆ ಕಟ್ಟುಬೀಳನು. ಭಗವದಿಚ್ಛೆ, ದಿವ್ಯಾನಂದ ಇವೇ ಅವನ ಸರ್ವಸ್ವವಿರುವವು.

ಶ್ರೀ ಅರವಿಂದ

(The Mother ಎಂಬ ಗ್ರಂಥದಿಂದ)

ಈ ಮೇಲಿನ ಮೂರು ವೃತ್ತಗಳಲ್ಲಿ ಸಾಧಕನು ತನ್ನ ಕೀಳು ಪ್ರವೃತ್ತಿಗಳನ್ನು ಕೈಬಿಟ್ಟಮೇಲೆ ಸಾಧನೆಯ ಮಾರ್ಗದಲ್ಲಿ ಮುಂದುವರಿಯಬೇಕಾದರೆ ಸಜ್ಜನಸಂಗ, ಭಕ್ತರದರ್ಶನ, ಭಕ್ತರ ಸೇವೆ ಮುಂತಾದ ಸತ್‌ಪ್ರವೃತ್ತಿ ಪ್ರಬೋಧಕ ಮತ್ತು ಕಾರಕವಾದ ಗುಣಗಳು ಅಳಿಯಬೇಕು ಎಂಬುದನ್ನು ಕವಿ ಇಲ್ಲಿ ಒಂದೊಂದಾಗಿ ತೋರಿಸುತ್ತಿದ್ದಾನೆ. ಭಕ್ತನಿಗೆ ಉದ್ದೀಪನವಾಗಲೂ ಇವೆಲ್ಲವೂ ಬೇಕು. 'ಕ' ಎಂಬ ಅಕ್ಷರವನ್ನು ಕೇಳಿದರೆ, ನೋಡಿದರೆ ಪ್ರಹ್ಲಾದನಿಗೆ ಉದ್ದೀಪನವಾಗುತ್ತಿತ್ತಂತೆ. ನೀಲ ಆಕಾಶವನ್ನು ನೋಡಿದರೆ ಸಾಕು ಶ್ರೀರಾಮಕೃಷ್ಣರಿಗೆ ಉದ್ದೀಪನವಾಗುತ್ತಿತ್ತು.

### ವೃತ್ತ : ೬೦

ಮುದದಿಂದಂ ನಿನ್ನ ಪೂಜಾರಚನೆಯನೊಲವಿಂ ಕಂಡು ಸರ್ವಜ್ಞನಿಂತೋ-
ಪ್ಪಿದನಾನಂದಾಬ್ಧಿಯಿಂತೊಪ್ಪಿದನಹಿಧರನಿಂತೊಪ್ಪಿದಂ ಶಂಭ ವಿಂತೊ-
ಪ್ಪಿದನೆಂದಶ್ರುಪ್ರವಾಹಂ ಪರಿಯಿಡೆ ಪುಳಕಂ ಪೊಣ್ಮೆಸಂಸ್ತೋತ್ರಮಂ ಮಾ-
ಳ್ಪುದನೆನ್ನೊಳ್, ಕೂಡಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೬೦

ಅರ್ಥ : ಮುದದಿಂದ= ಪ್ರೀತಿಯಿಂದ; ನಿಮ್ಮ ಪೂಜಾರಚನೆಯು= ಪೂಜೆ ಯಾಗುವುದನ್ನು; ಒಲವಿಂ= ಭಕ್ತಿಯಿಂದ ಕಂಡು; ಸರ್ವಜ್ಞನ್= ಸರ್ವಜ್ಞನಾದ ಭಗವಂತನು; ಇಂತು= ಈ ರೀತಿಯಾಗಿ; ಒಪ್ಪಿದನು= ಕಂಗೊಳಿಸುತ್ತಿದ್ದಾನೆ; ಆನಂದಾಬ್ಧಿ =ಆನಂದಸಮುದ್ರನಾದ ಸಚ್ಚಿದಾನಂದ ಸ್ವರೂಪಿಯಾದ ಭಗವಂತನು; ಅಹಿಧರ= ಹಾವನ್ನೇ ಧರಿಸಿದವನು; ಅಶ್ರುಪ್ರವಾಹ= ಕಣ್ಣಲ್ಲಿ ಆನಂದಬಾಷ್ಪದ ಪ್ರವಾಹವೇ; ಪರಿಯಿಡೆ= ಗಳಗಳನೆ ಹರಿಯುತ್ತಿರಲು; ಪುಲಕಂ= ಮೈಗೂದಲು; ಪೊಣ್ಮೆ= ಮೇಲೆದ್ದು ನಿಲ್ಲಲು; ಸಂಸ್ತೋತ್ರಮಂ= ಶ್ರೇಷ್ಠವಾದ ಸ್ತೋತ್ರವನ್ನು; ಮಾಳ್ಪುದನ್= ಮಾಡುವುದನ್ನು; ಎನ್ನೊಳ್= ನನ್ನಲ್ಲಿ; ಕೂಡಿ= ಉಂಟುಮಾಡಿ ಪಂಪಾಪುರದರಸ ವಿರೂಪಾಕ್ಷಸ್ವಾಮಿ ಯೇ ನನ್ನನ್ನು ರಕ್ಷಿಸು.

ಭಾವಾರ್ಥ : ನಿಮ್ಮ ಪೂಜೆಯಾಗುತ್ತಿರುವುದನ್ನು ನೋಡಿದರೆ ಸಾಕು, "ಸರ್ವಜ್ಞನೂ, ಆನಂದನಿಧಿಯೂ, ನಾಗಭೂಷಣನೂ, ಶಂಭುವೂ ಹೀಗೆ ಕಂಗೊಳಿಸುತ್ತಿದ್ದಾನೆ" ಎಂದು ಭಾವಸಮಾಧಿಯನ್ನು ಹೊಂದಿ, ಕಣ್ಣುಗಳಲ್ಲಿ ಆನಂದಾಶ್ರುವೂ, ಮೈನವಿರು ಏಳುವಂತೆ ಮಾಡಿ ಪ್ರಾರ್ಥನೆಯಲ್ಲಿ ತೊಡಗುವಂತೆ ಮಾಡು ಸ್ವಾಮಿ ಎಂದು ಕವಿ ನುಡಿಯುತ್ತಿದ್ದಾನೆ.

ಟಿಪ್ಪಣಿ : ಭಕ್ತನಾದವನು ಭಗವಂತನ ಅರ್ಚನೆಯನ್ನು ನೋಡಿದರೆ ಸಾಕು ಮೈಮರೆತು ಹೋಗುತ್ತಾನೆ. ಅಂಥ ಸ್ಥಿತಿಯನ್ನು ಮುಟ್ಟಬೇಕಾದರೆ ಹುಡುಗಾಟಿಕೆಯು ಮಾತಲ್ಲ. ಅದು ಅವನ ಕೃಪೆಯೇ. ಅಂಥ ಸ್ಥಿತಿಯನ್ನು ಕರುಣಿಸೆಂದು ಕವಿ ಬೇಡುತ್ತಿದ್ದಾನೆ.

ವೃತ್ತ : ೬೧

ಅದನಿನ್ನೇನೆಂಬೆನಾಹಾ ಗುರುತರಸುಖಮಂ ತುಂಗಭದ್ರಾನದೀತೀ-
ರದೊಳಿರ್ದುತ್ತುಂಗಹಸ್ತಂ ಮುಕುಲಿತನಯನಂ ಭೂತಿಸರ್ವಾಂಗನಾಗಿ-
ರ್ದು ದಯಾಂಭೋರಾಶಿ ಗಂಗಾಧರ ಪುರಹರ ಸರ್ವೇಶನೆಂದುರ್ಬುವಾ ಸೌ-
ಖ್ಯದ ಪೆರ್ಚಂ ಕೊಟ್ಟು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೯೧

ಅರ್ಥ: ಅದನ್=ಅದನ್ನು; ಇನ್ನೇನೆಂಬೆನ್=ಇನ್ನೇನೆಂದು ಹೇಳಲಿ; ಆಹಾ; ಗುರುತರಸುಖಮಂ= ಶ್ರೇಷ್ಠವಾದ ಸುಖವನ್ನು; ತುಂಗಭದ್ರಾನದಿಯ; ತೀರದೊಳಿರ್ದ

=ತೀರದಲ್ಲಿದ್ದು; ಉತ್ತುಂಗ =ಕೈಮುಗಿದು ಮೇಲಕ್ಕೆತ್ತಿದ; ಹಸ್ತಂ= ಕೈಗಳು; ಮುಕುಲಿತ – ಅರೆ ಮುಚ್ಚಿದ; ನಯನಂ= ಕಣ್ಣುಗಳು; ಭೂತಿ= ವಿಭೂತಿಯಿಂದ; ಸರ್ವಾಂಗಪಾಗಿರ್ದು= ಸರ್ವಾಂಗಕ್ಕೂ ಲೇಪಿಸಿಕೊಂಡವನಾಗಿ; ದಯಾಂಭೋರಾಶಿ= ದಯೆಯೆಂಬ ಸಮುದ್ರ; ಗಂಗಾಧರ; ಪುರಹರ; ಸರ್ವೇಶ ಎಂದುಬ್ಬುವ= ಎಂದು ಉಬ್ಬುವ ಆ ಸೌಖ್ಯದ; ಪೆರ್ಚಂ= ಹೆಚ್ಚಳಿಕೆ; ಅಗ್ಗಳಿಕೆಯನ್ನು ಕೊಟ್ಟು ಪಂಪಾಪುರದ ವಿರೂಪಾಕ್ಷಸ್ವಾಮಿಯೇ ರಕ್ಷಿಸುವುದು.

ಭಾವಾರ್ಥ: ತುಂಭದ್ರಾನದೀ ತೀರದಮೇಲೆ ವಾಸವಾಗಿದ್ದು ಪಂಪಾಪತಿಯ ಧ್ಯಾನದಲ್ಲಿ ಕೈಮುಗಿದು, ಅರೆಮುಚ್ಚಿದ ಕಣ್ಣುಗಳಿಂದ ಭಸ್ಮ ಲೇಪನಮಾಡಿಕೊಂಡು; "ದಯಾನಿಧಿ, ಗಂಗಾಧರ, ಪುರಹರ ಸರ್ವೇಶ ಎಂದು ಭಗವಧ್ಯಾನದಲ್ಲಿ ಉಬ್ಬಿಹೋಗುವ ಆನಂದದ ಹೆಚ್ಚಳಿಕೆಯನ್ನು ಕೊಟ್ಟು ನನ್ನನ್ನು ಕಾಪಾಡು ಸ್ವಾಮಿ.

ಟಿಪ್ಪಣಿ: ಭಕ್ತನಾದವನಿಗೆ ಭಗವಂತನ ಧ್ಯಾನದಿಂದ ದೊರೆಯುವ ಸುಖಕ್ಕಿಂತ ಅಧಿಕ ತರವಾದ ಸುಖ ಮತ್ತೊಂದು ದೊರೆಯಬಹುದೆ? ಹಂಹರ ಮಹಾಕವಿಯಂಥ ಸದ್ಭಕ್ತನಿಗೆ ಇನ್ನು ಯಾತರ ಸುಖವೂ ಬೇಡ. ತುಂಗಭದ್ರಾನದಿಯ ದಂಡೆಯಲ್ಲಿದ್ದು ಭಗವಂತನ ಧ್ಯಾನದಲ್ಲಿರುವ ಸುಖವನ್ನು ಇನ್ನೇನೆಂದು ಹೇಳಲಿ! ಎನ್ನುತ್ತಾನೆ. ತುಂಗಭದ್ರಾನದಿ ಸಮಗೆಲ್ಲ ಬರಿಯ ಹರಿಯುವ ನೀರಾಗಿ ತೋರೀತು. ಆದರೆ ಈ ಮಹಾಕವಿಗೆ ತುಂಗಭದ್ರೆ ಬರಿಯ ಹರಿವ ನೀರಲ್ಲ. ಮಾನವರ ಅಘವಿಮೋಚನೆಗಾಗಿಯೇ ಇಳಿದು ಬಂದ ಪಾರ್ವತೀ ದೇವಿಯೇ ಈ ನದಿ.

## ವೃತ್ತ: ೬೨

ಎನಗಿನ್ನೆಂತೆಂಬ ಚಿಂತಾಪ್ರತತಿ ಹಱಿದು ಹಾಱಿತ್ತು ಕಾಮುಕ್ಕೆ ಮೋಹ-
ಕ್ಕನುಗೆಯ್ವೊಂದಾಗ್ರಹಂ ಕಟ್ಟನೆ ಕರಗಿತ್ತು ಮಾತ್ಸರ್ಯದೊಂದುಜ್ಜುಗಂ ಕ-
ಱನೆ ಕಂದಿತ್ತುತ್ತಮಿತ್ತಂ ಮಿಗೆ ಮಸಗುವ ಕೋಪಂ ಕರಂ ತಗ್ಗಿ ಕುಗ್ಗಿ-
ತ್ತೆನಿಪಂದಂ ಮಾಡಿ ಪಂಪಾಪುರವರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ

ಅರ್ಥ: ಎನಗೆ; ಇನ್ನೆಂತು=ಇನ್ನು ಹೇಗೆ; ಎಂಬ; ಚಿಂತಾ=ಚಿಂತೆಯು; ಪ್ರತತಿ= ಸಮೂಹ; ಹಱಿದು ಪಾಱಿತ್ತು= ಹರಿದು ಹಾರಿಹೋಯಿತು; ಕಾಮುಕ್ಕಿ ಮೋಹಕ್ಕೆ ಅನುಗೆಯ್ವ=ಎಳಸುವ; ಒಂದಾಗ್ರಹಂ=ಒಂದು ಮನದ ಹಠಸ್ವಭಾವವು; ಕಟ್ಟಿನೆ ಕರಗಿತು; ಮಾತ್ಸರ್ಯ ದೊಂದುಜ್ಜುಗಂ= ಹೊಟ್ಟೆಕಿಚ್ಚಿನ ಉದ್ಯೋಗವು; ಕಟ್ಟಿನೆ ಕಂದಿತ್ತುಂ =ಕಂದಿಹೋಯಿತು; ಅತ್ತಂ ಇತ್ತಂ= ಅತ್ತಿತ್ತ; ಮಿಗೆ= ಹೆಚ್ಚಾಗಿ; ಮಸಗುವ= ಮಸೆಯುವ; ಕೋಪಂ= ಕೋಪವು; ಕರಂ= ಚೆನ್ನಾಗಿ; ತಗ್ಗಿ= ತಗ್ಗಿ; ಕುಗ್ಗಿತ್ತು= ಕುಗ್ಗಿಹೋಯಿತು; ಎನಿಪ್ಪ= ಎನ್ನುವ ಅಂದಂ= ರೀತಿಮಾಡಿ; ಪಂಪಾಪುರದ ಅರಸನಾದ ವಿರೂಪಾಕ್ಷ ಸ್ವಾಮಿಯೇ ಎನ್ನನ್ನು ರಕ್ಷಿಸು.

ಭಾವಾರ್ಥ: ನನಗೆ ಇನ್ನೇನು ಗತಿ ಎಂಬ ಚಿಂತೆಯು ಹರಿದು ಹಾರಿಹೋಯಿತು. ಕಾಮುಕ್ಕೆ ಮೋಹಕ್ಕೆ ಎರಗುತ್ತಿದ್ದ ಮನಸ್ಸಿನ ಸ್ವಭಾವ ಕರಗಿತು. ಮಾತ್ಸರ್ಯವು ಕಂದಿತು. ಕತ್ತಿಯನ್ನು ಮಸೆಯುವಂತೆ ಮಸೆಯುತ್ತಿದ್ದ ಕೋಪವೂ ಚೆನ್ನಾಗಿ ಕುಗ್ಗಿಹೋಯಿತು – ಎಂಬ ರೀತಿಯಲ್ಲಿ ಮಾಡಿ ನನ್ನನ್ನು ಉದ್ಧಾರಮಾಡು ತಂದೆಯೇ.

ಟಿಪ್ಪಣಿ: ಶಿವನೊಡನೆ ಒಂದಾಗಿದ್ದ ಜೀವ ಪ್ರಕೃತಿಯಾಗಿ ಸೃಷ್ಟಿಯಾಗುವಾಗ ತ್ರಿಗುಣಗಳನ್ನು ಹೊದ್ದು ಬರುತ್ತದೆ. ಆ ತ್ರಿಗುಣಗಳನ್ನು ಕಳಚಿ, ಪೊರೆಬಿಟ್ಟ ಹಾವಿನಂತೆ ಜೀವ ಅನಂತ ಸಂಸ್ಕಾರಗಳನ್ನು ಪಡೆದು ಪರಿಶುದ್ಧನಾಗಿ ಹೊರಬರಬೇಕು. ಅರಿಷಡ್ವರ್ಗಗಳು ತ್ರಿಗುಣದ ವ್ಯಕ್ತಸ್ವರೂಪ. ಅವುಗಳನ್ನು ಗೆದ್ದೆವೆಂಬುದೊಂದೇ, ಮುಕ್ತರಾದೆ ವೆನ್ನುವುದೊಂದೆ. ಮುಕ್ತಿ ಎಂದರೆ ಬಿಡುಗಡೆ. ಆ ಬಿಡುಗಡೆ ಈ ಪ್ರಪಂಚದಿಂದ ಇನ್ನಾವುದೋ ಪ್ರಪಂಚಕ್ಕೆ ಹೋಗುವುದರಿಂದ ಸಿಗುವುದಲ್ಲ. ಈ ಪ್ರಪಂಚದಲ್ಲೇ ಇದ್ದು, ತ್ರಿಗುಣಗಳ ಬಂಧನದಿಂದ ಬಿಡುಗಡೆ ಹೊಂದುವುದೇ ಮುಕ್ತಿ. ತ್ರಿಗುಣಗಳಿಂದ ಬಿಡುಗಡೆ ಹೊಂದಿದವನನ್ನು ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳಾದರೂ ಏನು ಮಾಡಿಯಾವು? ಇದೇ ಕಲ್ಲುಮಣ್ಣಿನ ವಾಸ್ತವ ಜಗತ್ತಿನಲ್ಲಿ ಇದ್ದರೂ, ಅವನು ಇಲ್ಲದವನಂತೆ ಸ್ಥಿತಪ್ರಜ್ಞನಂತೆ, ಯೋಗಿಯಂತೆ ಬಾಳುತ್ತಾನೆ. ಅಂಥ ಸ್ಥಿತಿಯನ್ನು ಪಡೆಯುವುದೇ ಸಕಲಸಾಧನೆಗಳ ಗುರಿ.

## ವೃತ್ತ: ೬೩

ತಳಿರಿಂ ಪೂವಿಂ ಫಲವ್ರಾತದಿನೊಱಗುವ ಚೂತವ್ರಜಚ್ಛಾಯೆಯೊಳ್ ಕೋ-
ಮಳಹಂಸಸ್ತೋಮವಾಮ ಭ್ರಮರಕುಳವಿಕಾಸಾಬ್ಜಕಾಸಾರದೊಳ್ ನಿ-
ರ್ಮಳನಿಷ್ಪಂದಪ್ರಕಾಶಸ್ಥಳದೊಳಮಳಲಿಂಗಾರ್ಚನಾಸಕ್ತ ಚಿತ್ತೋ-
ಜ್ಜ್ವಳನಾಗಿರ್ಪಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೬೩

ಅರ್ಥ: ತಳಿರಿಂ= ಚಿಗುರಿನಿಂದ; ಪೂವಿಂ =ಹೂವಿನಿಂದ; ಫಲ= ಹಣ್ಣುಗಳ; ವ್ರಾತದಿಂ= ಸಮೂಹದಿಂದ; ಗುಂಪುಗಳಿಂದ ಒಱಗುವ= ಜಗ್ಗುವ; ಚೂತ= ವಸಂತಮಾಸದ; ವ್ರಜ= ಮರಗಳು ಛಾಯೆಯೊಳ್= ನೆರಳಿನಲ್ಲಿ; ಕೋಮಳ= ಕೋಮಲವಾದ; ಹಂಸಗಳಸ್ತೋಮ= ಸಮೂಹದ; ವಾಮ= ಚೆಲ್ವಾದ; ಭ್ರಮರ= ದುಂಬಿಗಳ; ಕುಳ= ಹಿಂಡಿನ; ವಿಕಾಸಾಬ್ಜ ಕಾಸಾರದೊಳ್= ಅರಳಿದ ಕಮಲಗಳಿರುವ ಸರೋವರದಲ್ಲಿ; ನಿರ್ಮಳ= ನಿರ್ಮಲವಾದ; ನಿಷ್ಪಂದ= ಪ್ರಶಾಂತವಾದ; ಪ್ರಕಾಶಸ್ಥಳದೊಳ್= ಪ್ರಶಸ್ತವಾದ ಸ್ಥಳದಲ್ಲಿ; ಅಮಳ= ನಿರ್ಮಲವಾದ; ಲಿಂಗಾರ್ಚನ= ಲಿಂಗಪೂಜೆಯು; ಆಸಕ್ತಚಿತ್ತ= ಆಸಕ್ತವಾಗಿರುವ ಚಿತ್ತ; ಉಜ್ಜ್ವಳನಾಗಿ= ಅಂತರಂಗವನ್ನು ಬೆಳಗಿದವನಾಗಿ ಇರ್ಪಂತೆ= ಇರುವಂತೆ; ಪಂಪಾಪುರದರಸ ನನ್ನನ್ನು ರಕ್ಷಿಸು.

ಭಾವಾರ್ಥ: ಚಿಗುರು, ಹೂವು, ಹಣ್ಣುಗಳಿಂದ ಜಗ್ಗುತ್ತಿರುವ ವಸಂತಋತುವಿನ ವೃಕ್ಷಗಳ ನೆರಳಿನಲ್ಲಿ, ಅರಳಿದ ಕಮಲಗಳಿಗೆ ಬಂದುಮುತ್ತುವ ದುಂಬಿಗಳ ಹಿಂಡೂ ಕೋಮಲವಾದ ಹಂಸಗಳ ಸಮೂಹ ಇರುವ ಸರೋವರದ ಮಧ್ಯದಲ್ಲಿರುವ ನಿರ್ಮಲವಾದ, ನಿಶ್ಶಬ್ದವಾದ ಸ್ಥಳದಲ್ಲಿದ್ದು ಆಸಕ್ತನಾಗಿದ್ದು ಅದರಿಂದ ತನ್ನ ಚಿತ್ತವನ್ನು ಬೆಳಗಿಸಿಕೊಳ್ಳುವಂತ ಪರಿಸ್ಥಿತಿಯನ್ನು ಕೊಟ್ಟು ಕಾಪಾಡು ವಿರೂಪಾಕ್ಷ ಸ್ವಾಮಿಯೇ !

ಟಿಪ್ಪಣಿ: ಈ ಕವಿ ತನ್ನ ಇಷ್ಟ ಲಿಂಗಪೂಜೆಗೆ ಬೇಕಾದ ಸ್ಥಳದ ಬಗೆಗಿರುವ ಕಲ್ಪನೆ ಅಗಾಧವಾದುದು. ಅವನು ಅರಮನೆಯ ಪೂಜಾಗೃಹವನ್ನು ಬಯಸುವುದಿಲ್ಲ. ಯಾರೂ ಕಾಣದ, ಯಾರಿಂದಲೂ ಮಲಿನವಾಗದ ಏಕಾಂತಸ್ಥಳವನ್ನು ಬೇಡುತ್ತಾನೆ. ಆ ಸ್ಥಳದಲ್ಲಿ ಕುಳಿತು ಲಿಂಗಾರ್ಚನೆಯಿಂದ ಉಂಟಾಗುವ ಅಂತರಂಗದ ಸುಖವನ್ನು ಎಷ್ಟೆಂದು ಬಣ್ಣಿಸಬೇಕು.

ವೃತ್ತ: ೬೪

ಅತುಳಸ್ವಚ್ಛಾಂಬುವಿಂ ಮಜ್ಜನಕೆಜೆಿವು ನವೀನಪ್ರಸೂನಪ್ರತಾನ-
ದ್ಯುತಿ ಸುತ್ತಲ್ ಸುತ್ತಿನಿಮ್ಮಂ ಸವಿನುಡಿ ಕವಿಯಲ್ ಬಣ್ಣಿಸುತ್ತಶ್ರುವೀಱಲ್
ನುತರೋಮಾಂಚಂಗಳೇಳಲ್ ಬೆನುರ್ವನಿ ನೆಗೆಯಲ್ ಗದ್ಗದಂ ಪೊಣ್ಮೆ
ಪೂಜಾ-
ತತಿಯಂ ಮಾಳ್ಪಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೬೪

ಅರ್ಥ: ಅತುಳ=ಅಧಿಕವಾದ; ಅತ್ಯಂತ; ಸ್ವಚ್ಛ=ನಿರ್ಮಲವಾದ; ಅಂಬು= ನೀರಿನಿಂದ; ಮಜ್ಜನಕ್ಕೆಜೆಿದು= ಮಜ್ಜನಮಾಡಿ; ನವೀನ= ಮೋಸಲಳಿಯದ ಹೊಸ; ಪ್ರಸೂನ= ಹೂಗಳ; ಪ್ರತಾನ = ರಾಶಿಯ, ಸಮೂಹವನ್ನು; ದ್ಯುತಿ= ಕಾಂತಿ; ಸುತ್ತಲ್= ಸುತ್ತಲೂ; ಸುತ್ತಿ =(ಹೂವುಗಳ ರಾಶಿಯುನ್ನು ಸುತ್ತಲೂ) ಬಿರಿಸಿ; ನಿಮ್ಮಂ= ನಿಮ್ಮದು; ಸವಿನುಡಿ= ಸವಿಯಾದ ಸ್ತೋತ್ರಗಳಿಂದ; ಕವಿಯಲ್= ಮುಚ್ಚಿ ಬಣ್ಣಿಸುತ್ತ= ವರ್ಣಿಸಮಾಡುತ್ತ; ಅಶ್ರುವಿಱಲ್= ಕಣ್ಣಲ್ಲಿ ಆನಂದಬಾಷ್ಪ ಸುರಿಯಲು ನುತ= ಚೆನ್ನಾಗಿ; ರೋಮಾಂಚಗಳ್= ಮೈನವಿರು; ಏಳಲು= ಎದ್ದುನಿಲ್ಲಲು; ಬೆನು ರ್ವನಿ= ಬೆವರಿನ ಹನಿಗಳು ನೆಗೆಯಲ್= ಹುಟ್ಟಲು; ಗದ್ಗದಂ= ಭಾವನಮಾಧಿಯಿಂದ ಮಾತುಬಾರದಾಗಿ ಕಂಠದಲ್ಲಿ ಗದ್ಗದ ಪೊಣ್ಮೆ= ಹುಟ್ಟಲು; ಪೂಜಾತತಿಯಂ= ಪೂಜಾ ಸಮೂಹವನ್ನು ಮಾಳ್ಪಂತೆ=ಮಾಡುವ ರೀತಿಯಲ್ಲಿ ಪಂಪಾಪುರದ ಒಡೆಯನಾದ ವಿರೂ ಪಾಕ್ಷ ಸ್ವಾಮಿಯು ನನ್ನನ್ನು ರಕ್ಷಿಸಲಿ.

ಭಾವಾರ್ಥ: ಅತ್ಯಂತ ಪರಿಶುದ್ಧವಾದ ನೀರಿನಿಂದ ಲಿಂಗಕ್ಕೆ ಮಜ್ಜನಮಾಡಿ, ಮಾಸಲಳಿಯದ ಹೊಸ ಹೂವುಗಳ ರಾಶಿಯ ಕಾಂತಿಯಿಂದ ಲಿಂಗದ ಸುತ್ತಲೂ ಸುತ್ತಿ, ನಿಮ್ಮನ್ನು ಭಕ್ತಿನಿರ್ಭರವಾದ ಶ್ರೇಷ್ಠ ಸ್ತೋತ್ರಗಳಿಂದ ವರ್ಣಿಸುತ್ತ, ಆನಂದ ಬಾಷ್ಪವನ್ನು ಸುರಿಸುತ್ತ, ಮೈ ರೋಮಾಂಚನಗೊಂಡು ಬೆವರಿನ ಹನಿ ಹುಟ್ಟಲು ಗದ್ಗದ ಕಂಠದಿಂದಿರುವಂತೆ ಮಾಡಿ ನನ್ನನ್ನು ಕಾಪಾಡು ಸ್ವಾಮಿ.

ಟಿಪ್ಪಣಿ: ಲಿಂಗಾರ್ಚನೆಯಿಂದ ಒದಗಬಹುದಾದ ಆನಂದವನ್ನು ಅನುಭಾವಿಯಾದ ಹರಿಹರ ಮಹಾಕವಿ ಕಣ್ಣಿಗೆ ಕಟ್ಟುವಂತೆ ಇಲ್ಲಿ ಹೇಳಿ

ದ್ದಾನೆ. ಈ ವೃತ್ತದಲ್ಲಿ ಬರುವ ಈ ಬಣ್ಣನೆ ಕವಿ ಹೊರಗಿನ ಪ್ರಪಂಚದಿಂದ ಸಂಗ್ರಹಿಸಿದ ಸುದ್ದಿಯಲ್ಲ. ತಾನು ಅಂತರಂಗದಲ್ಲಿ ಅನುಭವಿಸಿ ಆಗಿದ್ದ ಸ್ಥಿತಿ ಧಾರಾಳವಾಗಿ ಊಹಿಸಿಕೊಳ್ಳಬಹುದು. ಈ ವೃತ್ತದ ಒಂದೊಂದು ನುಡಿಯಲ್ಲೂ ಪದದಲ್ಲೂ ಆ ಅನುಭವವೇ ತುಂಬಿ ತುಳುಕುತ್ತದೆ. ಲಿಂಗಾರ್ಚನೆಯಿಂದೊದಗುವ ತಾದಾತ್ಮ್ಯಭಾವವನ್ನು ಕವಿ ಇದಕ್ಕಿಂತ ಉತ್ತಮವಾದ, ಪರಿಣಾಮಕಾರಿಯಾದ ಶಬ್ದಗಳಿಂದ ವ್ಯಕ್ತಪಡಿಸುವುದು ಸಾಧ್ಯವಿಲ್ಲ ಎನ್ನಬಹುದು. ಹಾಗೂ ಪದದ ಜೋಡಣೆ ಅಷ್ಟೇ ಸಹಜವಾಗಿ ನಿರಾಯಾಸವಾಗಿ ಮೂಡಿಬಂದಿವೆ.

## ವೃತ್ತ : ೬೫

ನೆನೆಯುತ್ತುಂ ಪೂಜಿಸುತ್ತುಂ ಚರಣದೊಳಲರುತ್ತುಂ ಮರಲ್ದೀಕ್ಷಿಸುತ್ತುಂ
ಮುನಿಯುತ್ತುಂ ಮುದ್ದಿಸುತ್ತುಂ ತೊನೆದು ತವಕಿಸುತ್ತುರ್ವಿತುಂ ಗರ್ವಿಸುತ್ತುಂ
ಜಿನುಗುತ್ತುಂ ಜೀವಿಸುತ್ತುಂ ಧಿಣಿಧಿಣಿರವದಿಂದಾಡುತುಂ ಪಾಡುತಿರ್ಪೊಂ-
ದನುರಾಗಂಮಾಡಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೬೫

ಅರ್ಥ : ನೆನೆಯುತ್ತಲೂ, ಪೂಜಿಸುತ್ತಲೂ, ಚರಣದೊಳ್= ಶಿವನ ಪಾದಕಮಲಗಳಲ್ಲಿ ಅಲರುತ್ತುಂ= ಬಿದ್ದುಒದ್ದಾಡುತ್ತಲೂ; ಮರಲ್ದು= ಅರಳಿ; ಹಿಗ್ಗಿ; ಈಕ್ಷಿಸುತ್ತುಂ= ನೋಡುತ್ತಲೂ; ಮುನಿಯುತ್ತಲೂ, ಮುದ್ದಿಸುತ್ತಲೂ, ತೊನೆದು= ತೂರಾಡಿ; ತವಕಿಸುತ್ತಲೂ; ಉರ್ವುತಂ= ಉಬ್ಬುತ್ತ; ಗರ್ವಿಸುತ್ತಲೂ; ಜಿನುಗುತ್ತುಂ= ತನ್ನಷ್ಟಕ್ಕೆತಾನೇ ಸ್ವಸಂತೋಷದಿಂದ ಮಾತನಾಡಿಕೊಳ್ಳುತ್ತಲೂ; ಜೀವಿಸುತ್ತುಂ= ಅವನಲ್ಲೇಜೀವಿಸುತ್ತಲೂ; ಧಿಣಿಧಿಣಿರವದಿಂದ= ಧಿಣಿಧಿಣಿ ಎಂಬ ಸದ್ದಿನಿಂದ; ಆಡುತುಂ= ಕುಣಿದಾಡುತ್ತಲೂ; ಪಾಡುತಿರ್ಪ= ಹಾಡುತ್ತಲೂ; ಇರ್ಪೊಂದು= ಇರುವ ಒಂದು; ಅನುರಾಗ= ಸಂತೋಷವನ್ನು ಮಾಡಿಕೊಟ್ಟು ಪಂಪಾಪುರದ ಒಡೆಯನಾದ ವಿರೂಪಾಕ್ಷಸ್ವಾಮಿಯೇ ನನ್ನನ್ನು ರಕ್ಷಿಸು.

ಭಾವಾರ್ಥ: ಸದಾ ದೇವರ ನಾಮ ಸ್ಮರಣೆಯಲ್ಲಿದ್ದು, ಅವನನ್ನೇ ಪೂಜಿಸುತ್ತಲೂ, ಅವನ ಪಾದಕಮಲಗಳಲ್ಲೇ ಬಿದ್ದು ದಿಂಡಾಡುತ್ತಲೂ,

ತ್ತಿ ಭಗವಂತನನ್ನು ಕಣ್ಣಾರೆ ಕಾಣುತ್ತಲೂ, ಅವನೊಡನೆ ಮುಸಿಸು ಕ್ರಾಶಿ, ಒನ್ಮೊಮ್ಮೆ ಮುದ್ದಿಸುತ್ತಲೂ, ಅತ್ತಿಂದ ಇತ್ತ, ಇತ್ತಿಂದ ಅತ್ತ ಓಗಾಡುತ್ತಲೂ, ಭಗವದ್ದರ್ಶನಕ್ಕಾಗಿ ಕಾತರದಿಂದ ಎದುರುನೋಡುತ್ತಲೂ ವನ ದರ್ಶನ ಲಾಭದಿಂದ ಉಬ್ಬಿಹೋಗುತ್ತ, ಹೆಮ್ಮೆಪಡುತ್ತಾ, ಸಮಾಧಿಸ್ಥ ಯಲ್ಲಿ ತನಗೆ ತಾನೇ ಏನೇನೋ ಮಾತನಾಡಿಕೊಳ್ಳುತ್ತಾ, ಅವನಲ್ಲೇ ತಾ ದಾತ್ಮ್ಯಹೊಂದಿ ಜೀವಿಸುತ್ತಲೂ, ಧಿಣಿಧಿಣಿ ಎಂದು ಕುಣಿದಾಡುತ್ತಲೂ, ಆಡುತ್ತಲೂ ಇರುವಂತೆ ಆನಂದವನ್ನು ಕೊಟ್ಟು ಕಾಪಾಡು ಪಂಪಾಪುರಪತಿ ಶ್ರೀ ವಿರೂಪಾಕ್ಷ ಸ್ವಾಮಿಯೇ.

ಟಿಪ್ಪಣಿ: ಮೂರನೆಯ ಚರಣದಲ್ಲಿ ಬರುವ "ಆಡು" ಎಂಬ ಪದ ತಮಿಳಿನಲ್ಲಿ ಈಗಲೂ ಕುಣಿ ಎಂಬ ಅರ್ಥದಲ್ಲಿ ಪ್ರಯೋಗದಲ್ಲಿದೆ. ಆದರೆ ಬರಬರುತ್ತ ಕನ್ನಡದಲ್ಲಿ ಆ ಮೂಲಾರ್ಥ ಮರೆಯಾಗುತ್ತ ಬಂದು ಈಗ, ಆಡು ಎಂದರೆ ಆಟವಾಡು ಎಂಬ ಒಂದೇ ಅರ್ಥದಲ್ಲಿ ಬಳಕೆಯಲ್ಲಿದೆ.

ಈ ವೃತ್ತದಲ್ಲಿ ಭಕ್ತ ಭಗವಂತನೊಡನೆ ಇಟ್ಟುಕೊಳ್ಳಬಹುದಾದ ವಾತ್ಸಲ್ಯ, ಸ್ನೇಹ, ದಾಸ್ಯ ಪ್ರೇಮ ಇತ್ಯಾದಿ ಭಾವಗಳನ್ನು ಸೂಕ್ಷ್ಮವಾಗಿಧ್ವನಿಪೂರ್ಣವಾಗಿ ನಿರೂಪಿಸಿದ್ದಾನೆ. ವಾತ್ಸಲ್ಯ ಭಾವದಲ್ಲಿ ಭಕ್ತಭಗವಂತನನ್ನು ತನ್ನ ಮಗನಂತೆ ನೋಡುತ್ತಾನೆ. ಆಗ ಭಕ್ತ ತನ್ನ ಇಷ್ಟದೈವವನ್ನು ತನ್ನ ಮಗನೆಂಬಂತೆ ಮುದ್ದಿಸುತ್ತಾನೆ. ಲಿಂಗಪತಿ ಶರಣಸತಿ ಎಂಬ ಭಾವದಲ್ಲಿ ಭಕ್ತ ಭಗವಂತನನ್ನು ತನ್ನ ಪತಿಯೋಪಾದಿಯಲ್ಲಿ ಕಾಣುತ್ತಾನೆ ಆ ಭಾವದಲ್ಲಿದ್ದಾಗ, ಎಲೆಮಿಸುಗಿದರೆ, ಗರಿಅಲುಗಿದರೆ, ಸದಸದ್ದಾದರೆ ತನ್ನ ಪತಿಯೇ (ಭಗವಂತನೇ) ಬಂದನೆಂಬ ತವಕ, ಕಾತರ, ವ್ಯಾಕುಲದಲ್ಲಿರುತ್ತಾನೆ. ಅಕ್ಕಮಹಾದೇವಿಯ ದಿವ್ಯ ಜೀವನ ಈ ಮಧುರಭಾವದ ಮಹಾಪ್ರತಿಮೆ.

'ಜೀವಿಸುತ್ತುಂ' ಎಂಬುದನ್ನು ಕೇವಲ ಬದುಕಿರು ಎಂಬರ್ಥದಲ್ಲಿ ಇಲ್ಲಿ ಕವಿ ಉಪಯೋಗಿಸಿರಲಾರ. ಜೀವಿಸುತ್ತುಂ ಎಂಬುದಕ್ಕೆ ಇನ್ನು ಆಳವಾದ ಉಚಿತವಾದ ಅರ್ಥ ಇರಲೇಬೇಕು. ಭಗವಂತನಲ್ಲಿಯೇ ಒಂದಾಗಿ,

ಲಿಂಗಾಂಗ ಸಾಮರಸ್ಯದಿಂದ, ಅವನಲ್ಲೇ ಆಗಿಹೋಗುವ ದಿವ್ಯ ಸ್ಥಿತಿಯನ್ನು ವರ್ಣಿಸುವುದಕ್ಕಾಗಿಯೇ: "ಜೀವಿಸುತ್ತುಂ" ಎಂದು ಉಪಯೋಗಿಸಿರಬೇಕು. ಅಷ್ಟುಮಾತ್ರವಲ್ಲದೆ ಅವನ ಧ್ಯಾನ, ಅವನ ಪೂಜೆಯಲ್ಲಿದ್ದ ಮಾತ್ರಕ್ಕೆ ಇಹಲೋಕದಿಂದ ನಿವೃತ್ತರಾಗಬೇಕಾಗಿಲ್ಲ ಎಂಬ ಆಳವಾದ ದಾರ್ಶನಿಕ ಅರ್ಥವೂ ಈ ವೃತ್ತದಲ್ಲಿ ಇರುವುದೆಂದು ತೋರುತ್ತದೆ. ಕವಿ ಈ ಅರ್ಥದಿಂದಲೇ ಈ ವೃತ್ತವನ್ನು ರಚಿಸಿದನೆಂದು ಹೇಳಲಾಗದಿದ್ದರೂ, ಅಂಥ ಅರ್ಥ ಹೊರಡುವುದಂತೂ ನಿಶ್ಚಯ.

## ವೃತ್ತ: ೬೬

ಎನಸುಂ ಮತ್ತನ್ಯದೈವಕ್ಕೆಱಗದ ಸಿರಮುಂ ನೇತ್ರಮುಂ ಶ್ರೋತ್ರಮುಂ ಮನ್
ಮನಮುಂ ಮದ್‌ಬುದ್ಧಿಯುಂ ಮತ್‌ಕರತಳಯುಗಮುಂ ಜಿಹ್ವೆಯುಂ ಘ್ರಾಣಮುಂ ಮಿ-
ಕ್ಕಿನ ಸರ್ವಾಂಗಂಗಳುಂ ನಿಮ್ಮಯ ದೆಸೆಗೆ ಕರಂ ಚೇಷ್ಟಿಸುತ್ತೊರ್ಮೆಯುಂ ನಿ-
ಲ್ಪಿನಮೆನ್ನೊಳ್ ಕೂಡಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ. ೬೬

ಅರ್ಥ: ಎನಸುಂ=ಎಷ್ಟೂ; ಮತ್ತನ್ಯದೈವಕ್ಕೆ=ಮತ್ತೆ ಅನ್ಯದೇವರಿಗೆ; ಎಱಗದ=ಬಾಗದ; ಶಿರಮುಂ=ತಲೆಯೂ; ನೇತ್ರಮುಂ=ಕಣ್ಣೂ; ಶ್ರೋತ್ರಮುಂ=ಕಿವಿಯೂ; ಮನ್=ನನ್ನ; ಮನಮುಂ=ಮನಸ್ಸೂ; ಮತ್=ನನ್ನ; ಬುದ್ಧಿಯುಂ=ಬುದ್ಧಿಯೂ; ಮತ್=ನನ್ನ; ಕರತಳಯುಗಮುಂ=ಅಂಗೈಗಳೂ; ಜಿಹ್ವೆಯುಂ=ನಾಲಿಗೆಯೂ; ಘ್ರಾಣಮುಂ=ಮೂಗೂ; ಮಿಕ್ಕಿನ=ಉಳಿದ; ಸರ್ವಾಂಗಂಗಳುಂ=ಸರ್ವ ಅಂಗಳಗಳೂ; ನಿಮ್ಮಯ=ನಿಮ್ಮ; ದೆಸೆಗೆ=ದಿಕ್ಕಿಗೇ; ಕರಂ=ಚೆನ್ನಾಗಿ ಚೇಷ್ಟಿಸುತ್ತ=ರವಿಸುತ್ತ; ಒರ್ಮೆಯುಂ=ಒಂದುಬಾರಿಯಾದರೂ; ನಿಲ್ಪಿನಂ=ನಿಂತುಕೊಳ್ಳುವಂತೆ; ಎನ್ನೊಳ್=ನನ್ನಲ್ಲಿ; ಕೂಡಿ=ಸಮರಸವಾಗಿ; ಪಂಪಾಪುರದ ಒಡೆಯನಾದ ವಿರೂಪಾಕ್ಷಸ್ವಾಮಿಯೇ ನನ್ನನ್ನು ರಕ್ಷಿಸು.

ಭಾವಾರ್ಥ: ಒಂದಿಷ್ಟಾದರೂ ಪರದೈವಕ್ಕೆ ಬಾಗದ ತಲೆಯೂ,

ಣ್ಣು, ಕಿವಿ, ಮೂಗು, ನಾಲಗೆ, ನನ್ನ ಬುದ್ಧಿ, ಮನಸ್ಸು, ಚಿತ್ತ, ಪ್ರಾಣ - ರ್ವ ಅಂಗಗಳೂ ನಿಮ್ಮ ಕಡೆಗೆ ಕೇಂದ್ರೀಕೃತವಾಗಿ ನಿಲ್ಲುವಂತೆ ಸಾಮರ ನವನ್ನು ಹೊಂದುವಂತೆ ಮಾಡಿ ರಕ್ಷಿಸು.

**ಟಿಪ್ಪಣಿ :** ಸಕಲ ಚರಾಚರಗಳಲ್ಲೂ ಭಗವಂತನಿದ್ದಾನೆಂಬುದೇನೋ ಜ. ಎಲ್ಲದರಲ್ಲೂ ಅವನೇ ಇದ್ದಾನೆ. ಅವನಲ್ಲಿಯೇ ಎಲ್ಲದೂ ಇದೆ ಂದಮೇಲೆ ಯಾವ ದೇವರನ್ನು ಯಾವ ರೂಪದಲ್ಲಿ ಪೂಜಿಸಿದರೂ ಅವನಿಗೇ ಲ್ಲುತ್ತದೆ. ಅದನ್ನೇ ಬಸವಣ್ಣನವರು :

'ದೇವನೊಬ್ಬ ನಾಮ ಹಲವು' ಎಂದು ಹೇಳುತ್ತಾರೆ. ಆದರೆ ಅದೇ ವಚನದ ಮುಂದಿನ ಪಾದದಲ್ಲಿ "ಪರಮ ಪತಿವ್ರತೆಗೆ ಗಂಡನೊಬ್ಬ; ಮತ್ತೊಂದ ಕ್ಕೆರಗಿದರೆ ಕಿವಿ ಮೂಗ ಕೊಯ್ವನು! ಹಲವು ದೈವದ ಎಂಜಲ ತಿಂದವರನೇ ನಂಬಿ ?" ಎಂದು ಕೇಳುತ್ತಾರೆ.

ಎಲ್ಲ ದೇವರೂ ಒಂದೇ ಎಂಬ ಉನ್ನತ ಸತ್ಯವನ್ನು ಸಾರಿದ ಮಹಾ ಅನುಭಾವಿ ಬಸವಣ್ಣನವರು 'ಅನ್ಯದೈವವೆಂಬುದು ಹಾದರಕಾಣಿರೋ !' ಎಂದು ಖಂಡಿಸಿದ್ದಾರೆ, ಹಾಗೆಯೇ, ಸರ್ವಮತಸಮನ್ವಯಾಚಾರ್ಯ, ಅವ ತಾರ ಶ್ರೇಷ್ಠರಾದ ಶ್ರೀರಾಮಕೃಷ್ಣ ಪರಮಹಂಸರೂ ಕೂಡ ಒಂದೇ ದೈವವ ನ್ನು ನಂಬಬೇಕು ಎನ್ನುತ್ತಾರೆ. ಅದು ಹೇಗೆಂಬುದನ್ನು ಅವರೇ ಒಂದು ದೃಷ್ಟಾಂತಕತೆಯಲ್ಲಿ ಹೀಗೆ ಹೇಳುತ್ತಾರೆ : ಗೃಹಿಣಿ ಮನೆಯಲ್ಲಿರುವ ಎಲ್ಲರ ನ್ನೂ ಪ್ರೀತಿಯಿಂದಲೇ ಕಾಣುತ್ತಾಳೆ. ಅವಳ ಮೈದುನರಲ್ಲಿ ಗೌರವ ಇಡು ತ್ತಾಳೆ. ಆದರೆ, ಗಂಡನಲ್ಲಿರುವ ಪ್ರೀತಿ ಮತ್ತಾರಲ್ಲಿಯೂ ಇರದ . ಹಾಗೆಯೇ ಭಕ್ತ, ಎಲ್ಲ ದೈವವನ್ನು ಗೌರವಿಸುತ್ತಾನೆ. ಆದರೆ ತನ್ನ ಇಷ್ಟದೈವದ ಸ್ಥಾನದಲ್ಲಿ ಮತ್ತಾವ ದೇವರೂ ನಿಲ್ಲಲಾರ. ಅದಕ್ಕೆ ಕಾರಣವೇನು ? ಎಲ್ಲ ರಲೂ ಅವನನ್ನೇ ನೋಡುವ ಭಕ್ತನಿಗೆ ಅನ್ಯದೈವದಬಗ್ಗೆ ಈ ಭಾವವೇಕೆ ? ಅದರೂ ಶ್ರೀರಾಮಕೃಷ್ಣರು ಸಮಂಜಸವಾದ ಕಾರಣವನ್ನು ಕೊಡುತ್ತಾರೆ. ಮಾಳಿಗೆಯನ್ನು ಹತ್ತಲು ಮೆಟ್ಟಲು, ಏಣಿ, ಹಗ್ಗ - ಮುಂತಾದ ಎಷ್ಟೋ ಸಾಧನಗಳಿವೆ. ಯಾವ ಸಾಧನದಿಂದಲಾದರೂ ಮಾಳಿಗೆ ಹತ್ತಬಹುದು.

ಆದರೆ, ಯಾವುದಾದರೂ ಒಂದು ಸಾಧನವನ್ನು ಮಾತ್ರ ಉಪಯೋಗಿಸಬೇಕು. ಒಂದು ಕಾಲು ಮೆಟ್ಟಲುಮೇಲೆ ಇನ್ನೊಂದು ಕಾಲು ಏಣಿಯ ಮೇಲೆ ಆಗಬಾರದು. ಹಾಗೆಯೇ ಯಾವುದಾದರೂ ಒಂದು ದೈವವನ್ನು ನೆರೆನಂಬಿ ಅವನ ಮೂಲಕವೇ ಸಾಕ್ಷಾತ್ಕರ ಮಾಡಿಕೊಳ್ಳಬೇಕು. ಇಲ್ಲದಿದ್ದರೆ, ಒಂದು ಕಾಲು ಮೆಟ್ಟಲುಮೇಲೆ ಇನ್ನೊಂದು ಏಣಿಯಮೇಲೆ ಇಟ್ಟವನು ಮಾಳಿಗೆಯನ್ನು ಹತ್ತುವುದಿಲ್ಲ; ಸುರಕ್ಷಿತವಾಗಿಯೂ ಇರಲಾರ. ಒಮ್ಮೊಮ್ಮೆ ಅಂಥ ಮಂಗಾಟದಲ್ಲಿ ತೊಡಗಿ ಮೈಮುರಿಯೆ ಬಿದ್ದರೂ ಬಿದ್ದಾನು. ಆದಕಾರಣ ಒಬ್ಬದೇವರನ್ನೇ ನಂಬಬೇಕು.

ಇಲ್ಲಿ ಹರಿಹರ ಮಹಾಕವಿ 'ಅನ್ಯದೈವಕ್ಕೆಱಗದ ಶಿರಮುಂ' ಎಂದಮಾತ್ರಕ್ಕೆ ಅವನು ಪರಮತ ದ್ವೇಷಿಯಾಗಿರಬೇಕು ಎಂಬಂಥ ಭ್ರಾಮಕ ಕಲ್ಪನೆಯನ್ನು ತಾಳಬಾರದು. ಅವನ ಹೆಸರೇ ಸೂಚಿಸುವಂತೆ ಹರಿಹರರಲ್ಲಿ ಐಕ್ಯತೆಯನ್ನು ಸಾಧಿಸಲು ಬಂದವನೇಹೊರತು ಛಿದ್ರಮಾಡಲು ಬಂದವನಲ್ಲ, ತನ್ನ ಹೆಸರಿನಲ್ಲಿಯೇ ಆ ಸಮದರ್ಶಿತ್ವ, ಸಮನ್ವಯತೆ, ಸಮಾನತೆಯನ್ನು ಸಾಧಿಸಿದ ವಿಶಾಲಮನೋಭಾವದವನು. ಆದಕಾರಣ ಈ ವೃತ್ತದ ಅವನು ನಿರೂಪಿಸಿದ ಸತ್ಯ, ದ್ರಷ್ಟಾರ ಕವಿಗಳ ಸಂಪ್ರದಾಯಕ್ಕೆ ಅನುಗುಣವಾಗಿಯೇಯಿದೆ.

ಹೀಗೆ ಪರದೈವಕ್ಕೆರಗದ ಸರ್ವ ಅವಯವಗಳಿಂದಲೂ ಅವನ ಧ್ಯಾನ ನಡೆಯಬೇಕು. ಅದರಿಂದ ತುರೀಯಾವಸ್ಥೆಯನ್ನು ಹೊಂದಬೇಕು ಎಂಬುದು ಕವಿಯ ಹಾರ್ದಿಕೆ.

ವೃತ್ತ : ೬೭

ಮುದದಿಂ ತ್ವತ್‌ಕೀರ್ತಿಯಂ ಕೇಳ್ವೆಡೆಯೊಳತುಳರೋಮಾಂಚದಿಂ ಸ್ವಂದಗದ್‌
ಗದದಿಂ ಸ್ವೇದಂಗಳಿಂ ಕಂಪನದಿನೊಲವಿನಿಂ ಲೀಲೆಯಿಂ ಲೋಭದಿಂ ಸನ್‌
ಮುದದಿಂ ಸಂತೋಷದಿಂ ಶಾಶ್ವತಸುಖ ಮುಖದಿಂ ಶೈವ ಸಾಮ್ರಾಜ್ಯಸಮ್ಯಕ್‌
ಪದವಾಂತಿರ್ಪಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ.

ಅರ್ಥ: ಮುದದಿಂ= ಆಸಕ್ತಿಯಿಂದ; ತತ್= ನಿನ್ನ; ಕೀರ್ತಿಯಂ= ಕೀರ್ತನೆಯನ್ನು; ಮಹಿಮೆಯನ್ನು; ಕೇಳ್ವ= ಕೇಳುವ; ಎಡೆಯೋಳ್= ಸಮಯದಲ್ಲಿ; ಅತುಳ =ವಿಶೇಷವಾದ; ರೋಮಾಂಚದಿಂ= ಮೈನವಿರೆದ್ದು; ಸ್ಪಂದದಿಂ= ಕಂಪನದಿಂದ; ಗದ್ಗದದಿಂ= ಗದ್ಗದದಿಂದ; ಸ್ವೇದಂಗಳಿಂ= ಮೈಬೆವರಿನಿಂದ; ಕಂಪನದಿಂ= ಮೈನಡುಗಿ; ಲೀಲೆಯಿಂ= ಲೀಲೆಯಿಂದ; ಲೋಭದಿಂ = ಅತಿಯಾದ ಆಸೆಯಿಂದ; ಸಮ್ಮುದದಿಂ = ಶ್ರೇಷ್ಠ ಸಂತೋಷದಿಂದ; ಸಂತೋಷದಿ= ಸಂತೋಷದಿಂದ; ಶಾಶ್ವತವಾದ= ಸುಖಮುಖದಿಂ= ಭಾವಮುಖದಲ್ಲಿ; ಶೈವಸಾಮ್ರಾಜ್ಯ= ಶಿವಭಕ್ತಿಯೆಂಬ ಸಾಮ್ರಾಜ್ಯ; ಸಮ್ಯಕ್‌ಪದಂ= ನಿಜವಾದ ಪದವಿಯು; ಅಂತು= ದೊರೆತು; ಇರ್ಪಂತೆ= ಪಂಪಾಪುರದ ಅರಸನಾದ ವಿರೂಪಾಕ್ಷಸ್ವಾಮಿಯೇ ನನ್ನನ್ನು ರಕ್ಷಿಸು.

ಭಾವಾರ್ಥ: ಸಂತೋಷದಿಂದ ನಿನ್ನ ಕೀರ್ತನೆಯನ್ನು ಕೇಳುವಾಗ ಅತ್ಯಂತ ಅಧಿಕವಾದ ರೋಮಾಂಚನದಿಂದಲೂ, ಸ್ಪಂದನದಿಂದಲೂ, ಗದ್ಗದದಿಂದಲೂ, ಬೆವರಿನಿಂದಲೂ, ಕಂಪನದಿಂದಲೂ, ಅತ್ಯಂತ ಸಂತೋಷದಿಂದ ಭಾವಮುಖದಲ್ಲಿರುವಂತಹ ಸಂದರ್ಭವನ್ನು ಕೊಟ್ಟು ರಕ್ಷಿಸು.

ವೃತ್ತ : ೬೮

ಹರನಾಮಂ ಕರ್ಣಮಂ ತಾಗಿದ ಸಮಯದೊಳಾನಂದದಿಂದುರ್ಕಿ ರೋಮಾಂ
ಕುರವೆದ್ದಶ್ರುಪ್ರವಾಹಂ ಗಳಗಳನಿಳಿತಂದಂಗವಲ್ಲಾಡಿ ಭಿನ್ನ
ಸ್ವರದಿಂದಂ ಗದ್ಗದಂ ಪುಟ್ಟುತೆ ಬೆಮರ್ವನಿಗಳ್ ಪೊಣ್ಮೆ ಸಲ್ಲೀಲೆಯಿಂದಿ-
ರ್ಪಿರವಂ ನೀನಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೬೮

ಅರ್ಥ : ಹರನಾಮಂ= ಹರನಾಮವು; ಕರ್ಣಮಂ= ಕಿವಿಯನ್ನು; ತಾಗಿದ =ಕೇಳಿದ; ಸಮಯದೋಳ್=ಸಮಯದಲ್ಲಿ; ಆನಂದದಿಂದ ಉರ್ಕಿ=ಉಬ್ಬಿಹೋಗಿ; ರೋಮಾಂಕುರ= ಮೈನವಿರೆದ್ದು; ಅಶ್ರು= ಆನಂದ ಬಾಷ್ಪಗಳ; ಪ್ರವಾಹಂ= ಪ್ರವಾಹವೇ ಗಳಗಳನೆ; ಇಳಿತಂದು= ಇಳಿದು; ಅಂಗಂ= ದೇಹವು; ಅಲ್ಲಾಡಿ=ಗಡಗಡನೆ ನಡುಗಿ; ಭಿನ್ನಸ್ವರದಿಂದಂ= ಬೇರೆಯ ಸ್ವರದಿಂದ ಗದ್ಗದಂ= ಗದ್ಗದವು;ಪುಟ್ಟುತೆ=

ಹುಟ್ಟುತ್ತ; ಪಿಪುರ್ವನಿಗಳಾ =ಬೆಮರು ಹನಿಗಳು; ಪೊಡ್ಕೆ= ಹೊಮ್ಮಲು; ಪರ್ಲೀಲೆ ಯಿಂದಿರ್ಪಿರವಂ= ಅವನ ಲೀಲೆಯಲ್ಲಿ ತಲ್ಲೀನನಾಗಿ; ಇರ್ಪ= ಇರುವ; ಇರವಂ= ಗತಿ ಯನ್ನು ನೀಂ ಕೊಟ್ಟು; ಪಂಪಾಪುರದ ಅರಸನೇ ನನ್ನನ್ನು ರಕ್ಷಿಸು.

**ಭಾವಾರ್ಥ :** ಶಿವನ ಹೆಸರು ಕಿವಿಗೆಬಿದ್ದಕೂಡಲೇ ಆನಂದದಿಂದ ಉಬ್ಬಿಹೋಗಿ, ಮೈನವಿರೆದ್ದು, ಆನಂದಬಾಷ್ಪವು ಕೋಡಿಯಂತೆ ಗಳಗಳನೆ ಇಳಿದು, ದೇಹವೆಲ್ಲ ಕಂಪಿಸಿ, ಗದ್ಗದಹುಟ್ಟಿ ಮೈಬೆವೆತು ಅವನ ಲೀಲೆಯಲ್ಲಿ ತಲ್ಲೀನವಾಗಿರುವಂಥ ಸ್ಥಿತಿಯನ್ನು ಕೊಟ್ಟು ನನ್ನನ್ನು ಕಾಪಾಡು ವಿರೂಪಾಕ್ಷ ಸ್ವಾಮಿಯೇ.

**ಟಿಪ್ಪಣಿ :** ಭಗವಂತನ ಹೆಸರು ಕಿವಿಗೆ ಬಿದ್ದಕೂಡಲೇ ಭಾವಸಮಾಧಿ ಹೊಂದುವಂಥ ಸ್ಥಿತಿಯನ್ನು ಮುಟ್ಟಬೇಕಾದರೆ ಸಾಧಕ ಬಹುದೂರ ಮುಂದುವರಿದವನಿರಬೇಕು. ಪ್ರಿಯೆ, ತನ್ನ ಪ್ರಿಯತಮನ ಹೆಸರನ್ನು ಕೇಳಿದರೆ ಸಾಕು ಸಂತೋಷಗೊಳ್ಳುವಳು. ತಾಯಿ, ತನ್ನ ಮಗನನ್ನು ನೆನೆಸಿಕೊಂಡರೆ ಸಾಕು ವಾತ್ಸಲ್ಯದ ಆನಂದದಲ್ಲಿ ಮೈಮರೆಯುವಳು. ಇವು ಎಲ್ಲರ ನಿತ್ಯಾನುಭವದಲ್ಲೂ ಇರುವ ನಿತ್ಯಸತ್ಯಗಳು. ಅಂಥ ವ್ಯಾಕುಲ, ಕಾತರ, ಹಾರೈಕೆ ಜೀವನದಲ್ಲಿ ನೆಲೆಸಬೇಕಾದರೆ ಒಂದೆರಡುಮೂರು ವರ್ಷಗಳ, ಕೊನೆಗೆ ಜನ್ಮಗಳ ಪ್ರಯತ್ನವಲ್ಲ. ಅದಕ್ಕೆ ಅನಂತಕಾಲದ, ಅನಂತ ಜನ್ಮಗಳ ಸಂಸ್ಕಾರಗಳ ಸಮಷ್ಟಿಯ ಫಲಬೆಂಬಲಕ್ಕಿರಬೇಕು. ಕಣ್ಣು ತಿರುಗಿಸಿದತ್ತ, ಕಿವಿನಿಮಿರಿದತ್ತ ಅವನೇ ಅವನು ಕಾಣಬೇಕು. ಹುಲ್ಲುಸಸಿಯು ಮಿಸುಕಿದಾಗ ಹಲ್ಲಿಯಬಾಲ ಅಲ್ಲಾಡಿದಾಗ, ಉಲ್ಕೆಲೆಯೇ ಎರಗಿದಾಗ — ಎಲ್ಲೆಲ್ಲಿಯೂ ಎಲ್ಲದರಲೂ ಅವನನ್ನೇ ಕಾಣುವಂಥ ಸ್ಥಿತಿ ಮುಟ್ಟಿದವನಿಗೆ ಭಗವನ್ನಾಮ ಶ್ರವಣ ಭಾವಸಮಾಧಿಗೆ ಕೊಂಡೊಯ್ದೀತು.

ವೃತ್ತ : ೬೯

ಮನದೊಳ್ ವಾಕ್ಯಂಗಳೊಳ್ ನೋಳ್ಪೆಡೆಗಳೊಳೊಲವಿಂ ಮಾಳ್ಪ ಕಜ್ಜಂಗ
ಳೊಳ್ ಕಾ

ನನದೊಳ್ ಕಾವುಂಗಳೊಳ್ ತಣ್ಣೆಳಲೊಳ್ ಬಿಸಿಲೊಳ್ ಜಾಗ್ರದೊಳ್
ಸ್ವಪ್ನದೊಳ್ ಮೂ-
ರ್ಚ್ಛನೆಯೊಳ್ ದಾರಿದ್ರ್ಯದೊಳ್ ಸಂಪದದೊಳ್ ದುಃಖದೊಳ್ ದೇವ
ನಿಮ್ಮಂ
ನೆನೆಯುತ್ತಿರ್ಪಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೬೯

ಅರ್ಥ: ಮನದೊಳ್ =ಮನದಲ್ಲಿ; ವಾಕ್ಯಂಗಳೊಳ್= ಮಾತಿನಲ್ಲಿ; ನೋಳ್ಪ =ನೋಡುವ; ಎಡೆಗಳೊಳ್= ಸ್ಥಾನಗಳಲ್ಲಿ; ಒಲವಿಂ= ಪ್ರೀತಿಯಿಂದ; ಮಾಳ್ಪ = ಮಾಡುವ; ಕಜ್ಜಂಗಳೊಳ್= ಕಾರ್ಯಗಳಲ್ಲಿ; ಕಾನನದೊಳ್=ಅರಣ್ಯದಲ್ಲಿ; ಕಾವುಂಗಳೊಳ್= ಮಾವಿನ ತೋಪುಗಳಲ್ಲಿ; ತಣ್ಣೆಳಲೊಳ್= ತಣ್ಣನೆಯ ನೆಳಲಿನಲ್ಲಿ; ಬಿಸಿಲೊಳ್= ಬಿಸಿಲಿನಲ್ಲಿ; ಜಾಗ್ರದೊಳ್= ಎಚ್ಚತ್ತಿರುವ ಸಮಯದಲ್ಲಿ; ಸ್ವಪ್ನದೊಳ್= ಸ್ವಪ್ನದಲ್ಲಿ; ಮೂರ್ಚ್ಛನೆಯೊಳ್= ಮೂರ್ಛೆಹೋದಾಗ; ದಾರಿದ್ರ್ಯದೊಳ್= ಬಡತನದಲ್ಲಿ; ಸಂಪದದೊಳ್= ಸಿರಿವಂತಿಕೆಯ ಕಾಲದಲ್ಲಿ; ಸುಖದೊಳ್; ದುಃಖದೊಳ್, ದೇವ ನಿಮ್ಮಂ= ನಿಮ್ಮನ್ನೇ ನೆನೆಯುತ್ತಿರ್ಪಂತೆ =ನೆನೆಯುತ್ತಿರುವಂತೆ ಪಂಪಾಪುರದರಸ ವಿರೂಪಾಕ್ಷ; ಎನ್ನಂ=ನನ್ನನ್ನು ರಕ್ಷಿಪ್ಪುದು= ರಕ್ಷಿಸುವುದು.

ಭಾವಾರ್ಥ: ಮನಸ್ಸಿನಲ್ಲಿ ಮಾತಿನಲ್ಲಿ; ನೋಡುವ ಎಲ್ಲೆಡೆಗಳಲ್ಲೂ ಪ್ರೀತಿಯಿಂದ ಮಾಡುವ ಪ್ರತಿಯೊಂದು ಕಾರ್ಯದಲ್ಲಿಯೂ, ಅಡವಿಯಲ್ಲಿ, ಮಾವಿನ ತೋಪಿನಲ್ಲಿ; ನೆರಳಿನಲ್ಲಿ, ಬಿಸಿಲಿನಲ್ಲಿ, ಎಚ್ಚರವಿದ್ದಾಗ, ಸ್ವಪ್ನದಲ್ಲಿಯೂ ಕೂಡ ಮೂರ್ಛೆಹೋದರೂ ಕೂಡ, ಬಡತನದಲ್ಲಿ ಸಿರಿತನದಲ್ಲಿ, ಸುಖದಲ್ಲಿ, ದುಃಖದಲ್ಲಿ - ಯಾವಾಗಲೂ ನಿನ್ನನ್ನೇ ನೆನೆಯುತ್ತಿರುವಂತೆ ನನ್ನನ್ನು ರಕ್ಷಿಸು ಪಂಪಾಪತಿಯೇ.

ಟಿಪ್ಪಣಿ : ಸಾಧಕ ತನ್ನ ಸಾಧನೆಯ ಮಾರ್ಗದಲ್ಲಿ ಮುಂದುವರಿದಂತೆಲ್ಲ 'ನಾನು' 'ನನ್ನದು' - ಎಂಬುದೆಲ್ಲ ತಾನಾಗಿಯೇ ಅಳಿಸಿ ಹೋಗುತ್ತದೆ. ಅವನು ಆಗ ಕಾಣುವುದೆಲ್ಲ ಅವನ ರೂಪು; ಅವನ ಲೀಲೆ, ತಾನಾಡುವ ಮಾತಿನಲ್ಲಿ, ತನ್ನ ಮನದಲ್ಲಿ ಅವನಲ್ಲದೆ ಮತ್ತೇನೂ ಸುಳಿಯಲಾರದು. ಎಲ್ಲಿ ನೋಡಿದರೆ ಅಲ್ಲಿ ಅವನೇ ಕಾಣುತ್ತಾನೆ. ಅವನು ಮಾಡುವ ಪ್ರತಿ

ಯೊಂದು ಕರ್ಮವೂ ಅವನೇ ಮಾಡಿಸುವ ಕ್ರಿಯೆ. ಆಗ ಸಾಧಕ ಕೇವಲ ಅವನ ಕೈಯ ಉಪಕರಣದಂತೆ ಆಗುತ್ತಾನೆ. ನನ್ನದೆಂಬುದೇನೂ ಉಳಿಯು ವುದೇ ಯಿಲ್ಲ. ಅವನು ಮಾಡಿಸಿದರೆ ಆಗಲಿ - ಎಂಬ ಸ್ಥಿತಿಯನ್ನು ಮುಟ್ಟಿ ರುತ್ತಾನೆ. ಅವನೇನು ಮಾಡಿದರೂ, ಅವನು ಮಾಡಿದಂತೆಯೇ ಅನಿಸುವು ದಿಲ್ಲ. ಮಾಡುವವನು ಅವನಲ್ಲವೇ ಅಲ್ಲ.

ಅಂಥ ಶರಣಾಗತ ಸ್ಥಿತಿಯನ್ನು ಪಡೆದವನು ಅರಣ್ಯದಲ್ಲಿಯಾಗಲಿ, ಉ ದ್ಯಾನದಲ್ಲಿಯಾಗಲಿ, ನೆರಳಿನಲ್ಲಿ ಆಗಲಿ, ಬಿಸಿಲಿನಲ್ಲಿ ಆಗಲಿ, ಎಚ್ಚತ್ತಿರಲಿ, ಮಲಗಿರಲಿ, ಮೂರ್ಛೆಹೋಗಿರಲಿ, ಬಡತನವಿರಲಿ, ಸಿರಿತನವಿರಲಿ, ಸುಖವಿರ ಲಿ ದುಃಖವಿರಲಿ - ಎಲ್ಲ ಸ್ಥಿತಿಯಲ್ಲೂ ಅವನ ಧ್ಯಾನವೇಧ್ಯಾನ. ಅವನ ಚಿಂತನೆಯೇ ಚಿಂತನೆ! ಅವನಲ್ಲದೆ ಮತ್ತೇನೂ ಅವನಿಗೆ ಕಾಣದು, ಕೇಳ ದು. ಸಿಡಿಲು ಹೊಡೆದರೂ ಹರಪ್ರಸಾದವೆಂದು ತಲೆಬಿಡ್ಡುತ್ತಾನೆ. ನಿಂತಲ್ಲಿ ಯೇ ಮೃತ್ಯುಬಂದು ಎತ್ತಿಕೊಂಡು ಹೋದರೂ ಶಿವಪ್ರಸಾದವೆಂದು ತಲೆಬಾ ಗುತ್ತಾನೆ! ಸಂಪತ್ತಿದೆ, ಸುಖವಿದೆ ಎಂದು ಅಂಥವನಿಗೆ ಸಂತೋಷವೂ ಯಿಲ್ಲ; ದುಃಖಬಂದರೂ ಅವನಿಗೆ ವ್ಯಥೆಯೂ ಇಲ್ಲ. ಈ ಸುಖದುಃಖಗ ಳೆರಡೂ ಅವನು ಕರುಣಿಸಿದ ಪ್ರಸಾದವೇ ಎಂಬ ಪ್ರಜ್ಞೆ ಅವನ ಉಸಿರಾಗಿ ರುತ್ತದೆ. ಅಲ್ಲದೆ ಆ ಸುಖದುಃಖ, ಈ ಆತ್ಮನಿಗಲ್ಲ ಎಂಬ ಸತ್ಯವೂ ಅನು ಭವವಾಗಿರಬೇಕು. ಆ ಸ್ಥಿತಿಯನ್ನು ಮುಟ್ಟಿದ ಸಿದ್ಧನು, ಸ್ಥಿತಪ್ರಜ್ಞನು ಭಗವನ್ನಾಮ ಸ್ಮರಣೆಯಲ್ಲೇ ಸಚ್ಚಿದಾನಂದ ಸುಖವನ್ನು ಅನುಭವಿಸುವನು; ಅನುಭಾವಿಯಾಗುವನು.

ಆದರೆ ಈ ಅನುಭವ ಒಂದು ದಿನ ಒದಗುವ ಸ್ಥಿತಿಯಲ್ಲ. ಅದಕ್ಕೆ ಅ ಭ್ಯಾಸ, ವೈರಾಗ್ಯ, ಅತ್ಯಗತ್ಯವಾಗಬೇಕು. "ಹಗಲಿರುಳೂ ಅಭ್ಯಾಸಮಾ ಡಿದ ವಿಷಯ ಅಂಟಿಕೊಳ್ಳದಿದ್ದೀತೆ? .... ಯಾವಾಗಲೂ ಪಾಪದಲ್ಲಿ ನಿರತ ನಾಗಿದ್ದರೂ. ಕೊನೆಗೆ ರಾಮನಾಮ ಬಾಯಲ್ಲಿ ಬಂದೇ ತೀರುವುದೆಂದು ಭ್ರಮಿಸಬೇಡಿ. ಚಿಕ್ಕಂದಿನಿಂದಲೂ ಸತತ ಅಭ್ಯಾಸನಡೆಸಿ .... ಲೇಶಮಾತ್ರ ವೂ ಕುಸಂಸ್ಕಾರ ಬೇಡ. ಕಣ್ಣು ಪವಿತ್ರವಾಗಿರಲಿ. ನಿಂದೆಗೆ ಕಿವಿ ಜೋಲ ದಿರಲಿ. ಒಳ್ಳೆಯ ಮಾತನ್ನೇ ನಾಲಗೆ ನುಡಿಯುತ್ತಿರಲಿ. ಇಂಥ ದಕ್ಷತೆ

ಯಿದ್ದರೆ ಕೊನೆಯ ಕ್ಷಣಕ್ಕೆ ಜಯಶೀಲರಾಗುವಿರಿ." ಎನ್ನುತ್ತಾರೆ ಆಚಾರ್ಯ ವಿನೋಬಾಜಿ. ಆದ್ದರಿಂದಲೇ ನಮ್ಮ ಮಾತು, ಕಣ್ಣು ಕಿವಿ ಎಲ್ಲವೂ ಅವನನ್ನೆ ಧ್ಯಾನಿಸುತ್ತಿರಬೇಕು. ಹೇಗೆ ನಮ್ಮ ದೇಹದ ನರನಾಳಗಳಲ್ಲಿ ರಕ್ತ ಸಂಚರಿಸುತ್ತಿದೆಯೋ, ಹಾಗೆಯೇ ನಮ್ಮ ಸ್ಥೂಲಶರೀರ, ಸೂಕ್ಷ್ಮಶರೀರ - ಪ್ರತಿಯೊಂದು ಅಂಗಾಂಗದಲ್ಲೂ ಅವನೇ ತುಂಬಿರಬೇಕು.

ದೇವರಕೋಣೆಯಲ್ಲಿದ್ದಾಗ, ಸುಖವಾಗಿ ಉಂಡುಟ್ಟು ಸಂತೋಷಪಡುವಾಗ, ಸಂಪತ್ತಿನ ಸುಪ್ಪತ್ತಿಗೆಯಲ್ಲಿ ಓಲಾಡುವಾಗ ಮಾತ್ರ ಅವನ ಧ್ಯಾನದಲ್ಲಿದ್ದರೆ ಸಾಲದು. ಹಗಲಾಗಲಿ, ರಾತ್ರಿಯಾಗಲಿ, ಎಚ್ಚರಿರಲಿ ಮಲಗಿರಲಿ, ಸಂಪತ್ತಿರಲಿ, ಇಲ್ಲದಿರಲಿ - ಎಲ್ಲ ಸ್ಥಿತಿಗಳಲ್ಲೂ ಅವನೇ ಗತಿ, ಮತಿ, ಶರಣು ! ಎಂದು ನಂಬಿ ನಡೆಯಬೇಕು. 'ಬಾಯಲ್ಲಿ' ಹರಿನಾಮ ಕೈಯಲ್ಲಿ ಪಂಚೆ ಎಂಬಂಥ ಮಿಥ್ಯಾಚಾರಿಯಾಗಬಾರದು. ಸುಖದುಃಖ, ಸಿರಿತನ ಬಡತನ ಎಲ್ಲದೂ ಅವನ ಪ್ರಸಾದವೇ ಎಂದು, ಶುದ್ಧಪ್ರಸಾದಿಯ ಸ್ಥಿತಿಗೆ ಸಾಧಕ ಬೆಳೆಯಬೇಕು.

ಇಂಥ ಕಡುನಿಷ್ಠೆಯಿಲ್ಲದವನು – ಇದ್ದರೂ ಒಂದೇ ಇರದಿದ್ದರೂ ಒಂದೇ - ಎಲ್ಲದೂ ಅವನ ಇಚ್ಛೆಯೇ, ಅವನ ಪ್ರಸಾದವೇ ಎಂದು ಬಾಯಲ್ಲಿ ಹೇಳುತ್ತಿದ್ದು ಎಲ್ಲದೂ ನನ್ನಿಂದಲೇ ನಡೆಯುತ್ತಿದೆ - ಎಂಬಂಥ ರೀತಿಯಲ್ಲಿ ನಡೆದರೆ ಅದಕ್ಕಿಂತ ದೊಡ್ಡ ಅಹಂಕಾರ, ಮಿಥ್ಯಾಚಾರ ಇನ್ನೊಂದು ಉಂಟೆ ?

ಕನ್ನಡದ ಇನ್ನೊಬ್ಬ ಅನುಭಾವಿ ಕವಿ ಮುಪ್ಪಿನ ಷಡಕ್ಷರಿದೇವ : "ಶಿವನ ಬಿಡದೆ ನೆನೆವ ಮನದ ಬಲುಮೆಯೆಂದಿಗಪ್ಪುದೋ ?" ಎಂದು ಒಂದು ಗೀತದಲ್ಲಿ ಹೀಗೆ ಹಾಡಿದ್ದಾನೆ :

ಶಿರವು ಹರಿದು ತುಂಡುಮಾಗಿ
ಧರಗೆ ಉರುಳಿ ಬಿದ್ದ ಬಳಿಕ
ಗುರುಪೆ, ಹರ, ನಮಶ್ಶಿವಾಯ ಎನಲಿ ನಾಲಗೆ
ನುರಳಿಯಾಜೆ ಕಡೆಯ ಮುಂಡ

ಹೊರಳಿ ಶಿವನಕಡೆಗೆ ಮುಗುಚಿ
ಕರವ ಮುಗಿವ ಮನದ ಬಲುಮೆಯೆಂದಿಗಪ್ಪುದೋ ।

x x x x

ನಡೆವ ನುಡಿವ ಕೊಡುವ ಉಂಬ
ಉಡುವ ತೊಡುವ ನಿದ್ರೆ ಪ್ರಾಣ
ಬಿಡುವ ಸಮಯದಲ್ಲಿ ಶಿವನ ನೆನೆವ ಮನವನು
ಮೃಡಷಡಕ್ಷರಾಂಕ ನಿಮ್ಮ
ಬಿಡದೆ ಬೇಡುತಿಹೆನು ನಾನು
ಕೆಡುವ ಸಕಲವಾದ ಪದಗಳನ್ನು ಒಲ್ಲೆನು ॥

ಇದೇ ಭಾವವನ್ನೇ ಭಕ್ತಿಭಂಡಾರಿ ಬಸಣ್ಣನವರು ತಮ್ಮ ಒಂದು ವಚನದಲ್ಲಿ :

"ಎಸಿಸೆನಿಸೆಂದರೆ ನಾ ಧೃತಿಗೆಡೆನಯ್ಯಾ. ಎಲುದೋರಿದರೆ, ನರಹರಿ ಹರೆ, ಕರುಳು ಕುಪ್ಪಳಿಸಿದರೆ. ನಾ ಧೃತಿಗೆಡೆನಯ್ಯಾ ಶಿರಹರಿದು ಅಟ್ಟೆ ನೆಲಕ್ಕೆ ಬಿದ್ದರೆ, ನಾಲಗೆ ಕೂಡಲಸಂಗಶರಣೆನು ತಿದ್ದಿತಯ್ಯ" ಎಂದಿದ್ದಾರೆ.

ಈ ವೃತ್ತದಲ್ಲಿ ಹರಿಹರಮಹಾಕವಿ ಶರಣಸ್ಥಲದ ಸ್ಥಿತಿಯನ್ನು ಬಣ್ಣಿಸುತ್ತಿದ್ದಾನೆ ಎಂದು ಇಟ್ಟುಕೊಳ್ಳಬಹುದು. ಯಾರು ಸಂಪೂರ್ಣ ಶರಣಾಗತನೋ, ಅವನೇ ಶರಣನು ! ಅಂಥ ಶರಣಾಗತ ಸ್ಥಿತಿಯನ್ನು ಕರುಣಿಸೆಂದು ಕವಿ ಮೊರೆಯಿಡುತ್ತಾನೆ.

## ವೃತ್ತ : ೨೦

ಭರದಿಂದಂ ಭೀತಿಯಿಂದಂ ಶರಣವಚನದಿಂದಾಸೆಯಿಂ ಭಾಷೆಯಿಂದ-
ಚ್ಚರಿಯಿಂ ಡಂಬಿಂ ವೃಥಾಳಾಪದಿನಸವಸದಿಂ ಕಾಮದಿಂ ಕೋಪದಿಂ ಕೂ-
ರ್ಪರಿ ದಾಕ್ಷಿಣ್ಯಂಗಳಿಂ ಖ್ಯಾತಿಯಿನನುದಿನವೆಲ್ಲಂದದಿಂ ದೇವ ನಿಮ್ಮಂ
ಸ್ಮರಿಯಿಪ್ಪಂತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೨೦

ಅರ್ಥ: ಭರದಿಂ= ತೀವ್ರವಾಗಿ; ಭೀತಿಯಿಂದಂ= ಭಯದಿಂದ; ಶರಣವಚನದಿಂದ; ಆಸೆಯಿಂ= ಆಸೆಯಿಂದ; ಭಾಷೆಯಿಂದ; ಅಚ್ಚರಿಯಿಂ= ಆಶ್ಚರ್ಯದಿಂದ ಡಂಬಿಂ= ಡಂಭದಿಂದ; ವೃಥಾ= ವ್ಯರ್ಥವಾಗಿ; ಆಳಾಪದಿಂ= ಆಲಾಪದಿಂದ; ಅವಸದಿಂ=ಅವಸರ; ತೀವ್ರತೆಯಿಂದ; ಕಾಮದಿಂದ, ಕೋಪದಿಂದ, ಕೂರ್ಪರ= ಪ್ರೀತಿಸುವವರ; ದಾಕ್ಷಿಣ್ಯಂಗಳಿಂ= ದಾಕ್ಷಿಣ್ಯದಿಂದ; ಖ್ಯಾತಿಯಿನನುದಿನವೆಲ್ಲಂದದಿಂ= ಖ್ಯಾತಿಯಿಂದ ಎಲ್ಲವಿಧದಿಂದಲೂ ಅನುದಿನವೂ, ದೇವ ನಿಮ್ಮಂ ಸ್ಮರಿಯಿಪ್ಪಂತಿತ್ತು= ನಿಮ್ಮನ್ನು ಸ್ಮರಿಸುವಂಥ ಸ್ಥಿತಿಯನ್ನು ಕೊಟ್ಟು ಪಂಪಾಪುರದ ಒಡೆಯನಾದ ವಿರೂಪಾಕ್ಷ ಸ್ವಾಮಿಯೇ ನನ್ನನ್ನು ರಕ್ಷಿಸು.

ಭಾವಾರ್ಥ: ಭರದಿಂದಲೂ, ಭೀತಿಯಿಂದಲೂ, ಶರಣವಚನದಿಂದಲೂ, ಆಸೆಯಿಂದಲೂ, ಭಾಷೆಯಿಂದಲೂ, ಡಂಬದಿಂದಲೂ, ಅವಸರದಿಂದಲೂ, ಕಾಮದಿಂದಲೂ ಕೋಪದಿಂದಲೂ, ಪ್ರೀತಿಗೆ ಪಾತ್ರರಾದವರ ಮುಖಮುಲಾಜಿಗಾಗಿಯೂ, - ಎಲ್ಲ ರೀತಿಯಲ್ಲೂ ನಿನ್ನನ್ನು ಸ್ಮರಿಸವಂತೆ ಮಾಡು ಪಂಪಾಪತಿಯೇ !

ಟಿಪ್ಪಣಿ: ಕಾಮ ಕ್ರೋಧ ಲೋಭ ಮುಂತಾದ ಅರಿಷಡ್ವರ್ಗಗಳು ಮನುಷ್ಯ ಹುಟ್ಟಿದಕೂಡಲೇ ಅವನಲ್ಲಿ ಬೀಡುಬಿಡುತ್ತವೆ. ಮನುಷ್ಯ ಬೆಳೆದಂತೆ, ಅವೂ ಬೆಳೆಯುತ್ತವೆ. ಅವನೂ ಬಲಿತಂತೆ, ಅವೂ ಬಲಿಯುತ್ತವೆ. ಇವುಗಳನ್ನು ಕಷ್ಟಪಟ್ಟು ಗೆಲ್ಲಬೇಕು. ಸಹಜ, ಒಂದುವೇಳೆ ಇವುಗಳು ನಮ್ಮಲ್ಲಿ ಉಳಿಯುವುದಾದರೆ, ಅವನ ಸ್ಮರಣೆಗೆ ಇವನ್ನು ತಿರುಗಿಸಬೇಕು. ಕೋಪಮಾಡುವುದಾದರೆ, ದೇವರೇ ನೀನು ನನಗೆ ಕಾಣಿಸಿಕೊಳ್ಳದಿದ್ದರೆ ಬಿಡೆನೆಂಬ ಮುನಿಸುಬರಲಿ. ಆದರೆ, ಸಾರಿಗೆ ಉಪ್ಪಿಗಿಲ್ಲ ಎಂದು ಕೋಪಗೊಳ್ಳಬೇಡ. ಹಾಗೆಯೇ ಕಾಮ ಮನುಷ್ಯನ ಬೆನ್ನಿಗೇ ಅಂಟಿಕೊಂಡು ಬಂದ ಮಹಾಭವ ಬಾಧೆ. ದೊಡ್ಡ ಉಪಾಧಿ. ಅದನ್ನು ಗೆಲ್ಲುವುದು ಕಷ್ಟ. ಆದರೆ ಒಂದು ಸುಲಭೋಪಾಯವಿದೆ. ಹೆಣ್ಣು ಹೆಂಡವನ್ನು ಕಾಮಿಸುವ ಬದಲು ಅವನನ್ನು ಕಾಮಿಸಲಿ ! ಜಾರೆ, ವಿಟಪುರುಷನನ್ನು ನಿರೀಕ್ಷಿಸುವಂಥ ಗಾಢವಾದ ಕಾಮದಿಂದ ಅವನನ್ನು ಸ್ಮರಿಸುವಂಥ ಸ್ಥಿತಿಯನ್ನು ಕೊಟ್ಟು ರಕ್ಷಿಸಲಿ.

## ವೃತ್ತ : ೭೧

ಚದುರಿಂದಂ ವೇಷಮಂ ತೋಱದೆ ನಿಜಗುಣಮಂ ಬೀಱದತ್ಯುಷ್ಣಮಂ ಹೇ
ಱದೆ ಡಂಬಿಂ ಸಾರದೆಂತುಂ ಶರಣವಚನಮಂ ಮೀಱದತ್ತಿತ್ತಲು ಜಾ
ಱದೆ ಬೇಱೊಂದಿಚ್ಛೆಯಿಂ ಕೀಱದೆ ಪರವಶದಿಂ ತಾಱದೀ ಭಕ್ತಿಯಂ ಮಾ-
ಱದೆ ಬಾಳ್ವಂತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೭೧

ಅರ್ಥ: ಚದುರಿಂದಂ= ಚಾತುರ್ಯದಿಂದ; ವೇಷಮಂ= ವೇಷವನ್ನು; ತೋಱದೆ= ತೋರಿಸಿಕೊಳ್ಳದೆ; ನಿಜಗುಣಮಂ=ತನ್ನ ಗುಣಗಳನ್ನು; ಬೀಱದೆ= ಬಣ್ಣಿಸಿ ಹೇಳದೆ; ಅತ್ಯುಷ್ಣಮಂ = ? ಹೇಱದೆ= ಪಸರಿಸದೆ; ಡಂಬಿಂ= ಅಹಂಕಾರದಿಂದ; ಸಾರದೆ= ಸಾರಿಹೇಳಿ ಪ್ರಶಂಸಿಸದೆ; ಶರಣವಚನಮಂ= ಭಕ್ತರ ಆಜ್ಞೆಯನ್ನು; ಮೀಱದೆ= ಉಲ್ಲಂಘಿಸದೆ; ಸನ್ಮಾರ್ಗದಿಂದ ಅತ್ತಿತ್ತಲುಂ =ಅತ್ತ ಇತ್ತ ಜಾರದಂತೆ; ಬೇಱೊಂದಿಚ್ಛೆಯಂ= ಭಗವದಿಚ್ಛೆಯುಲ್ಲದೆ ಮತ್ತೆ ಇನ್ನುಯಾವ ಇಚ್ಛೆಯನ್ನೂ; ಕೀಱದೆ= ಆಸೆಪಡದೆ; ಪರವಶದಿಂ= ಅನ್ಯವಿಷಯಗಳ ಆಸಕ್ತಿಯಿಂದ; ತಾಱದೆ= ಜಿತ್ತಿಹೋಗದೆ; ಈ ಭಕ್ತಿಯಂ= ಇಂಥ ಭಕ್ತಿಯನ್ನು ಮಾಱದೆ= ಮಾರಾಟಕಿಟ್ಟು ಪ್ರತಿಫಲವನ್ನು ಬಯಸಿ ಬಳಸದೆ; ಬಾಳ್ವಂತೆ=ಬಾಳುವಂತೆ; ಇತ್ತು= ಸ್ಥಿತಿಯನ್ನು ಕೊಟ್ಟು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ= ಎನ್ನನ್ನು ರಕ್ಷಿಸುವುದು.

ಭಾವಾರ್ಥ: ನಾನು ಮಹಾಭಕ್ತನೆಂದು ಬಾಹ್ಯಾಡಂಬರ ವೇಷಭೂಷಣಗಳಿಂದ ತೋರಿಸಿಕೊಳ್ಳದಂತೆಯೂ, ನಾನು ಶುದ್ಧಚಾರಿತ್ರನು ಸದ್ಗುಣಿಯೂ ಎಂದು ಆತ್ಮಪ್ರಶಂಸೆಮಾಡಿಕೊಳ್ಳದಂತೆಯೂ, ಅಹಂಕಾರದಿಂದ ನಾನು ಅಂಥವನು ಇಂಥವನು ಎಂದು ಜಂಭಕೊಚ್ಚಿಕೊಳ್ಳದೆಯೂ, ಭಕ್ತರ ನುಡಿಯನ್ನು ಮೀರಿ ನಡೆಯದಂತೆ, ಸನ್ಮಾರ್ಗ, ಸಜ್ಜನಿಕೆಯಿಂದ ಅತ್ತ ಇತ್ತ ಒಂದು ಕೂದಲೆಳೆಯಷ್ಟು ಚಲಿಸದೆ, ಭಗವದಿಚ್ಛೆಯಲ್ಲದೆ ಅನ್ಯಇಚ್ಛೆಯು, ಮನದಲ್ಲಿ ಆಸೆಯಾಗಿ ರೂಪುಗೊಳ್ಳದಂತೆಯೂ, ಪ್ರಾಪಂಚಿಕ ವಿಷಯಗಳಲ್ಲಿ ಮೈಮರೆತುಹೋಗಿ ನಿನ್ನ ನೆನಹನ್ನೇ ಮನದಲ್ಲಿ ತಾರದೆ ಜೀವನವನ್ನೇ ಶುಷ್ಕವನ್ನಾಗಿ ಮಾಡಿಕೊಳ್ಳದೆ, ಬಾಳುವಂಥ ಸ್ಥಿತಿಯನ್ನು ಕೊಟ್ಟು ನನ್ನನ್ನು ಕಾಪಾಡು ಪಂಪಾಪುರದ ಅರಸನಾದ ವಿರೂಪಾಕ್ಷಸ್ವಾಮಿಯೇ.

ಟಿಪ್ಪಣಿ: ಸಾಧಕ ಎಲ್ಲವನ್ನೂ ಬಿಟ್ಟಾನು. ಆದರೆ ಕೀರ್ತಿ; ಕಾಮದಿಂದ ಮುಕ್ತವಾಗುವುದು ಕನಿಕಷ್ಟ. ಕಾಮಿನೀ ಕಾಂಚನವನ್ನು ತ್ಯಜಿಸಿ ಕಾವಿಯನ್ನು ಧರಿಸಿ ಆಶ್ರಮವಾಸಿಯಾದರೂ ತನ್ನ ಹೆಸರು ಪತ್ರಿಕೆಯಲ್ಲಿ ಬರಬೇಕು; ನಾಲ್ಕುಜನ ಹೂವಮಾಲೆ ಅರ್ಪಿಸಬೇಕು; ನೂರುಜನ ಅಡ್ಡಪಲ್ಲಕ್ಕಿ ಉತ್ಸವವನ್ನು ನಡೆಸಬೇಕು ಎಂಬ ಮೋಹದಿಂದ ಮುಕ್ತನಾಗುವುದು ಕಷ್ಟ. ತಾನು ಮಹಾಭಕ್ತ, ಮಹಾಸಂನ್ಯಾಸಿ, ಮಹಾವಿರಕ್ತ, ಮಹಾಪೀಠಾಧಿಕಾರಿ ಮಹಾಜಗದ್ಗುರು, ಆಚಾರ್ಯವರ್ಯ – ಎಂಬುದನ್ನು ಲೋಕಕ್ಕೆ ಸಾರುವುದನ್ನು ಮಾತ್ರ ಸಂನ್ಯಾಸಿಬಿಡುವುದು ಕಷ್ಟ. ಆದರೆ, ಈ ಕೀರ್ತಿಕಾಮದಿಂದ ಮುಕ್ತನಾಗದ ಹೊರತು ಮುಕ್ತಿಯೆಂಬುದು ನಕ್ಷತ್ರದಷ್ಟೇ ದೂರ. ಆದ್ದರಿಂದ ಜಗತ್ತಿಗೆ ನಾನು ಯಾರು, ಎಂಥವನು ಎಂಬುದನ್ನು ತೋರಿಸಿಕೊಳ್ಳದೆ, ತನ್ನನ್ನೇ ತಾನು ಇಲ್ಲಗೈದು ಬಾಳುವುದೇ ನಿಜವಾದ ಮುಕ್ತಾತ್ಮನ ಲಕ್ಷಣ. ಅದು ಸಿದ್ಧಿಸದ ಹೊರತು, ಏನನ್ನೂ ಬಿಟ್ಟರೂ, ಏನೂ ಬಿಟ್ಟಂತೆಯಲ್ಲ.

ಹಾಗೆಯೇ ಆತ್ಮ ಪ್ರಶಂಸೆ ಎಂಬುದೊಂದು ಮಹಾವ್ಯಾಧಿ. ಎಂತೆಂಥ ಮಹಾತ್ಮರೆನ್ನುವವರನ್ನೂ ಬಿಟ್ಟಿದಲ್ಲ ಈ ವ್ಯಾಧಿ. ಕಾಮ ಕ್ರೋಧ ಮುಂತಾದ ಅರಿಷಡ್ವರ್ಗಗಳು ಬಹಿರಂಗ ಶತ್ರುಗಳು. ಸಾಧನಾಮಾರ್ಗದಲ್ಲಿ ಮುಂದುವರಿದಾಗ, ಅವು ತಮ್ಮ ನೈಜವೇಷದಲ್ಲಿಯೇ ಜೀವನನ್ನು ಎದುರಿಸಲಾರವು. ಮುಂದುವರಿದ ಆತ್ಮ ಕಾಮಕ್ರೋಧ ಮುಂತಾದವುಗಳನ್ನು ಬೇಗನೆ ಗುರುತಿಸಿ ಅವುಗಳನ್ನು ದಮನಮಾಡಲು ಹವಣಿಸುತ್ತದೆ. ಬಹುಮಟ್ಟಿಗೆ ಅದರಲ್ಲಿ ಯಶಸ್ವಿಯಾಗುತ್ತದೆ. ಆತ್ಮ, ಹುಷಾರಿ ಯಾದುದನ್ನು ನೋಡಿ ಈ ಶತ್ರುಗಳು ಛದ್ಮವೇಷದಲ್ಲಿ ಲಗ್ಗೆಹಾಕುತ್ತವೆ. ಆಗ, ಆತ್ಮ ಎಷ್ಟೇಪ್ರಗತಿಪಥದಲ್ಲಿದ್ದರೂ, ಅವುಗಳ ನೈಜಸ್ವರೂಪವನ್ನು ಗುರುತಿಸಲಾರದೆ, ಶತ್ರುಗಳ ಕೈಗೆ ಸೆರೆಸಿಗುತ್ತಾನೆ! ಆದರೆ, ನಿಜವಾಗಿಯೂ ಆತ್ಮೋನ್ನತಿಯನ್ನು ಸಾಧಿಸಬೇಕೆಂಬ ಸಾಧಕ ಆತ್ಮ ಪ್ರಶಂಸೆಯ ಈ ಮೋಹದಿಂದಲೂ ಮುಕ್ತನಾಗಲೇಬೇಕು.

ಮುಂದುವರಿದ ಸಾಧಕನ ಒಂದು ಮುಖ್ಯಲಕ್ಷಣ: ತನ್ನ ಇಚ್ಛೆಯನ್ನು ಅವನ ಇಚ್ಛೆಯಲ್ಲಿ ಲಯಗೊಳಿಸುವುದೇ ಆಗಿದೆ. ಎಲ್ಲಿಯವರೆಗೆ ತನ್ನಿಚ್ಛೆ

ಎಂಬುದಿದೆಯೊ, ಅಲ್ಲಿಯವರೆಗೆ ಎಂಥ ಸಿದ್ಧಿ ಪಡೆದರೂ ಅದೆಲ್ಲವೂ ವ್ಯರ್ಥವೇ ಸರಿ. ಸಾಧನೆಯ ಮಾರ್ಗದಲ್ಲಿ ಮುಂದುವರಿದಂತೆಲ್ಲ ಅನೇಕ ಸಿದ್ಧಿಗಳು ದೊರೆಯುತ್ತವೆ. ಆದರೆ, ಅವುಗಳನ್ನು ತನ್ನ ಇಚ್ಛಾಪೂರ್ವಕೆಗೆ ಅಣಿಗೊಳಿಸದೆ ಅವನ ಇಚ್ಛೆಯ ಉಪಕರಣವನ್ನಾಗಿಸಬೇಕು. ಆ ಸ್ಥಿತಿಯನ್ನು ಪಡೆದವನು ತನಗಾಗಿ ಆಗಲಿ, ಅನ್ಯರಿಗಾಗಿ ಆಗಲಿ ಹೀಗಾಗಬೇಕು ಎಂದು ಭಗವಂತನನ್ನೆಂದಿಗೂ ಪ್ರಾರ್ಥಿಸಲಾರ. ಅವನು ಏನಿದ್ದರೂ : ಅವನಿಚ್ಛೆಯಿದ್ದಂತೆ ಆಗಲಿ ಎಂದಾನೆಯೇ ಹೊರತು, ಬೇರೆ ಇನ್ನು ಏನನ್ನೂ ಪ್ರಾರ್ಥಿಸಲಾರ.

ಭಕ್ತಿಯನ್ನು ಮಾರಾಟಕ್ಕಿಡುವ ಭಕ್ತರನ್ನು ನಿತ್ಯವೂ ಕಾಣುತ್ತೇವೆ. ಅಂಥವರು 'ಅರ್ಥಾರ್ಥಿ'ಗಳು ಎಂದು ಭಾವಿಸಬಹುದು. 'ದೇವರೇ ಧನಕನಕ ವಸ್ತುವಾಹನ ಸಕಲೈಶ್ವರ್ಯ, ಸತಿಸುತರನ್ನು ಕೊಡು' ಎಂದು ಪ್ರಾರ್ಥಿಸುವವನು ತನ್ನ ಭಕ್ತಿಯನ್ನು ಮಾರಾಟಕ್ಕಿಟ್ಟಂತೆಯೇ. ದೇವರು ಯಾರು ಏನನ್ನು ಕೇಳಿದರೂ ಕೊಡುತ್ತಾನೆ. ಅದರಲ್ಲೂ ಭಕ್ತಪ್ರಿಯನಾದ ಭಗವಂತನು, ಭಕ್ತರು ಕೇಳಿದ ವರ ಕೊಡಲಾರನೇ ? ಕೊಟ್ಟೇಕೊಡುತ್ತಾನೆ. ಆದರೆ ಕೇಳುವ ನಾವು ಜಾಣರಾಗಬೇಕು. ಅವನಿಂದ ಬೇಡಲೇಬೇಕಾದರೆ : ಭಕ್ತಿ ಜ್ಞಾನ ವೈರಾಗ್ಯವನ್ನು ಬೇಡಿ ಪಡೆಯಬಹುದು.

## ವೃತ್ತ: ೭೨

ಇದನೊಲ್ವೆಂ ದೈನ್ಯಮಂ ಸೂಡದೆ ಪರವಧುವಂ ನೋಡದೇನೊಂದುಮಂ ಬೇ-
ಡದೆಯಾರಂ ಮಿಥ್ಯೆಯಿಂ ಕಾಡದೆ ಪರಸುಖದೊಳ್ ಬಾಡದು ದ್ರೇಕದೊಳ್ ಕೋ-
ಡದೆ ಪಾಪಾಂಭೋಧಿಯೊಳ್ ಕೂಡದೆ ಚಪಳತೆಯಂ ನೀಡದತ್ಯಾಶೆಯಂ ಮಾ-
ಡದೆ ಬಾಳ್ವಂತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ. ೭೨

ಅರ್ಥ : ಇದಂ = ಇದನ್ನು ಒಲ್ವೆಂ = ಒಲಿಯುವೆನು; ಪ್ರೀತಿಸುವೆನು; ದೈನ್ಯಮಂ = ದೀನವಸ್ಥೆಯನ್ನು; ಸೂಡದೆ = ತಾಳದೆ; ಪರವಧುವಂ = ಪರಸ್ತ್ರೀಯನು

ನೋಡದೆ; ಏನೊಂದುವಂ= ಏನೊಂದನ್ನೂ ಬೇಡದೆ; ಯಾರಂ=ಯಾರನ್ನು; ನಿಚ್ಚೈಯಿಂ= ನಿಷ್ಕಾರಣವಾಗಿ; ಸುಳ್ಳುಸುಳ್ಳೀ ಕಾಡದೆ= ತೊಂದರೆಕೊಡದೆ; ಪರಸುಖದೋಳ್= ಪರರಸುಖವನ್ನು ಕಂಡು; ಬಾಡದೆ= ಕುಂದಿ ಕುಗ್ಗಿಬಾಡಿಹೋಗದೆ; ಉದ್ರೇಕದೊಳ್= ಉದ್ರೇಕದಲ್ಲಿ ಕೋಡದೆ= ಪಡುಗದೆ; ಪಾಪಂಭೋಧಿಯೊಳ್= ಪಾಪವೆಂಬ ಸಮುದ್ರದಲ್ಲಿ ಕೂಪದೆ=ಬೀಳದೆ; ಚಪಳತೆಯಂ=ಚಂಚಲತೆಯನ್ನು ನೀಡದೆ; ಅತ್ಯಾಶೆಯಂ=ಅತಿಯಾದ ಆಸೆಯನ್ನು ಮಾಡದೆ; ಬಾಳ್ವಂತೆ=ಬಾಳುವ ರೀತಿಯಲ್ಲಿ ಇತ್ತು; ಮಾಡಿ ಪಂಪಾಪುರದ ಅರಸನಾದ ವಿರೂಪಾಕ್ಷನೇ ನನ್ನನ್ನು ರಕ್ಷಿಸು.

ಭಾವಾರ್ಥ: ನಾನು ಇದೊಂದನ್ನು ಪ್ರೀತಿಸಿರುತ್ತೇನೆ ಯಾವುದನ್ನು ಎಂದರೆ, ದೀನಸ್ಥಿತಿಯನ್ನು ತಾಳುವ ಗತಿ ನನಗೆಬೇಡ. ಪರಸ್ತ್ರೀ ದರ್ಶನವೇ ಆಗಕೂಡದು. ಯಾರನ್ನೂ - ಸಾಕ್ಷಾತ್ ದೇವರನ್ನೂ - ಏನನ್ನೂ ಕೇಳದೆ, ಯಾರನ್ನೂ ಸುಳ್ಳುಸುಳ್ಳೀ ಕಾಡದೆ, ಪರರ ಸುಖಕ್ಕೆ ಅಸೂಯೆಗೊಳ್ಳುತ್ತಾ ಉದ್ರೇಕದಿಂದ ನಡುಗಿ ಹೋಗದಂತೆ, ಪಾಪವೆಂಬ ಸಮುದ್ರದಲ್ಲಿ ಬೀಳದಂತೆ ಚಂಚಲಬುದ್ಧಿಯು ಬಾರದೆ, ಅತ್ಯಾಸೆಯನ್ನು ಮಾಡದಂತೆ ಇರುವ ಸಮಚಿತ್ತವನ್ನು ಕೊಟ್ಟು ಪಂಪಾಪತಿ ವಿರೂಪಾಕ್ಷನು ರಕ್ಷಿಸಲಿ.

ಟಿಪ್ಪಣಿ: ಹಿಂದಿನ ವೃತ್ತದಲ್ಲಿ ಸಾಧಕನು ಏನಾಗಿರಲು ಅಪೇಕ್ಷಿಸುವುದಿಲ್ಲವೋ ಅದನ್ನು ಕವಿ ಹೇಳಿದ್ದಾನೆ. ಇದರಲ್ಲಿ ತಾನು ಏನನ್ನು ಪ್ರೀತಿಸುತ್ತಾನೋ ಅದನ್ನು ಹೇಳುತ್ತಾನೆ. ಇದನೊಲ್ವೆಂ - ಎಂಬ ಮಾತಿನಿಂದ ವೃತ್ತ ಪ್ರಾರಂಭವಾಗುವ ಈ ವೃತ್ತದ ರಚನೆ ಎಷ್ಟು ಚಮತ್ಕಾರವಾಗಿದೆ.

ವೃತ್ತ: ೭೩

ಸತಿಕಾರುಣ್ಯಂ ಕುಮಾರಂ ಮತಿ ಸಖನುರು ಸತ್ಯಂ ಪ್ರಧಾನಂ ವಿವೇಕಂ
ಸ್ತುತಿ ಭಂಡಾರಂ ಸಧರ್ಮ ಕರಿತುರಗರಥಾಖ್ಯಂ ನಿರಾಶಾ-ಸ್ವದೇಶಂ
ಸತತಂ ತಾನಾಗಿ ಶಾಂತಿಸ್ಥಲದೊಳೆಸೆವ ಸದ್ಭಕ್ತಿ ಸಪ್ತಾಂಗ ರಾಜ್ಯ-
ಸ್ಥಿತನಾಗಿರ್ಪಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೭೩

ಅರ್ಥ: ಸತಿ=ಹೆಂಡತಿ; ಕಾರುಣ್ಯಂ= ಕರುಣೆ; ಕುಮಾರಂ= ಮಗನು;

ಮತಿ=ಸನ್ಮತಿ; ಸಖನ್= ಸ್ನೇಹಿತನು; ಉರುಸತ್ಯಂ =ಶ್ರೇಷ್ಠವಾದ ಸತ್ಯವು; ಪ್ರಧಾನಂ= ಪ್ರಧಾನಿಯು; ವಿವೇಕಂ= ವಿವೇಕವು; ಸ್ತುತಿ= ದೇವರಧ್ಯಾನವೇ; ಕರಿತುರಗರಥಾಖ್ಯಂ =ಆನೆ ಕುದುರೆ ರಥ ಕಾಲುಬಲವು; ನಿರಾಶಾ= ನಿರಾಸೆಯೆಂಬುದೇ; ಸ್ವದೇಶಂ= ಸ್ವದೇಶವು; ಸತತಂ=ಯಾವಾಗಲೂ; ಆವಾಗಿ; ಶಾಂತಿ ಸ್ಥಳದೊಳ್= ಶಾಂತಿ ಸ್ಥಳದಲ್ಲಿ ಎಸೆವ= ಪ್ರಕಾಶಿಸುವ; ಸದ್ಭಕ್ತಿ=ಭಕ್ತಿಯೆಂಬ ಸಪ್ತಾಂಗರಾಜ್ಯ ಸ್ಥಿತನಾಗಿ ರ್ಪಂತೆ=ರಾಜ್ಯಕ್ಕೆಬೇಕಾದ ಸಪ್ತ ಅಂಗಗಳಿಂದ ಒಡಗೂಡಿದವನಾಗಿ ಇರುವಂತೆ ಪಂಪಾಪುರವರಸ ವಿರೂಪಾಕ್ಷಸ್ವಾಮಿಯೇ ನನ್ನನ್ನು ರಕ್ಷಿಸುವುದು.

**ಭಾವಾರ್ಥ:** ರಾಜನಾದವನಿಗೆ ಸತಿ ಸುತ ಸಖ ಪ್ರಧಾನಿ ಭಂಡಾರ ಚತುರಬಲ ಸ್ವದೇಶ - ಎಂಬ ಏಳು ಅಂಗಗಳು ಅನಿವಾರ್ಯ. ಅವನ್ನು ರಾಜ್ಯದ ಸಪ್ತಾಂಗಗಳೆಂದು ಕರೆಯುತ್ತಾರೆ. ಭಕ್ತನಾದವನೂ ಸಪ್ತಾಂಗಗಳಿಂದ ಒಡಗೂಡಿರುತ್ತಾನೆ. ಭಕ್ತನಿಗೆ, ತನ್ನ ಕರುಣೆಯೇ ಸತಿ; ಸನ್ಮತಿಯೇ ಸುತ. ಸತ್ಯವೇ ಸ್ನೇಹಿತ; ವಿವೇಕವೇ ಪ್ರಧಾನಿ; ದೈವಧ್ಯಾನವೇ ಪರಮಾತ್ಮನ ಕೀರ್ತನೆಯೇ ಭಕ್ತನ ಭಂಡಾರ, ಬೊಕ್ಕಸ; ಸುಧರ್ಮವೇ ಅವನ ಚತುರಂಗಬಲಸೇನೆ. ನಿರಾಸೆಯೆಂಬುದೇ ಅವನ ಸ್ವದೇಶ. ಇಂಥ ಸಪ್ತಾಂಗಗಳಿಂದ ಒಡಗೂಡಿದವನಾಗಿ ಶಾಂತಿಯೆಂಬ ಅರಮನೆಯಲ್ಲಿ ಸದ್ಭಕ್ತಿ ಸಪ್ತಾಂಗ ರಾಜ್ಯಕ್ಕೆ ಅಧಿಪತಿಯಾಗಿರುವಂಥ ಸ್ಥಿತಿಯನ್ನು ಕೊಟ್ಟು ನನ್ನನ್ನು ಕಾಪಾಡು ಪಂಪಾಪತಿ ವಿರೂಪಾಕ್ಷ ಸ್ವಾಮಿಯೇ.

**ಟಿಪ್ಪಣಿ:** ರಾಜನಾದವನ ಸುಖಕ್ಕೆ ಸತಿಸುತ ಸಖ ಪ್ರಧಾನಿ ಬೊಕ್ಕಸ, ಚತುರಂಗಬಲಸೇನೆ, ಸ್ವದೇಶ ಹೇಗೆ ಅನಿವಾರ್ಯವೋ ಹಾಗೆ ಭಕ್ತನಿಗೂ ಸಪ್ತಾಂಗಗಳು ಬೇಕು. ಕಾರುಣ್ಯ, ಸನ್ಮತಿ, ಸಖ ವಿವೇಕ, ಭಗವದ್ಧ್ಯಾನ,ಸುಧರ್ಮ, ನಿರಾಸೆ, ಎಂಬುವವೇ ಸಪ್ತಾಂಗಗಳು. ಕವಿಯ ಜಾಣ್ಮೆ ಅವನಿಲ್ಲ ಕೊಟ್ಟ ಒಂದೊಂದು ಹೋಲಿಕೆಯಿಂದಲೂ ವ್ಯಕ್ತವಾಗುತ್ತದೆ. ಸತಿಯನ್ನು ಕರುಣೆಗೆ ಯಾಕೆ ಹೋಲಿಸಬೇಕಾಗಿತ್ತು ? ಪ್ರಧಾನಿಯನ್ನು ವಿವೇಕಕ್ಕೆ ಏಕೆ ಹೋಲಿಸಬೇಕಾಗಿತ್ತು? ವಿವೇಕವೆಂಬ ಹೆಂಡತಿ, ಕರುಣೆ ಎಂಬ ಪ್ರಧಾನಿ - ಎಂದಿದ್ದರೆ ಆಗುತ್ತಿದ್ದ ಅಸಮಂಜಸವೇನು ? ದೊರೆಗೆ ಪ್ರಧಾನಿ ಬೇಕಾ

ಡುದು ಅವನು ಸಂದರ್ಭಕ್ಕೆ ಸರಿಯಾಗಿ ಕೊಡುವ ಬುದ್ಧಿವಾದಕ್ಕಾಗಿ; ಮಾಡುವ ಸಲಹೆ ಸೂಚನೆಗಳಿಗಾಗಿ. ಮಂತ್ರಿಯಾದವನು ರಾಜನ ಮೆದುಳಿದ್ದಂತೆ ಮಂತ್ರಿಯು ಕೆಲಸ ಒಳ್ಳೆಯದು ಕೆಟ್ಟದ್ದು ಎಂಬುದನ್ನು ದೊರೆಗೆ ತೋರಿಸುವುದು. ಅಂತೆಯೇ ಆಧ್ಯಾತ್ಮಿಕ ರಾಜ್ಯದ ದೊರೆಯಾದ ಭಕ್ತನಿಗೆ ವಿವೇಕವೆಂಬ ಪ್ರಧಾನಿಯ ಸಹಾಯ ವಿಲ್ಲದಿದ್ದರೆ ಮುಗ್ಗರಿಸಿ ಬಿದ್ದು ಹೋದಾನು. ದೊರೆಗೆ ಬೊಕ್ಕಸವಿಲ್ಲದಿದ್ದರೆ ಒಂದುದಿನವೂ ರಾಜ್ಯ ನಡೆಯಲಾಗದು. ಹಾಗೆಯೇ ಭಕ್ತನಿಗೆ ಭಗವಂತನ ಸ್ತುತಿಯಿಲ್ಲದೆ ಒಂದು ಅರೆಗಳಿಗೆಯೂ ನಡೆಯಲಾರದು. ಭಕ್ತನ ಸಾಮ್ರಾಜ್ಯದ ಆಧಾರವೇ ಸ್ತುತಿ. ಅವನ ಶಕ್ತಿಗೆಲ್ಲ ಅದೇ ಮೂಲ. ದೊರೆಯ ರಾಜ್ಯ ಕ್ಷೇಮ ಅವನ ಚತುರಂಗ ಬಲದಮೇಲೆ ನಿಂತಿದೆ. ಹಾಗೆಯೇ ಭಕ್ತನ ಕ್ಷೇಮ ಅವನು ಅನುಸರಿಸುವ ಧರ್ಮವನ್ನವಲಂಬಿಸಿದೆ. ಅವನು ಅಧರ್ಮಿಯಾದರೆ ಏನು ಜಪ ತಪ ಯಜ್ಞಯಾಗ ಹೋಮಗಳನ್ನು ಮಾಡಿದರೂ ವ್ಯರ್ಥವೇ. ಅಂತೆಯೇ ದೊರೆಯಾದವನಿಗೆ ಏನಿದ್ದರೂ, ಚತುರಂಗ ಸೇನೆಯಿಲ್ಲದಿದ್ದರೆ ಎಲ್ಲದೂ ವ್ಯರ್ಥವೇ ! ಹೀಗೆ ಕವಿ, ಯಾವುದನ್ನು ಯಾವುದಕ್ಕೆ ಹೋಲಿಸಬೇಕೆಂಬ ವಿಚಾರದಲ್ಲಿ ತುಂಬ ಯೋಚನೆಮಾಡಿ ಬರೆದಿರಬೇಕೆಂದು ಹೇಳುವ ಮಾತಲ್ಲದಿದ್ದರೂ, ಹೇಗೋ ಪರೋಕ್ಷ ಜ್ಞಾನದಿಂದ ಹೀಗೆ ಬರೆದಿರಬಹುದು. ಹೇಗೆ ಭಾವಿಸಿದರೂ ಈ ಕವಿಯ ಮಹತ್ತು ಮಹೋನ್ನತವಾಗಿ ಪ್ರಜ್ವಲಿಸುವುದು.

## ವೃತ್ತ : ೭೪

ಗುರುವಂ ನಂಬಿರ್ದು ಮತ್ತಾ ಗುರುಕರುಣದೆ ಪಂಚಾಕ್ಷರೀ ಮಂತ್ರಮಂ ತಾ
ಳ್ದು ರಹಸ್ಯಂ ಭಕ್ತಿಯಿಂದಂ ಜಪಮನೆಣಿಸಿ ಗುರ್ವಾಜ್ಞೆಯಂ ಮೀಱದತ್ಯಾ-
ದರದಿಂದಂ ನೆತ್ತಿಯೊಳ್ ಪೊತ್ತು ಸಮಸುಖದಿಂ ಬಾಳ್ವ ಭೃತ್ಯತ್ವಮಂ ಮಚ್
ಗುರುವೇ ನೀನಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೭೪

ಅರ್ಥ: ಗುರುವಂ= ಗುರುವನ್ನು; ನಂಬಿರ್ದು= ನಂಬಿದ್ದು; ಮತ್ತೆ ಆ ಗುರುವಿನ ಕರುಣದಿಂದ ಪಂಚಾಕ್ಷರೀ ಮಂತ್ರಮಂ= ನಮಃಶಿವಾಯ ಎಂಬ ಪಂಚಾಕ್ಷರೀ ಮಂ

ತ್ರವನ್ನು ಪಡೆದು; ರಹಸ್ಯ= ಗೋಪ್ಯವಾಗಿ; ಭಕ್ತಿಯಿಂದಂ =ಭಕ್ತಿಯಿಂದ; ಜಪಪುಪಿ ಜಿಪಿ =ಜಪವನ್ನು ಮಾಡಿ; ಗುರ್ವಾಜ್ಞೆಯಂ= ಗುರುವಿನ ಆಜ್ಞೆಯನ್ನು; ಮೀರದೆ= ಉಲ್ಲಂಘಿಸದೆ; ಅತ್ಯಾದರದಿಂದಂ= ಅತಿ ಪ್ರೀತಿಯಿಂದ, ನೆತ್ತಿಯೊಳ್= ಶಿರದಲ್ಲಿ;ತಲೆಯಲ್ಲಿ ಪೊತ್ತು= ಹೊತ್ತು, (ವಹಿಸಿ); ಅನುಪಮ= ಹೋಲಿಕೆಗೆ ಸಿಗಲಾರದ ಸುಖದಿಂ= ಆನಂದದಿಂದ ಬಾಳ್ಕ= ಬಾಳುವ; ಭೃತ್ಯತ್ವಮಂ =ಸೇವಕತನವನ್ನು; ಕಿಂಕರತ್ವವನ್ನು ಪಂದ್= ವನ್ನ; ಗುರುವೇ; ನೀನಿತ್ತು= ನೀನು ಕೊಟ್ಟು. ಪಂಪಾಪತಿಯೇ ಪನ್ನನ್ನು ರಕ್ಷಿಸು.

ಭಾವಾರ್ಥ: ಗುರುವನ್ನೆ ನಂಬಿ, ಆ ಗುರು ಕರುಣಿಸಿದ ಪಂಚಾಕ್ಷರೀ ಮಂತ್ರವನ್ನು ರಹಸ್ಯವಾಗಿ ಭಕ್ತಿಯಿಂದ ಜಪಿಸಿ, ಗುರುವಿನ ಆಜ್ಞೆಯನ್ನು ಮೀರದೆ, ಶಿರಸಾವಹಿಸಿ, ಸೇವಕನಂತೆ ವಿಧೇಯನಾಗಿದ್ದು ಬಾಳುವ ಸ್ಥಿತಿಯನ್ನು ನೀನು ಕೊಟ್ಟು ನನ್ನನ್ನು ಕಾಪಾಡುತಂದೇ.

ಟಿಪ್ಪಣಿ : ಈ ವೃತ್ತದಲ್ಲಿ ಕವಿ ಗುರುವಿನ ಮಹಾತ್ಮ್ಯೆಯನ್ನು ಗುರುವಿನ ಅವಶ್ಯಕತೆಯನ್ನು ಕಾಣಿಸಿದ್ದಾನೆ. ಗುರುವೇ ಹರಿಹರಬ್ರಹ್ಮ. ನಮ್ಮ ಅಜ್ಞಾನವನ್ನು ಪರಿಹರಿಸುವ ಜ್ಞಾನವೆಂಬ ಅಂಜನ. ಅಂಥ ಗುರು ಸುಮ್ಮನೆ ಸಿಗಲಾರ. ಅದಕ್ಕೂ ಪೂರ್ವಜನ್ಮ ಸಂಸ್ಕಾರ, ಸತತ ಪ್ರಾರ್ಥನೆ ಅತ್ಯಗತ್ಯ. ಅಂಥ ಗುರು, ಭಕ್ತನಿಗೂ, ಭಗವಂತನಿಗೂ ಮಧ್ಯಸ್ಥನಾಗಿ ಸ್ವರ್ಗಸುಖಕ್ಕೆ ಕೊಂಡೊಯ್ಯುವುದರಲ್ಲಿ ಸಂಶಯವಿಲ್ಲ.

## ವೃತ್ತ: ೭೫

ಅಲರಿಂ ಕೂರ್ತಿಟ್ಟೊಡಂ ಚಕ್ರದಿನುಱಿ ಮುಳಿದಂತಿಟ್ಟೊಡಂ ಹಂಸತೂಲ-
ಸ್ಥಲದೋಳ್ ತಾಂ ಬೈತೊಡಂ ಮುಳ್ಗಳ ಹೊಸಹಸೆಯೊಳ್ ಬೈತೊಡಂ
ಸ್ನೇಹದಿಂದಂ
ಫಲದಿಂದಂ ಸ್ತೋತ್ರಮಂ ಮಾಡಿದೊಡೆ ಪಳಿದೊಡಂ ಸರ್ಪಮೊಂದಂದ
ಮೊಂದಾಂ
ಸಲೆ ಕಾಣ್ಬಂತಿತ್ತು ಪಂಪಾಪುರಪತಿಪ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೭೫

ಅರ್ಥ: ಅಲರಿಂ= ಹೂವಿನಿಂದ; ಕೂರ್ತರ್= ಪ್ರೀತಿಪೂರ್ವಕವಾಗಿ ಇಟ್ಟೊಡಂ ಪೂಜಿಸಿದರೂ; ಚಕ್ರದಿಂ= ಚಕ್ರಾಯುಧದಿಂದ; ಮುಳಿದು= ಸಿಟ್ಟಿನಿಂದ; ಅಂತಿಟ್ಟೊಡಂ =ಹಾಗೆಯೇ ಕತ್ತರಿಸಿಹಾಕಿದರೂ; ಹಂಸತೂಲಿಸ್ಥಲದೊಳ್= ಹಂಸತೂಲಿಕಾಸ್ಥಳದಲ್ಲಿ ತಾಂ ಬೈತೊಡಂ= ಮಲಗಿಸಿ ಶುಶ್ರೂಷೆಮಾಡಿದರೂ; ಮುಳ್ಗಳ= ಮುಳ್ಳುಗಳ; ಹೊಸ ಹಸೆಯೊಳ್= ಹಸೆಯಲ್ಲಿ ಬೈತೊಡಂ= ಎಸೆದರೂ; ಸ್ನೇಹದಿಂದಂ= ಸ್ನೇಹದಿಂದ; ವರಿ ಪಿಂದಂ= ಪ್ರೀತಿಯಿಂದ; ಸ್ತೋತ್ರಮಂ =ಸ್ತೋತ್ರಮಾಡಿದರೂ;ಪಳಿದೊಡಂ= ಹಳಿದ ರೂಕೂಡ; ಸರ್ವರ= ಎಲ್ಲವೂ; ಒಂದೇ ಅಂದಂ= ರೀತಿ; ಎಂತುಂ= ಎಂದು ನಾನು; ಸಲೆ= ನಿಶ್ಚಯವಾಗಿಯೂ ಕಾಣ್ಬಂತೆ =ಕಾಣುವಂತೆ; ಇತ್ತು=ಕರುಣಿಸಿ ಕಾಪಾಡು ಪಂಪಾಪುರದ ಅರಸನಾದ ವಿರೂಪಾಕ್ಷ ಸ್ವಾಮಿಯೇ.

ಭಾವಾರ್ಥ : ಹೂವುಗಳನ್ನು ಒಟ್ಟಿ ಪ್ರೀತಿಪೂರ್ವಕವಾಗಿ ಪೂಜಿಸಿ ದರಾಗಲಿ, ಚಕ್ರಾಯುಧದಿಂದ ಹಾಗೆಯೇ ಕತ್ತರಿಸಿಹಾಕಿದರಾಗಲಿ ಹಂಸ ತೂಲಿಕಾಸ್ಥಲದಲ್ಲಿ ಮಲಗಿಸಿ ಶುಶ್ರೂಷೆಮಾಡಿದರೂ,ಅಥವಾ ಮುಳ್ಳಿನ, ಕಳೆ, ಯ ಹೊಸಹಸೆಯ ಮೇಲೆ ಬೀಸಿ ಎಸೆದರೂ, ಪ್ರೀತಿಯಿಂದ ನನ್ನನ್ನು ಹೊಗ ಳಿದರೂ ಒಂದೇ, ಸಿಟ್ಟಿನಿಂದ ತೆಗಳಿದರೂ ಒಂದೇ ಎಂಬಂಥ ಸಮದೃಷ್ಟಿಯ ನ್ನು ಕೊಟ್ಟು, ಕಾಪಾಡು ತಂದೇ ಪಂಪಾಪುರದ ಒಡೆಯನೇ.

ಟಿಪ್ಪಣಿ : ಭಕ್ತನಾದವನಿಗೆ ಸ್ತುತಿನಿಂದೆ, ಕಷ್ಟಸುಖ, ಎಂಬ ಭೇದ ವೇ ಕಾಣುವುದಿಲ್ಲ. ಸ್ತುತಿನಿಂದೆಗಳಲ್ಲಿ ಒಂದೇ ಎಂಬಂಥ ಉನ್ನತ ಮಟ್ಟಬರ ಬೇಕಾದರೆ ಸಾಧಕ ಬಹು ಮುಂದುವರಿದಿರಬೇಕಾಗುತ್ತದೆ. ಸ್ತುತಿ ನಿಂದೆಗ ಳಂದರೆ ಏನು? ಒಬ್ಬ ವ್ಯಕ್ತಿ ಇನ್ನೊಬ್ಬ ವ್ಯಕ್ತಿಯಬಗ್ಗೆ ಮಾಡಿಕೊಂಡ ಅ ಭಿಪ್ರಾಯಗಳ ವ್ಯಕ್ತ. ಇರುವುದೇನೋ ಒಬ್ಬನೇ ವ್ಯಕ್ತಿ. ಬೇರೆಯವರಿಗೆ ಕೆಲವರಿಗೆ ಒಳ್ಳೆಯರಾಗಿ ಕಾಣುತ್ತಾರೆ. ಇನ್ನುಳಿದ ಕೆಲವರಿಗೆ ಕೆಟ್ಟವರಾ ಗಿ ಕಾಣುತ್ತಾರೆ. ಒಬ್ಬನೇ ಮನುಷ್ಯ ವಿವಿಧ ಜನಂಗೆ ವಿವಿಧ ರೀತಿಯಲ್ಲಿ ತೋರಿಸಿಕೊಳ್ಳಬೇಕಾದರೆ, - ಸ್ತುತಿ ನಿಂದೆಗಳಿಗೆ ಈಡಾಗಬೇಕಾದರೆ, ಆ ಮನುಷ್ಯ ಅಷ್ಟು ವೈವಿಧ್ಯ ಪೂರ್ಣವಾಗಿದಾನೆ ಎಂದಲ್ಲ. ಆದರೆ ನೋಡು ವವರಲ್ಲಿ ಆ ವ್ಯತ್ಯಾಸವಿದೆ ಎಂದೇ ನಮ್ಮಲ್ಲಿ ಆ ವ್ಯತ್ಯಾಸಗಳು ಆರೋಪಿಸು

ತ್ತಾರೆ. ನ್ಯಾಯವಾಗಿ, ವ್ಯತ್ಯಾಸವಿರುವುದು ನೋಡುವವನಲ್ಲೇ ಹೊರತು ವ್ಯಕ್ತಿಯಲ್ಲಿಲ್ಲ. ಎಂದಮೇಲೆ ಅದಕ್ಕೇಕೆ ಚಿಂತೆ ? ಭಕ್ತನ ಈ ಲಕ್ಷಣವನ್ನೇ ಗೀತೆಯು ಸ್ಥಿತ ಪ್ರಜ್ಞನೆಯೆಂದು ಕರೆಯುತ್ತದೆ.

ವೃತ್ತ : ೭೬

ಎಸೆವೀ ಪಂಚಾಕ್ಷರೀಮಂತ್ರಮೆ ಗುರುತರಮಂತ್ರಂ ವಿಶುದ್ಧಾಂಗಲೇಪಂ
ಭಸಿತಂ ರುದ್ರಾಕ್ಷಿಯೇ ಭೂಷಣತತಿ ಪರಮಸ್ವಾಮಿ ನೀಂ ಪೂಜ್ಯನಾನಂ-
ದಸಮೇತಂ ಭಕ್ತನೇ ಸತ್‌ಕುಲಜನೆನಿಸಿದಂ ನಂಬಿ ಮತ್ತೇನುಮಂ ಭಾ-
ವಿಸದಿರ್ಪಂತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೭೬

ಅರ್ಥ: ಎಸೆವ= ಪ್ರಕಾಶಿಸುವ; ಈ ಪಂಚಾಕ್ಷರೀ ಮಂತ್ರಮೆ= ನಮಃಶಿವಾಯ ಎಂಬ ಮಂತ್ರವೇ; ಗುರುತರ ಮಂತ್ರಂ= ಶ್ರೇಷ್ಠವಾದ, ಅಜ್ಞಾನ ಪರಿಹಾರಕಾರಕವಾದ ಮಂತ್ರವು; ಭಸಿತಂ=ವಿಭೂತಿಯೇ; ವಿಶುದ್ಧಾಂಗಲೇಪಂ=ಮೈಯನ್ನು ಶುದ್ಧಗೊಳಿಸುವ ಲೇಪನವು; ರುದ್ರಾಕ್ಷಿಯೇ; ಭೂಷಣತತಿ= ಅಲಂಕಾರವನ್ನು; ನೀಂ =ನೀನೇ; ಪರಮಸ್ವಾಮಿ= ಶ್ರೇಷ್ಠವಾದ ದೈವ; ಆನಂದಸಮೇತಂ= ಆನಂದದಿಂದಕೂಡಿದ; ಭಕ್ತನೇ; ಸತ್‌ಕುಲಜನ್= ಒಳ್ಳೆಯಕುಲದಲ್ಲಿ ಹುಟ್ಟಿದವನು; ಎನಿಪಿದಂ= ಎನುವ ಈ ಮಾತನ್ನು ನಂಬಿ; ಮತ್ತೆ; ಏನುಮಂ= ಏನನ್ನೂ; ಭಾವಿಸದೆ= ಯೋಚಿಸದೆ; ಚಿಂತಿಸದೆ; ಇರ್ಪಂತಿತ್ತು=ಇರುವಂತೆ ಕರುಣಿಸಿ; ಪಂಪಾಪುರದ ಅರಸನಾದ ವಿರೂಪಾಕ್ಷಸ್ವಾಮಿಯೇ ನನ್ನನ್ನು ರಕ್ಷಿಸುವುದು.

ಭಾವಾರ್ಥ: ಪಂಚಾಕ್ಷರೀ ಮಂತ್ರವೇ ನನ್ನ ಶ್ರೇಷ್ಠವಾದ ಮಂತ್ರ. ವಿಭೂತಿಯೇ ನನ್ನನ್ನು ಪಾವನಗೊಳಿಸುವ ಲೇಪನ. ರುದ್ರಾಕ್ಷಿಯೇ ನನ್ನ ಸಕಲ ಭೂಷಣಸಾಮಾಗ್ರಿ. ಶ್ರೇಷ್ಠನಾದ ನೀನೇ ನನ್ನ ಪೂಜಾ ದೈವ. ಆನಂದ ಸಹಿತನಾದ ಭಕ್ತನೇ ಸತ್‌ಕುಲದಲ್ಲಿ ಹುಟ್ಟಿದವನು - ಎಂಬ ಈ ಸತ್ಯವನ್ನು ನಂಬಿ, ಮತ್ತೆ ಯಾವ ಮಂತ್ರ, ಲೇಪನ, ಭೂಷಣ, ಪೂಜಾದೈವ ಸತ್ಕುಲವನ್ನು ಚಿಂತಿಸದ ಸ್ಥಿತಿಯನ್ನು ಕೊಟ್ಟು ರಕ್ಷಿಸು ಸ್ವಾಮಿ.

ಟಿಪ್ಪಣಿ: ಭಕ್ತನಾದವನಿಗೆ ಗುರುಮಂತ್ರ, ಇಷ್ಟದೈವ ಎಂಬುವೆ

ಅತ್ಯಂತ ಅನಿವಾರ್ಯ. ಅತ್ಯಗತ್ಯ. ಮಂತ್ರವಿಲ್ಲದೆ ಮುಕ್ತಿಸಿಗುವುದೇಯಿಲ್ಲ -ಎಂದು ಹೇಳುತ್ತಾರೆ. ಹಾಗಾದರೆ, ಮಂತ್ರ ಎಂದರೇನು ? ಮಂತ್ರ ಎಂದರೆ ದೇವರ ಹೆಸರು. ಯಾರಿಗೆ ಯಾವುದು ಪ್ರಿಯವೋ ಅಂಥ ಮಂತ್ರವನ್ನು ಗುರು ಕರುಣಿಸಿ ಭವಸಾಗರವನ್ನು ದಾಟಿಸುತ್ತಾನೆ. ಗುರು ಕೊಟ್ಟ ಮಂತ್ರ ಎಂದರೆ, ಕಡಲನ್ನು ದಾಟುವ ಹಡಗು ಇದ್ದಂತೆ : ತನಗೆ ದೊರೆತ ಮಂತ್ರ ಪಂಚಾಕ್ಷರೀ ಮಂತ್ರಕ್ಕಿಂತ ಇನ್ನೊಂದು ಮಂತ್ರವಿನ್ನೇಕೆಬೇಕು ? ಎಂದು ಕವಿ ಹೇಳುತ್ತಾನೆ. ಪಂಚಾಕ್ಷರೀ ಮಂತ್ರದ ಮಹಾತ್ಮ್ಯೆಯನ್ನು ಈ ರೀತಿ ವರ್ಣಿಸಿದ್ದಾರೆ :

ನಾಗೇಂದ್ರ ಹಾರಾಯ ತ್ರಿಲೋಚನಾಯ
ಭಸ್ಮಾಂಗ ರಾಗಾಯ ಮಹೇಶ್ವರಾಯ
ನಿತ್ಯಾಯ ಶುದ್ಧಾಯ ದಿಗಂಬರಾಯ
ತಸ್ಮೈ ನಕಾರಾಯ ನಮಃ ಶಿವಾಯ ।

ಮಂದಾಕಿನೀ ಸಲಿಲ ಚಂದನ ಚರ್ಚಿತಾಯ
ನಂದೀಶ್ವರ ಪ್ರಮಥನಾಥ ಮಹೇಶ್ವರಾಯ
ಮಂದಾರಮುಖ್ಯ ಬಹುಪುಷ್ಪ ಸುಪೂಜಿತಾಯ
ತಸ್ಮೈ ಮಕಾರಾಯ ನಮಃ ಶಿವಾಯ ॥

ಶಿವಾಯಗೌರೀ ವದನಾಬ್ಜವೃಂದ ಸೂರ್ಯಾಯ
ದಕ್ಷಾಧ್ವರ ನಾಶಕಾಯ
ಶ್ರೀ ನೀಲಕಂಠಾಯ ವೃಷಧ್ವಜಾಯ
ತಸ್ಮೈ ಶಿಕಾರಾಯ ನಮಃ ಶಿವಾಯ

ವಸಿಷ್ಠ ಕುಂಭೋದ್ಭವ ಗೌತಮಾರ್ಯ
ಮುನೀಂದ್ರ ದೇವಾರ್ಚಿತ ಶೇಖರಾಯ
ಚಂದ್ರಾರ್ಕ ವೈಶ್ವಾನರ ಲೋಚನಾಯ
ತಸ್ಮೈವಕಾರ ನಮಃ ಶಿವಾಯ

ಯಕ್ಷಸ್ವರೂಪಾಯ ಜಟಾಧರಾಯ
ಪಿನಾಕ ಹಸ್ತಾಯ ಸನಾತನಾಯ
ದಿವ್ಯಾಯ ದೇವಾಯ ದಿಗಂಬರಾಯ
ತಸ್ಮೈಯಕಾರಾಯ ನಮಃಶಿವಾಯ

ಇಂಥ ಪರಮಪವಿತ್ರವಾದ ಮಂತ್ರವು ದೊರೆತಮೇಲೆ ಅನ್ಯಾಚಿಂತೆ ಯೇಕೆ ?

ಹಾಗೆಯೇ ತಾನು ನಂಬಿದ ದೈವವಾದರೂ ಸರ್ವಶ್ರೇಷ್ಠನಾದ ಸ್ವಾಮಿ. ಅಂಥಸ್ವಾಮಿಯು ದೊರೆತಮೇಲೆ ಭಕ್ತನಿಗೆ ಯಾತರಚಿಂತೆ ? ಆದರೆ ಈ ಮಂತ್ರ ಈ ದೇವರಲ್ಲಿ ಅಚಲವಾದ ಶ್ರದ್ಧೆನಿಷ್ಠೆ ನಂಬುಗೆ ಬೇಕು. ಅಂಥ ಸ್ಥಿತಿಯನ್ನು ಕೊಟ್ಟು ಕಾಪಾಡು ಎಂದು ಕವಿ ಪ್ರಾರ್ಥಿಸುತ್ತಾನೆ.

ವೃತ್ತ: ೭೭

ಕರೆವಲ್ಲಿಂ ಮುನ್ನವೋ ಓ ಮಗನೆ ಬಂದೆಂ ದಿಟಂ ಬಂದೆನೆಂದಾ-
ದರದಿಂದಂ ನೀನೆ ಬಂದೆನ್ನವಯವವನಿತಂ ಮುಟ್ಟಿನೊಂದಾ ಬಳಲ್ದಾ
ಕರೆದಾ ಕಂದಾ ಎನುತ್ತುಂ ಕೃಪೆ ಮಿಗೆ ನಲವಿಂ ನೋಡಿ ಮುಂಡಾಡುತೆಂದುಂ
ಶಿರದೋಳ್ ಕೈಯಿಕ್ಕಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೭೭

ಅರ್ಥ: ಕರೆವಲ್ಲಿಂ=ಕರೆಯುವುದಕ್ಕಿಂತ; ಮುನ್ನ=ಮೊದಲೇ; ಓ ಓ ಮಗನೆ ಮಗನೆ; ಬಂದೆಂ= ಬಂದೆ; ದಿಟಂ ಬಂದೆನ್= ನಿಶ್ಚಯವಾಗಿಯೂ ಬಂದೆನು; ಎಂದು ಆದರದಿಂದಂ=ಪ್ರೀತಿಯಿಂದ; ನೀನೇಬಂದು; ಎನ್ನ; ಅವಯವವನಿತಂ= ಎಲ್ಲ ಅವಯವಗಳನ್ನು ಮುಟ್ಟಿ; ನೊಂದಾ= ನೊಂದೆಯಾ: ಬಳಲ್ದಾ= ಬಳಲಿದೆಯಾ; ಕರೆದಾ= ಕರೆದೆಯಾ; ಕಂದಾ; ಎನುತ್ತುಂ= ಎನುತ್ತಾ; ಕೃಪೆ= ಕರುಣೆಯು; ಮಿಗೆ= ಹೆಚ್ಚಾಗಲು; ನಲಿವಿಂ= ಪ್ರೀತಿಯಿಂದ;. ನೋಡಿ; ಮುಂಡಾಡುತ= ಅಪ್ಪಿಕೊಂಡು ಮುದ್ದಿಸುತ್ತ; ಎಂದುಂ= ಯಾವಾಗಲೂ; ಶಿರದೊಳ್ =ಮಸ್ತಕದಮೇಲೆ; ತಲೆಯಮೇಲೆ ಕೈಯಿಕ್ಕಿ; ಪಂಪಾಪುರದರಸ ವಿರೂಪಾಕ್ಷ ಸ್ವಾಮಿಯೇ ನನ್ನನ್ನು ರಕ್ಷಿಸುವುದು.

ಭಾವಾರ್ಥ: ನಾನು ಕರೆಯುವುದಕ್ಕಿಂತ ಮೊದಲೇ, ನೀನೇ ಬಂದು: "ಓ ಓ ಮಗನೆ, ಬಂದೆನು. ನಿಶ್ಚಯವಾಗಿಯೂ ಬಂದೆನು" ಎಂದು ಆದರ ದಿಂದ ನನ್ನ ಮೈದಡವಿ, 'ನೊಂದೆಯಾ ? ಬಳಲಿದೆಯೋ ? ನನ್ನನ್ನು ಕರೆದೆಯೊ ಕಂದಾ ?' ಎನುತ್ತಾ ಕರುಣೆ ಹೆಚ್ಚಾಗಿ ನನ್ನನ್ನು ನೋಡಿ ಮುಂಡಾಡಿ ಮುದ್ದಿಸಿ ನನ್ನ ಮಸ್ತಕದಮೇಲೆ ಕೈಯಿಟ್ಟು ಪಂಪಾಪುರದರಸ ವಿರೂಪಾಕ್ಷ ಸ್ವಾಮಿಯೇ ನನ್ನನ್ನು ರಕ್ಷಿಸು.

ಟಿಪ್ಪಣಿ: ಭಕ್ತ ಭಗವಂತನಲ್ಲಿರುವ ಬಾಂಧವ್ಯ ನಿಜವಾಗಿಯೂ ಅವರ್ಣನೀಯ. ಗುರುಕರುಣೆಗಾಗಿ, ಭಗವತ್ಕೃಪೆಗಾಗಿ ಭಕ್ತನು ಎಷ್ಟರಮ ಟ್ಟಿಗೆ, ಎಂಥ ಕಾತರದಿಂದ, ಎಂಥ ಹೃದಯವೇದನೆಯಿಂದ ಹಾರೈಸುತ್ತಾ ನೋ, ಪ್ರಾರ್ಥಿಸುತ್ತಾನೋ, ಅಷ್ಟೇಕಾತರ, ವೇದನೆಯಿಂದ ಭಗವಂತನೂ ಭಕ್ತನ ರಕ್ಷಣೆಗಾಗಿ, ಕ್ಷೇಮಕ್ಕಾಗಿ ಹಾರೈಸುತ್ತಾನೆ. ಭಕ್ತ ಭಗವಂತನ ಕಡೆಗೆ ಒಂದೇ ಒಂದು ಹೆಜ್ಜೆಯನ್ನು ಕುಂಟುತ್ತ ನಡೆದರೂ, ಭಗವಂತ ಭಕ್ತ ನೆಡೆಗೆ ಹಾರುತ್ತ ಓಡೋಡಿ ಹತ್ತು ಹೆಜ್ಜೆ ಬರುತ್ತಾನೆ. ಭಗವತ್ಕೃಪೆಯಾಗ ಲಿಲ್ಲವೆಂಬುದು ಭಕ್ತನ ಕೊರಗಲ್ಲ ! ಆದರೆ, ಭಕ್ತ ತನ್ನ ಕಡೆಗೆ ತಿರುಗಲೊ ಲ್ಲನೇ ಎಂಬುದು ಭಗವಂಥನ ದುಃಖ. ನಿಜವಾಗಿಯೂ, ಅವನು ಯಾವಾ ಗಲೂ ಕೈಚಾಚಿ ನಿಂತುಕೊಂಡಿದ್ದಾನೆ. ಭಕ್ತ ಒಂದೇ ಒಂದುಬಾರಿ ಅವನ ಕಡೆ ತಿರುಗಿ, ಕೈಮೇಲಕ್ಕೆತ್ತಿದರೂ ಸಾಕು, ಭಗವಂತ ಅವನನ್ನು ಮೇಲಕ್ಕೆ ಎತ್ತಿ ಕೊಳ್ಳಲು ಸಿದ್ಧನಿದ್ದಾನೆ. ಸಾಮಾನ್ಯವಾಗಿ ಲೋಕದ ಅನುಭವ ದೈವ ಕೃಪೆಯಾಗಲೊಲ್ಲದು ಎಂದು ಹೇಳುತ್ತಾರೆ. ಅದರೆ ನಿಜವಾಗಿ ಬಂದಿರುವ ತೊಂದರೆ ಅದಲ್ಲ. ಅವನನ್ನು ನಂಬಿದರೆ ನಾವು ಸುಖವೆಂದು ನಂಬಿದ ಈ ಮನೆ ಮಡದಿಮಕ್ಕಳನ್ನು ಬಿಟ್ಟುಬಿಡಬೇಕೇ ಎಂಬ ದುಃಖ. ಆದಕಾರಣ, ಭಗವಂತ ಕರೆದರೆ ಸಾಕು ಓಡಿಬಂದಾನೆಂದು ಕಾದು ನಿಂತಿದ್ದಾನೆ. ಆದರೆ ನಾವು ಅವನಕಡೆ ತಿರುಗಿದರೆ, ಇದರಕಡೆ ಮರೆಯಾಗಬೇಕೆಂಬ ಅಂಜಿಕೆಯಿಂ ದನಾವೇ ಅವನಿಂದ ಓಡೋಡಿ ಓಡೋಡಿ ಹೋಗುತ್ತಿದ್ದೇವೆ. ಅದನ್ನೇ "ಸ್ವರ್ಗಶ್ವಾನ" (The Hound of Heaven) "ಮುಕ್ತಿರಾಹು" ಎಂಬ ಕವನಗಳಲ್ಲಿ ದಾರ್ಶನಿಕ ಕವಿಗಳು ಬಹು ಮನೋಜ್ಞವಾಗಿ ಮಾರ್ಮಿಕ

ಮಿಃಶವಾಗಿ, ಕಾವ್ಯಮಯವಾಗಿ, ಪ್ರತಿಮಾ ರೂಪದಿಂದ ಚಿತ್ರಿಸಿದ್ದಾರೆ. ಈ ಭಾವವನ್ನೇ ಹರಿಹರಕವಿ ಅತ್ಯಂತ ಸರಳವಾದ ಮಾತುಗಳಲ್ಲಿ ಅತ್ಯಂತ ಪರಿಣಾಮ ಕಾರಿಯಾದ ರೀತಿಯಲ್ಲಿ ಮೂಡಿಸಿದ್ದಾನೆ. ದೇವರೇ ಬಂದು, ಪ್ರೈಂಪಸ್ನೆಲ್ಲ ಸವರಿ, ಮುಟ್ಟಿ : 'ನೊಂದೆಯಾ, ಬಳಲಿದೆಯಾ, ಕದಿದೆಯಾ' ಎಂದು ಸಂತೈಸಿ ಕೃಪೆಗೈಯ್ಯುವಂತಹ ಭಾಗ್ಯವನ್ನು ಪಡೆದ ಭಕ್ತನಿಗೆ ಏನು ಕೊರತೆ?

ವೃತ್ತ : ೭೮

ನಿಮಗೆನ್ನಂ ಮಾಱುಗೊಟ್ಟೆಂ ಪುರಹರ ನಿಮಗೆನ್ನಂ ಸದಾ ತೊಳ್ತುಗೊಟ್ಟೆಂ
ನಿಮಗೆನ್ನಂ ಸೂಱೆಗೊಟ್ಟೆಂ ನಿಮಗೆ ಹರುಷದಿಂದೊಚ್ಚತಂ ಕೊಟ್ಟೆನಾಹಾ
ನಿಮಗೆನ್ನಂ ಮಚ್ಚುಗೊಟ್ಟೆಂ ಗುರುವೆ ಘನವೇ ಸಂತೋಷದಿಂದೊಪ್ಪುಗೊಟ್ಟೆಂ
ನಿಮಗೆನ್ನಂ ದೇವ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೭೮

ಅರ್ಥ: ನಿಮಗೆ; ಎನ್ನಂ= ನನ್ನನ್ನು ಮಾಱುಗೊಟ್ಟೆಂ= ಮಾರಿಕೊಂಡು ಬಿಟ್ಟೆ; ಪುರಹರ=ತ್ರಿಪುರಸಂಹಾರ ಮಾಡಿದ ಸ್ವಾಮಿಯೆ; ನಿಮಗೆ ನನ್ನನ್ನು ಸದಾ ತೊಳ್ತುಗೊಟ್ಟೆ=ನಿನ್ನ ಸೇವಕನಾಗಿ ಭೃತ್ಯತ್ವವನ್ನು ಒಪ್ಪಿಕೊಂಡೆ; ಸೂಱೆಗೊಟ್ಟೆ= ನನ್ನದೆಂಬುದೆಲ್ಲವನ್ನೂ ಎಷ್ಟೂಗಣನೆಮಾಡದೆ ನಿಮಗೆ ಸೂರೆಮಾಡಿದೆ; ನನ್ನನ್ನೇ ಸೂರೆಮಾಡಿದೆ. ಹರುಷದಿಂ=ಪ್ರೀತಿಯಿಂದ; ಒಚ್ಚತಂಕೊಟ್ಟೆನ್= ಸರಿಯಾಗಿ ಬೆರೆತುಹೋದೆ; ನಿಮಗೆ ಎನ್ನನ್ನು ಮಚ್ಚುಗೊಟ್ಟೆಂ= ಮೆಚ್ಚುಗೊಟ್ಟೆ. ಉಡುಗೊರೆಯಾಗಿ ಕೊಟ್ಟೆ. ಗುರುವೆ; ಘನವೆ =ಮಹಿಮೆಯೇ; ಸಂತೋಷದಿಂದ; ಒಪ್ಪುಗೊಟ್ಟೆ= ಒಪ್ಪಿಗೆಯ ಒಡವೆಯಾಗಿ ಕೊಟ್ಟೆ; ಪಂಪಾಪುರದ ಅರಸನಾದ ವಿರೂಪಾಕ್ಷ ಸ್ವಾಮಿಯೇ ನನ್ನನ್ನು ರಕ್ಷಿಸು.

ಭಾವಾರ್ಥ: ನಿಮಗೆ ನನ್ನನ್ನು ಮಾರಿಕೊಂಡೆ. ನಿಮ್ಮ ತೊತ್ತಾಗಿ ಭೃತ್ಯತ್ವವನ್ನು ಒಪ್ಪಿಕೊಂಡೆ. ನನ್ನದೆಂಬುದನ್ನೆ ನಿಮಗೆ ಸೂರೆಗೈದೆ. ಕೊನೆಗೆ ನಿಮ್ಮಲ್ಲಿಯೇ ಬೆರೆತುಹೋದೆ. ನಿಮ್ಮ ಮೆಚ್ಚಿನ ಒಡವೆಯಾಗಿ ನಿಮಗೇ ಸೇರಿಹೋದೆ ನಿಮ್ಮ ಒಪ್ಪಿಗೆಯ ಉಡುಗೊರೆಯಾಗಿ ನಿಮಗೇ ಸೇರಿದೆ. ದೇವ ನನ್ನನ್ನು ರಕ್ಷಿಸು.

ಟಿಪ್ಪಣಿ : ಶರಣಸ್ಥಲವನ್ನು ಮೀರಿದ ಐಕ್ಯ ಸ್ಥಲದ ಸ್ಥಿತಿಯನ್ನು ಈ ವೃತ್ತ ವರ್ಣಿಸುತ್ತದೆ. ಇದುವರೆಗೆ, ಭಗವಂತ ಭಕ್ತ ಎಂಬ ಭಿನ್ನಭಾವ ಉಳಿದಿತ್ತು. ಆದರೆ ಈಗ ಭಕ್ತನಿಗೆ ತನ್ನದೆಂಬುದು ಯಾವುದೂ ಉಳಿದಿಲ್ಲ. ತಾನೇ ಅವನಿಗೆ ಸಮರ್ಪಿತವಾಗಿ ಹೋಗಿದ್ದಾನೆ. ತನ್ನನ್ನೂ ತನ್ನದೆಂಬುದನ್ನೂ ಭಕ್ತ ಭಗವಂತನ ಅಡಿದಾವರೆಯಲ್ಲಿ ಸಂಪೂರ್ಣವಾಗಿ ಸಮರ್ಪಿಸಿಬಿಟ್ಟಿದ್ದಾನೆ; ತನ್ನನ್ನೇ ಅವನಿಗಾಗಿ ಸೂರೆಮಾಡಿದ್ದಾನೆ. ಇಂಥ ಪರಮಪದವಿ ಪ್ರಾಪ್ತಿಯಾಗುವುದು ಎಷ್ಟು ಜನ್ಮಗಳ ಸಾಧನೆಯ ಫಲವೋ! ಅದು ಪ್ರಾಪ್ತಿಯಾದಮೇಲೆ ಮತ್ತಾವ ಪದವಿಯಿಂದ ಏನಾಗಬೇಕಾಗಿದೆ? ಅವನಿಗಾಗಿ ಅರ್ಪಿತವಾಗಿ ಹೋಗುವದಕ್ಕಿಂತ ಉತ್ತಮವಾದ ಪ್ರಯೋಜನ ಇವನಿಗಿನ್ನೇನಿದೆ?

ವೃತ್ತ: ೭೯

ಮುದದಿಂದಂ ಕಾಮಮಂ ಕೋಪಮನುಜಿ ಜಜಿದಾಮೋಹಮಂ ದಾಂಟಿ ಲೋಭ-
ತ್ವದ ಬೇರಂ ಕಿಳ್ತು ಮಾತ್ಸರ್ಯಮನುಡುಗಿ ಮದಾಲೇಪಮಂ ತೀರ್ಚಿ ಯಾಶಾ-
ಸದನಕ್ಕಾಸತ್ತು ಬೇಸತ್ತು ತುಳಶಿವಸುಖಾವಾಸದೊಳ್ತಾ ಭಕ್ತಿಯಿಂ ತ್ವತ್-
ಪದಮಂ ಸಾರ್ವಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೭೯

ಅರ್ಥ: ಮುದದಿಂದಂ=ಪ್ರೀತಿಯಿಂದ; ಕಾಮಮಂ=ಕಾಮವನ್ನು; ಕೋಪಮಂ=ಕೋಪವನ್ನು; ಉಜಿ= ಜಿಪ್ಪಾಗಿ; ಜಜಿದು= ಹೀಯಾಳಿಸಿ; ಆ ಮೋಹಮಂ =ಮೋಹವನ್ನು; ದಾಂಟಿ= ದಾಟಿ; ಲೋಭತ್ವದ; ಬೇರಂ= ಬೇರನ್ನು ಕಿಳ್ತು= ಕಿತ್ತುಹಾಕಿ; ಮಾತ್ಸರ್ಯಮಂ= ಮತ್ಸರವನ್ನು; ಉಡುಗಿ= ಸುಕ್ಕುವಂತೆಮಾಡಿ; ಮದಾಲೇಪಮಂ= ಮದವೆಂಬ ಲೇಪನವನ್ನು; ತೀರ್ಚಿ=ತೀರಿಸಿ; ಮುಗಿಸಿ; ಆಶಾಸದನಕ್ಕೆ =ಆಸೆಯೆಂಬ ಮನೆಯಿಂದ; ಆಸತ್ತು= ರೋಸಿಹೋಗಿ; ಬೇಸತ್ತು; ಅತುಳ= ಅಪಾರವಾದ; ಸುಖಾವಾಸದೊಳ್= ಸುಖವಾದ ಆವಾಸಸ್ಥಾನದಲ್ಲಿ; ಭಕ್ತಿಯಿಂ= ಭಕ್ತಿಯಿಂದ; ತ್ವತ್= ನಿನ್ನ; ಪದಮಂ= ಪಾದವನ್ನು; ಸಾರ್ವಂತೆ=ಮುಟ್ಟುವಂತೆ, ಪಂಪಾಪುರದರಸ ವಿರೂಪಾಕ್ಷ ರಕ್ಷಿಸು.

ಭಾವಾರ್ಥ: ಕಾಮವನ್ನೂ, ಕೋಪವನ್ನೂ, ಜರಿದುಬಿಸುಟ್ಟು ಮೋಹವನ್ನು ದಾಟಿ, ಲೋಭದ ಬೇರನ್ನು ಕಿತ್ತು, ಮಾತ್ಸರ್ಯವನ್ನು ಕುಗ್ಗಿಸಿ, ಮದವನ್ನು ತೀರಿಸಿ, ಆಶೆಯೆಂಬ ಮನೆಯಿಂದ ರೋಸಿಬೇಸತ್ತು, ಅನಂತವಾದ ಶಿವಸುಖವೆಂಬ ಮನೆಯಲ್ಲಿ ಭಕ್ತಿಯಿಂದ ನಿನ್ನ ಪಾದಕಮಲಗಳಲ್ಲಿ ಸೇರುವಂತೆ ಪಂಪಾ ವಿರೂಪಾಕ್ಷಸ್ವಾಮಿಯೇ ರಕ್ಷಿಸು.

ಟಿಪ್ಪಣಿ: ಈ ಶತಕದ ೬ ರಿಂದ ೧೧ನೆಯ ವೃತ್ತದಲ್ಲಿ ಅರಿಷಡ್ವರ್ಗಗಳಿಂದ ಬಾಧೆಗೊಳಗಾದ ಜೀವನ ಯಾತನೆಯನ್ನು ವರ್ಣಿಸಿದ್ದಾನೆ ಕವಿ. ಸಾಧಕನು ಯೌವನಾವಸ್ಥೆಯಲ್ಲಿದ್ದಾಗ, ಕಾಮ, ಕ್ರೋಧ ಲೋಭ, ಮೋಹ, ಮದ, ಮತ್ಸರಗಳ ದಾಳಿಯಿಂದ ಭಗವಂತನಿಂದ ದೂರವಾಗಿ ಸಂಕಟಪಡುವ ಚಿತ್ರವನ್ನು ಆ ವೃತ್ತಗಳಲ್ಲಿ ಚಿತ್ರಿಸಿದ್ದಾನೆ. ಷಡ್ಭಾವಗಳನ್ನು ದಾಟಬಂದ ಮುಂದುವರಿದ ಸಾಧಕ, ಆ ಅರಿಷಡ್ವರ್ಗಗಳನ್ನು ಗೆದ್ದು ಬಂದ ಮೇಲೆ ಇರುವ ಪರಿಸ್ಥಿತಿಯನ್ನು ಈವೃತ್ತದಲ್ಲಿ ವರ್ಣಿಸಿದ್ದಾನೆ. ಜೀವ ಎಲ್ಲ ಅವಸ್ಥೆಯನ್ನು ದಾಟಿ, ಎಲ್ಲದರ ಸುಖವನ್ನೂ ದುಃಖವನ್ನೂ ಅನುಭವಿಸಿ, ಸಂಸ್ಕಾರಗೊಂಡು ಭಗವ ದರ್ಶಿತವಾಗಲು ಯೋಗ್ಯವಾಗುತ್ತದೆ. ಕವಿ ಹೇಗೆ ಮೆಟ್ಟಲು ಮೆಟ್ಟಲಾಗಿ ಮೇಲುಮೇಲಕ್ಕೆ ಹೋಗುತ್ತಿದ್ದಾನೆ ಎಂಬುದನ್ನು ಸ್ಪಷ್ಟವಾಗಿ ಅರಿಯಬಹುದು.

## ವೃತ್ತ: ೮೦

ಎನಗಾರ್ ದೈವಂ ವಿರೂಪಾಕ್ಷನೆ ಗುರುವೆನಗಾವಂ ವಿರೂಪಾಕ್ಷನೇ ಕೇಳ್
ಜನಕಂ ತಾನಾರ್ ವಿರೂಪಾಕ್ಷನೇ ಜನನಿಯುದಾವಳ್ ವಿರೂಪಾಕ್ಷನೇ ಆ-
ಪ್ತನದಾವಂ ಶ್ರೀ ವಿರೂಪಾಕ್ಷನೆ ನಿಜಸಖನಾವಂ ವಿರೂಪಾಕ್ಷನೇ ಎಂ-
ಬ ನಿತಂ ಸ್ಫೈತಿಸ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೮೦

ಅರ್ಥ: ಎನಗೆ ಆರ್ =ಯಾರು; ದೈವಂ=ದೇವರು ? ವಿರೂಪಾಕ್ಷನೇ; ಎನಗೆ ಗುರುವು ಆವಂ=ಯಾರು ? ವಿರೂಪಾಕ್ಷನೇ; ಕೇಳ್; ಜನಕಂ= ತಂದೆ; ತಾನಾರ್=ಯಾರು ? ವಿರೂಪಾಕ್ಷನೇ; ಜನನಿ=ತಾಯಿ; ಆದಾವಳ್= ಆದುಯಾವಳು?

ವಿರೂಪಾಕ್ಷನೇ; ಆಳ್ದನ್= ಒಡೆಯನು; ಆದಾವಂ= ಅದುಯಾರು ? ವಿರೂಪಾಕ್ಷ ನೇ ನಿಜಸಖನಾವಂ= ತನ್ನ ಸ್ನೇಹಿತನು ಯಾರು ? ವಿರೂಪಾಕ್ಷನೇ; ಎಂಬವಿತಂ= ಎಂಬ ಎಲ್ಲವನ್ನೂ ನೈತಿಟ್ಟು =ಕರುಣಿಸಿ ಪಂಪಾಪುರದ ಅರಸನಾದ ವಿರೂಪಾಕ್ಷ ಸ್ವಾಮಿಯೇ ನನ್ನನ್ನು ರಕ್ಷಿಸು.

**ಭಾವಾರ್ಥ:** ನನ್ನ ದೈವ, ಗುರು, ತಂದೆ ತಾಯಿ, ರಕ್ಷಕ, ಸಖ - ಎಲ್ಲರೂ ವಿರೂಪಾಕ್ಷನೇ ಎಂಬಂತಹ ಸ್ಥಿತಿಯನ್ನು ಕೊಟ್ಟು ಪಂಪಾಪತಿ ವಿರೂಪಾಕ್ಷಸ್ವಾಮಿಯೇ ರಕ್ಷಿಸು.

**ಟಿಪ್ಪಣಿ:** ತ್ವಮೇವ ಮಾತಾಚ ಪಿತಾತ್ವಮೇವ
ತ್ವಮೇವ ಬಂಧುಶ್ಚ ಸಖಾತ್ವಮೇವ
ತ್ವಮೇವ ವಿದ್ಯಾದ್ರವಿಣಂ ತ್ವಮೇವ
ತ್ವಮೇವ ಸರ್ವಂ ಮಮದೇವದೇವ

ಎಂಬ ಸಂಸ್ಕೃತ ಸ್ತೋತ್ರದಲ್ಲಿ ಅಡಕವಾದ ಸತ್ಯವನ್ನೇ ಕವಿ ಯಿಲ್ಲಿ ಕನ್ನಡದಲ್ಲಿ ನುಡಿದಿದ್ದಾನೆ- ಕನ್ನಡದ ಮತ್ತೊಬ್ಬ ಅನುಭಾವ ಕವಿ ಮುಪ್ಪಿನ ಷಡಕ್ಷರಿದೇವನೂಕೂಡ :

'ಎನ್ನ ಮಾತೆಯುನೀನೆ
ಎನ್ನ ತಾತನು ನೀನೆ
ಎನ್ನಬಂಧುವು ಬಳಗ ಸಖನು ನೀನೆ
ಎನ್ನ ಪತಿಯೂ ನೀನೆ
ಎನ್ನ ಹಿತನೂ ನೀನೆ
ಎನ್ನ ಕರದೊಳಗಿರ್ದು ಏಕೆ ನುಡಿಯೆ ?

ಎಂದು ಹಾಡಿದ್ದಾನೆ. ಭಕ್ತನು ಐಕ್ಯ ಸ್ಥಲಕ್ಕೆ ಮುಟ್ಟಿದಾಗ ಅವನಿಗೆ, ತನ್ನ ಇಷ್ಟದೈವನಲ್ಲದೆ ಮತ್ತೆ ಇನ್ನಾವುವೂ ಸತ್ಯವಲ್ಲ. ಹಡೆದ ತಂದೆ ತಾಯಿಗಳು, ಒಡಹುಟ್ಟಿದ ಸೋದರರು, ಮಾಡಿಕೊಂಡ ಮಡದಿ ಪಡೆದ

ಸ್ನೇಹಿತ - ಇವರೆಲ್ಲರೂ ಎಷ್ಟೇ ನನ್ನವರೆಂದು ತೋರಿದರೂ ಒಂದುದಿನ ಕೈ ಕೊಡುವವರೇ. ಅಂತರ ಕುಸಿತನವನ್ನು ಕವಿ 31ನೆಯ ವೃತ್ತದಲ್ಲಿಯೇ ಕಾವ್ಯಮಯವಾಗಿ ಅತಿ ಚಾತುರ್ಯದಿಂದ ಬಣ್ಣಿಸಿದ್ದಾನೆ ಆ ಸತ್ಯವನ್ನು ಅರಿತು ಈಗ ಈ ಸತ್ಯವನ್ನು - ತ್ವಮೇವ ಮಾತಾಚ ಪಿತಾತ್ವಮೇವ - ಎಂಬ ಸತ್ಯವನ್ನು ಅನುಭವಿಸುತ್ತಾನೆ ಅಂಥ ಅನುಭವವನ್ನು ಪಡೆದಮೇಲೆ ಭಕ್ತ ಅವನೇ ತಂದೆ ತಾಯಿ ಗುರು ರಕ್ಷಕ ಸಖ ಎಂದು ಸಂಪೂರ್ಣವಾಗಿ ಅವನನ್ನೇ ನಂಬುತ್ತಾನೆ.

### ವೃತ್ತ : ೮೧

ಮನೆದೈವಂ ಮುಖ್ಯದೈವಂ ಸುಖತರಕುಲದೈವಂ ಪರಾನಂದದೈವಂ
ಮನದೊಳ್ ನಟ್ಟಿರ್ಪ ದೈವಂ ಶರಣಜನಮಹೋತ್ಸಾಹದೈವಂ ಕರಂ ಪೆಂ-
ಪಿನ ದೈವಂ ದೈವದೈವಂ ಸಕಲಸುಕೃತದೈವಂ ಸುಧಾಕಾರದೈವಂ
ಘನದೈವಂ ನೀನೇ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೮೧

**ಅರ್ಥ:** ಮನೆದೈವಂ= ಮನೆದೇವರು; ಮುಖ್ಯದೈವಂ= ಮುಖ್ಯವಾದ ದೇವರು; ಸುಖತರಕುಲದೈವಂ= ಸುಖವನ್ನು ನೀಡುವ ನಮ್ಮ ಕುಲದೈವವು; ಪರಾನಂದ ದೈವಂ =ಪರದ ಆನಂದವನ್ನು ಕೊಡುವ ದೇವರು; ಮನದೊಳ್ = ಮನಸ್ಸಿನಲ್ಲಿ; ನಟ್ಟಿರ್ಪ= ನಟ್ಟಿರುವ; ದೈವಂ= ದೇವರು; ಶರಣಜನ= ಶರಣಜನರು; ಮಹಾ+ ಉತ್ಸಾಹ ದೈವಂ= ಮಹಾ ಉತ್ಸಾಹದ ದೇವರು; ಕರಂ= ಚೆನ್ನಾಗಿ; ಪೆಂಪಿನ= ಹಿರಿಮೆಯು; ದೈವಂ ದೇವರು; ದೈವದೈವ= ದೇವರುಗಳ ದೇವರು (God of Gods) ಸಕಲ= ಎಲ್ಲಬಗೆಯ; ಸುಕೃತ= ಸುದೈವವನ್ನು ಕರುಣಿಸುವ; ದೈವಂ; ಸುಧಾಕಾರ= ಅಮೃತ ರೂಪಿಯಾದ ದೈವಂ; ಘನದೈವಂ= ಘನವಾದ ದೈವ ನೀನೇ ಪಂಪಾಪುರದ ಒಡೆಯನಾದ ವಿರೂಪಾಕ್ಷನೇ ನನ್ನನ್ನು ರಕ್ಷಿಸು.

**ಭಾವಾರ್ಥ:** ಪಂಪಾಪತಿ ವಿರೂಪಾಕ್ಷನೇ ಮನೆದೇವರು, ಮುಖ್ಯ ದೇವರು, ಕುಲದೇವರು, ಪರದ ಆನಂದವನ್ನು ಕೊಡುವಂಥ ದೇವರು, ಮನದಲ್ಲಿ ಬೇರೂರಿದ ದೇವರು, ಶರಣಜನರ ಮಹಾ ಉತ್ಸಾಹದ ದೇವರು, ಹಿರಿ

ಮೆಯ, ಹೆಗ್ಗಳಿಕೆಯ ದೇವರು. ಅಷ್ಟೇಕೆ ಪಂಪಾಪತಿ ವಿರೂಪಾಕ್ಷ ಸ್ವಾಮಿಯು ದೇವರದೇವರು ಸಕಲ ಸುಕೃತವನ್ನು ದಯಪಾಲಿಸುವ ದೇವರು. ಕೊನೆಗೆ, ಅಮೃತಸ್ವರೂಪಿಯಾದವನೂ ನೀನೆ. ಅಂಥ ಶ್ರೀ ವಿರೂಪಾಕ್ಷ ಸ್ವಾಮಿಯು ನನ್ನನ್ನು ರಕ್ಷಿಸಲಿ.

ಟಿಪ್ಪಣಿ : ಎಷ್ಟು ಬಗೆಯ ದೈವಗಳನ್ನು ಊಹಿಸಲು ಬಹುದೋ ಅಷ್ಟೆಲ್ಲ ಬಗೆಯ ದೈವಗಳನ್ನು ಶ್ರೀ ವಿರೂಪಾಕ್ಷ ಸ್ವಾಮಿಯಲ್ಲೇ ಕಾಣುತ್ತಾನೆ ಈ ಕವಿ.

## ವೃತ್ತ : ೮೨

ಪರಮಾರ್ಥಂ ನಿಮ್ಮ ಸಮ್ಯಕ್ ಪರತರನಿಜಮಂ ಭಾವಿಸಲ್ ತಾ-
ಮರಸೋದ್ಭೂತಂಗೆ ಶಕ್ರಂಗಸುರರಿಪುಗೆ ವೇದಕತರ್ಕ್ಯಂ ದಲೆಂದಂ
ನೊರೆವಂತಾಂ ಮರ್ತ್ಯನೆಂಬೀ ವಚನವೇ ಪರಿಹಾಸಾಸ್ಪದ ದೇವ ನೀನೇ
ಕರುಣಂಗೆಯುತ್ತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ . ೮೨

ಅರ್ಥ: ಪರಮಾರ್ಥಂ= ಶ್ರೇಷ್ಠವಾದ ಸತ್ಯ; ಸತ್ಯಸ್ಯಸತ್ಯ; ನಿಮ್ಮ ಸಮ್ಯಕ್ =ನಿಮ್ಮ ಸರಿಯಾದ; ಪರತರ ನಿಜವಂ= ಆಧ್ಯಾತ್ಮ ಸ್ವರೂಪವನ್ನು; ಭಾವಿಸಲ್= ಬಗೆಯಲು; ಬಣ್ಣಿಸಲ್= ವರ್ಣಿಸಲು; ತಾಮರಸ= ಕಮಲದಲ್ಲಿ; ಉದ್ಭೂತಂಗೆ= ಹುಟ್ಟಿದವನಿಗೆ (ಬ್ರಹ್ಮನಿಗೆ); ಶಕ್ರಂಗೆ= ಇಂದ್ರನಿಗೆ; ಅಸುರರಿಪುಗೆ= ರಾಕ್ಷಸರ ವೈರಿಗಳಾದ ವಿಷ್ಣುವಿಗೆ; ವೇದಕೆ= ವೇದಗಳಿಗೆ; ಅತರ್ಕ್ಯಂ= ತರ್ಕಗಳಿಗೆ ಸಿಲುಕಲಾರದವನು; ದಲ್ = ನಿಜವಾಗಿಯೂ; ಎಂದಂ ನೊರೆವಂತೆ= ಎಂದು ಹೇಳುತ್ತಿರಲಾಗಿ; ಆಂ= ನಾನು ಮರ್ತ್ಯನ್= ಮನುಷ್ಯನು; ಎಂಬ; ಈ ವಚನವೇ= ಈ ಮಾತೇ ಪರಿಹಾಸಾಸ್ಪದಂ= ನಗೆಪಾಟಲು; ದೇವ ನೀನೇ ಕರುಣಂಗೆಯ್ಯುತ್ತೆ= ಕರುಣೆಯಿಟ್ಟು ಪಂಪಾಪುರದ ಅರಸನಾದ ವಿರೂಪಾಕ್ಷ ಸ್ವಾಮಿಯೇ ನನ್ನನ್ನು ರಕ್ಷಿಸು.

ಭಾವಾರ್ಥ: ನಿಮ್ಮ ಸರಿಯಾದ ಆಧ್ಯಾತ್ಮ ಸ್ವರೂಪವೇನು ಎಂಬುದನ್ನು ಬಗೆಯಲು ಬಣ್ಣಿಸಲು ಬ್ರಹ್ಮ ವಿಷ್ಣು ಇಂದ್ರರಿಂದಲೇ ಸಾಧ್ಯವಿಲ್ಲ.

ವೇದಗಳ ತರ್ಕಕ್ಕೆ ಸಿಲುಕುವುದಿಲ್ಲ ಎಂದು ಹೇಳುತ್ತಿರಲಾಗಿ ಹುಲುಮನುಜನಾದ ನೀನು ಅವನ ವಿಚಾರವನ್ನು ಬಣ್ಣಿಸೇನು ? ಬಗೆದೇನು. ಈ ಮಾತೇ ಕೇವಲ ನಗೆಪಾಟಲು. ಹೀಗಿರುವುದರಿಂದ ನನ್ನನ್ನು ನೀನು ಕೃಪೆಯಿಟ್ಟು ರಕ್ಷಿಸು.

ಟಿಪ್ಪಣಿ : ಶಿವನಿಂದ ಬೇರೆಯಾಗಿ ಬಂದ ಜೀವ, ತನಗೆ ಸುತ್ತಿದ್ದ ಮಾಯಾಯವನಿಕೆಯನ್ನು ಅನಂತ ಸಾಧನೆ, ಘೋರ ಸಂಗ್ರಾಮದಲ್ಲಿ ಅನೇಕಾನೇಕ ಜನ್ಮಜನ್ಮಾಂತರಗಳಲ್ಲಿ ಹೋರಾಡಿ ಕೊನೆಗೆ ಕ್ರಮೇಣ, ಮೆಲ್ಲಮೆಲ್ಲನೆ ಜೀವನಿಗೆ ಶಿವನದರ್ಶನವಾಗುತ್ತದೆ. ಶಿವಸಾಯುಜ್ಯ, ಶಿವಸಾಮಿಪ್ಯ ಸಾಲೋಕ್ಯದಿಂದ ಬೇರೆಯಾಗಿಬಂದ ಜೀವ (Colonists from immortality) ಅಮೃತತ್ವದಿಂದ ವಲಸೆಬಂದವರೆಂದು ಶ್ರೀ ಅರವಿಂದರು ಒಂದೆಡೆ ಹೇಳಿದ್ದಾರೆ. ಮತ್ತೆ ತನ್ನ ಸ್ವಸ್ಥಾನಕ್ಕೆ ನುರಳಲು ಇಷ್ಟೆಲ್ಲ ಅನಂತಕ್ಲೇಶಗಳನ್ನು ದಾಟ ಸಿದ್ಧವಾಗುತ್ತದೆ ಆ ಶಿವದರ್ಶನದ ಸುಖವನ್ನು ಬಗೆಯುವುದಾದರೂ ಹೇಗೆ ? ಬಣ್ಣಿಸುವುದಾದರೂ ಹೇಗೆ ? ಮೂಕ ಸವಿದಸಕ್ಕರೆಯ ರುಚಿಯಂತೆ ಎಂದೂ; ಮೂಗ ಕಂಡ ಕನಸಿನಂತೆ ಎಂದೂ ಅವನ ಸ್ವರೂಪವನ್ನು ಬಣ್ಣಿಸಲಾಗದು ಎಂದಿದ್ದಾರೆ. ಶ್ರೀರಾಮಕೃಷ್ಣರು ತಮ್ಮದೊಂದು ದೃಷ್ಟಾಂತ ಕತೆಯಲ್ಲಿ : "ಉಪ್ಪಿನ ಬೊಂಬೆ ಸಮುದ್ರದ ಆಳವನ್ನು ಕಂಡುಹಿಡಿಯಲು ನೀರಲ್ಲಿ ಮುಳುಗಿತಂತೆ. ಆಳದ ಲೆಕ್ಕವನ್ನು ಒಪ್ಪಿಸುವವರು ಯಾರು ?" ಎಂದು ಕೇಳುತ್ತಾರೆ. ಸಚ್ಚಿದಾನಂದ ಸ್ವರೂಪಿ ಶಿವದರ್ಶನಪಾದವನು ಅದರಲ್ಲಿಯೇ ಲೀನವಾಗಿ ಹೋಗುವನು. ನೀರಲ್ಲಿಬಿದ್ದ ಆನೆಕಲ್ಲಿನಂತೆ ಜೀವ ಶಿವನಲ್ಲಿ ಐಕ್ಯವಾಗಿ ಹೋಗುತ್ತದೆ. ಅದನ್ನೇ ಶರಣರ ಪರಿಭಾಷೆಯಲ್ಲಿ ಲಿಂಗಾಂಗ ಸಾಮರಸ್ಯ ಎನ್ನುತ್ತಾರೆ. ಶಿವಸ್ವರೂಪವನ್ನು ಭಾವಿಸಲು ಬಣ್ಣಿಸಲು ಅಜ ಹರಿ ಇಂದ್ರಾದಿಗಳಿಂದಲೇ ಸಾಧ್ಯವಾಗಿಲ್ಲ ಎಂದಮೇಲೆ ಹುಲುಮನುಜನಿಂದ ಏನುತಾನೆ ಸಾಧ್ಯ ? ಅದು ಕೇವಲ ನಗೆಪಾಟಲು.

ಇಲ್ಲಿ ಕವಿ ಷಟಸ್ಥಳಗಳಲ್ಲಿ ಕೊನೆಯದೂ ಶ್ರೇಷ್ಠವೂ ಆದ ಐಕ್ಯಸ್ಥಲಕ್ಕೆ ಮುಟ್ಟಿದ ಸಾಧಕನ ಸ್ಥಿತಿಯನ್ನು ಬಣ್ಣಿಸಿದ್ದಾನೆ. ಮಣ್ಣು ಕಲ್ಲು ಮರ

ವ್ಯಗವಾಗಿದ್ದು ಮಾನವಜನ್ಮದಲ್ಲಿ ಬಿದ್ದು ಅದರ ಕಷ್ಟ ಕೋಟಲೆ ಕಾರ್ಪ ಣ್ಯಗಳನ್ನು ಈಸಿ, ಸಂಸ್ಕಾರಗೊಂಡು ಪರಿಪಕ್ವವಾಗಿ ಯಾತ್ರೆ ತನ್ನ ಸ್ವಸ್ಥಾನದಲ್ಲಿ ಪ್ರತಿಷ್ಠಾಪಿತನಾಗುವುದನ್ನು ಕವಿ ತೋರಿಸುವನು. ಈ ಸ್ಥಿತಿಯಲ್ಲಿ ಸಾಧಕನ ಮನೋಧರ್ಮವೆಂತಹದು ಎಂಬುದನ್ನು ಬಹುಮನೋಜ್ಞವಾಗಿ, ಧ್ವನಿಪೂರ್ಣವಾಗಿ ಕವಿಮಾಡುತ್ತಾನೆ. ನಿಜವಾಗಿಯೂ ಈ ಕವಿಯ ವೈಜ್ಞಾನಿಕ ದೃಷ್ಟಿ ಆಶ್ಚರ್ಯವನ್ನುಂಟುಮಾಡುತ್ತದೆ.

ವೃತ್ತ: ೮೩

ಬಿಸವಂ ತಾಳ್ದಿರ್ದು ನಿತ್ಯಂ ಸ್ಮರನನುರಿಪಿಯುಂ ಕಾಮಿ ಸರ್ವೇಶ್ವರಂ ಮಾ-
ತ್ರಸಮಂ ಭಿಕ್ಷೇಶ್ವರಂ ಸರ್ವವನಳಿದನಘಂ ಚಂದ್ರನಂ ಸೂಡಿಯುಂ ಕೋ-
ಪಸಮಾಯುಕ್ತಂ ವಿರುದ್ಧಪ್ರಕೃತಿ ತಿಳಿಯದಾರ್ಗಂ ಕೃಪಾವಾರ್ಧಿ ನಿನ್ನಂ-
ಘ್ರಿಸರೋಜಂದೋಱಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೮೩

ಅರ್ಥ: ಬಿಸವಂ = ವಿಷವನು; ತಾಳ್ದಿರ್ದು= ತಾಳಿದ್ದರೂಕೂಡ; ನಿತ್ಯಂ =ಶಾಶ್ವತವಾಗಿರುವೆ; ಸ್ಮರನ= ಕಾಮನನ್ನು; ಉರಿಪಿಯುಂ= ಸುಟ್ಟವನಾದರೂ; ಕಾಮಿ= ಕಾಮಿಯು; ಸರ್ವೇಶ್ವರಂ= ಸರ್ವಕ್ಕೂ ಒಡೆಯನು; ಮತ್ತು ಅಸಮಂ= ಸಾಟಿಯಿಲ್ಲದವನು; ಆದರೂ ಭಿಕ್ಷೇಶ್ವರಂ=ಕಾಪಾಲಧಾರಿಯಾಗಿ ತಿರಿದು ಉಣ್ಣುವ ಭಿಕ್ಷುಕರ ಮುಂದಾಳು. ಸರ್ವಮನ್= ಸರ್ವವನ್ನೂ: ಅಳಿದ= ಬಿಟ್ಟಿರುವವನಾದರೂ; ಚಂದ್ರನಂ=ಚಂದ್ರನನ್ನು; ಸೂಡಿಯುಂ= ಧರಿಸಿದ್ದಾಗ್ಯೂ - ಧರಿಸಿದ್ದರೂಕೂಡ; ಕೋಪಸಮಾಯುಕ್ತಂ= ಕೋಪದಿಂದ ಒಡಗೂಡಿದವನು ವಿರುದ್ಧಪ್ರಕೃತಿ= ನಿನ್ನ ಪ್ರಕೃತಿಯೇ ವಿರುದ್ಧ ಸ್ವಭಾವದ್ದಾಗಿವೆ. ಆರ್ಗಂ= ಯಾರಿಗೂ; ತಿಳಿಯದು; ಕೃಪಾವಾರ್ಧಿ= ಕೃಪೆಯೆಂಬ ಸಮುದ್ರದಂತೆ ಇರುವಾತನೇ; ನಿನ್ನಂಘ್ರಿ= ನಿನ್ನಪಾದಗಳೆಂಬ; ಸರೋಜಂ= ಕಮಲಗಳನ್ನು ತೋಱಿ= ತೋರಿಸಿ ಪಂಪಾಪುರದರಸ ವಿರೂಪಾಕ್ಷ ಸ್ವಾಮಿಯೇ ರಕ್ಷಿಸು.

ಭಾವಾರ್ಥ: ನಿನ್ನನ್ನು ವಿಷಕಂಠನೆಂದು ಬಗೆದು ಬಣ್ಣಿಸೋಣ ಎಂದರೆ ಆ ವಿಷದಿಂದ ಅಬಾಧಿತನಾಗಿ ನಿತ್ಯನಾಗಿರುವೆ. ನಿನ್ನನ್ನು ಕಾಮಾರಿ

ಯೆಂದು ಬಗೆಯೋಣ ಎಂದರೆ, ಪಾರ್ವತಿಯನ್ನು ಅರ್ಧದೇಹದಲ್ಲೇ ಅಡಗಿಸಿ ಟ್ಟುಕೊಂಡಿರುವ ಅರ್ಧನಾರೀಶ್ವರ; ದೊಡ್ಡ ಕಾಮಿ. ನಿನ್ನನ್ನು ಸರ್ವೇಶ್ವರ, ಸಾಟಿಯಿಲ್ಲದವನು ಎಂದು ಭಾವಿಸೋಣವೆಂದರೆ, ಬಿಕ್ಷುಕನ ಅಧಿಪತಿಯಾಗಿ ರುವೆ. ಎಲ್ಲವನ್ನೂ ಬಿಟ್ಟ ಎಂದು ಭಾವಿಸಲು ಚಂದ್ರನನ್ನು ಧರಿಸುವೆ. ಚಂದ್ರನನ್ನು ಧರಿಸಿದ್ದರೂ ಕೋಪದಿಂದ ಕೂಡಿರುವೆ! ಇಂಥ ವಿರುದ್ಧ ಪ್ರಕೃತಿಯ ನಿನ್ನ ಸ್ವಭಾವವನ್ನು, ಸ್ವಸ್ವರೂಪವನ್ನು ತಿಳಿಯುವುದು ಯಾ ರಿಂದಲೂ ಸಾಧ್ಯವಿಲ್ಲ. ಕೃಪಾಸಮುದ್ರನಾದ ನೀನೇ ನಿನ್ನ ಪಾದಕಮಲ ಗಳನ್ನು ತೋರಿ ಉದ್ಧಾರಮಾಡು ವಿರೂಪಾಕ್ಷ ಸ್ವಾಮಿಯೇ.

ಟಿಪ್ಪಣಿ: ಸೃಷ್ಟಿಯೆಲ್ಲವೂ ಅವನಿಂದಲೇ ಆಗಿದೆ. ಅವನಲ್ಲಿಯೇ ಸೃಷ್ಟಿಯೆಲ್ಲವೂ ಅಡಗಿದೆ. "ಸರ್ವಂ ಖಲುವಿದಂ ಬ್ರಹ್ಮ" "ಏಕಮೇವಾ ದ್ವಿತೀಯ ಬ್ರಹ್ಮ" ಎಂಬ ಆಧ್ಯಾತ್ಮಿಕ ಸತ್ಯ ವೇದೋಪನಿಷತ್ತುಗಳ ಕಾಲ ದಿಂದಲೂ ನಮ್ಮ ಜನಮನದಲ್ಲಿ ತುಂಬಿಕೊಂಡಿದೆ. ಆದರೆ, ಎಲ್ಲದೂ ಅವ ನೇ ಎಂಬುದಾದರೆ, "ಅಚೇತನ" ವಾದ ಕಲ್ಲು, ಮಣ್ಣು, ಸಚೇತನವಾದ ಮಾನವರೂ ಒಂದೇನೆ? ಕತ್ತಲೂ ಬೆಳಕೂ, ಜ್ಞಾನ, ಅಜ್ಞಾನ, ಸುಖ ದುಃಖ, ಜಡಚೇತನ, ಶೀತ ಉಷ್ಣ – ಎಲ್ಲವೂ ಒಂದಕ್ಕೊಂದು ವಿರುದ್ಧ ಪ್ರಕೃತಿಯವುಗಳಾದರೂ ವಾಸ್ತವವಾಗಿ ಅವೆಲ್ಲವೂ ಒಂದರಿಂದಲೇ ಆಗಿವೆ. ಜಡಚೇತನ, ಜ್ಞಾನ ಅಜ್ಞಾನ, ವಿದ್ಯಾ ಅವಿದ್ಯಾ, ಕತ್ತಲು ಬೆಳಕು ಒಂದೇ ಕಟ್ಟಿಗೆಯ ಎರಡು ತುದಿಗಳಿದ್ದಂತೆ, ಒಂದೇ ನಾಣ್ಯದ ಎರಡು ಮಗ್ಗಲುಗ ಳಿದ್ದಂತೆ, ಒಂದೇ ಹಾಳೆಯ ಎರಡು ಮೈಗಳಿದ್ದಂತೆ ಎಂಬುದನ್ನು ಶ್ರೀ ಅರ ವಿಂದ ಮಹರ್ಷಿಗಳು ಅತ್ಯಂತ ವೈಜ್ಞಾನಿಕವಾಗಿ ತೋರಿಸಿಕೊಟ್ಟಿದ್ದಾರೆ. ಬಹುಶಃ, ಜೀವರಿಗೆ ಬ್ರಹ್ಮನ, 'ಸರ್ವಂ ಖಲುವಿದಂ ಬಹ್ಮ' 'ಏಕ ಮೇವಾ ದ್ವಿತೀಯ ಬ್ರಹ್ಮ' ಎಂಬ ಸತ್ಯವನ್ನು ನಿತ್ಯವೂ ಎತ್ತಿ ಹಿಡಿಯಲೆಂದೇ ಶಿವನ ರೂಪವನ್ನು ಈ ವಿರುದ್ಧ ಗುಣಗಳಿಂದ ಚಿತ್ರಿಸಿದ್ದರೂ ಇರಬೇಕು! ಶಿವನ ಈ ಸ್ವರೂಪ, ಸತ್ಯವನ್ನು ಕಂಡ ದ್ರಷ್ಟಾರರು ನಿರ್ಮಿಸಿದ ಒಂದು ಪ್ರತಿಮಾ ಮೂರ್ತಿ. ಋಷಿ, ದ್ರಷ್ಟಾರ ತಾನು ಕಂಡ ಸತ್ಯವನ್ನು ಮಾತಿನಿಂದ ಯಥಾ ವತ್ತಾಗಿ ಮೂಡಿಸಲಾರದೆ, ಈ ಪ್ರತಿಮೆಯಲ್ಲಿ ತನ್ನ ದರ್ಶನವನ್ನು ಮೂಡಿ

ಸಿರಬೇಕು. ಇಲ್ಲಡೆಹೋದರೆ ವಿಷವನ್ನು ಕುಡಿದ ವಾಸ್ತವ ವ್ಯಕ್ತಿಯೆಂದೂ, ಪಾರ್ವತಿಯನ್ನು ತನ್ನ ಅರ್ಧದೇಹದಲ್ಲಿ ಸಿಕ್ಕಿಸಿಕೊಂಡವನೆಂದೂ .... ಹಣೆಯಲ್ಲಿ ಕಣ್ಣುಳ್ಳವನೆಂದೂ ಬಗೆದರೆ ಕೇವಲ ಕುಚೋದ್ಯವೂ, ಬಾಲಿಶ ಭ್ರಮೆಯೂ ಆದೀತು. ಭಾರತೀಯ ಕಲೆಯನ್ನು, ಕಾವ್ಯವನ್ನು, ದರ್ಶನವನ್ನು ಅನುದಾರವಾಗಿ ಟೀಕಿಸುವ ಪಾಶ್ಚಾತ್ಯರ ದೃಷ್ಟಿ, ಕಣ್ಗೆ ಕಾಣುವ ಕೈಗೆ ತಾಕುವ ಈ ಪ್ರಪಂಚದಿಂದ ಆಚೆಗೆ ಒಂದು ಕೂದಲೆಳೆಯಷ್ಟು ಹರಿಯಲಾರದು. ಈ ಕಲೆ, ಕಾವ್ಯ ಎಲ್ಲದೂ, ಆ ಕಲೆಗಾರ, ಕವಿ ಕಂಡ ಕಾಣ್ಕೆಯನ್ನು ಮೂಡಿಸಲು ಯೋಚಿಸಿಕೊಂಡ ಪ್ರತಿಮಾ ಸಂವಿಧಾನ ಎಂಬುದನ್ನು ಅವರು ಗ್ರಹಿಸಲಾರರು. ಆದ್ದರಿಂದಲೇ ನಮ್ಮ ಶಿವನನ್ನು ನೋಡುವಾಗ ಅವರು ಗಹಗಹಿಸಿ ನಗುತ್ತಾರೆ. ಮೌಢ್ಯವೆಂದು ತಿರಸ್ಕಾರದಿಂದ ನೋಡುತ್ತಾರೆ! ಅಯ್ಯೋ ಪಾಪ!

ವೃತ್ತ: ೮೪

ಸ್ಥಿರವಲ್ಲಂ ನೋಡೆ ಸರ್ಗಸ್ಥಿತಿಲಯವಾಗಿರ್ಪುದಿಂತೀ ಪ್ರಪಂಚಂ
ಸ್ಥಿರರೂಪಂ ನೀನೆ ಕರ್ಮದ್ವಿತಯವಿರಹಿತ ನೀನೆ ಶುದ್ಧಾತ್ಮಕಂ ನೀ-
ನೆ ರಸಾದಿವ್ಯೋಮದಿಕ್ಪೂರಿತ ನಿಜನಿಧಿ ನೀನೆಂಬಭಿಜ್ಞಾನಮಂ ಮದ್-
ಗುರುವೇ ನೀನಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೮೪

ಅರ್ಥ: ನೋಡೆ= ವಿಚಾರಮಾಡಿ ನೋಡಲಾಗಿ; ಪ್ರತ್ಯಕ್ಷವಾಗಿ= ಕಣ್ಣಾರೆ ಕಾಣಲಿಕ್ಕಾಗಿ; ಈ ಪ್ರಪಂಚಂ= ಈ ಲೋಕವು; ಸ್ಥಿರವಲ್ಲಂ= ಶಾಶ್ವತವಲ್ಲ; ಸರ್ಗ= ಸೃಷ್ಟಿ; ಸ್ಥಿತಿ= ಇರುವಿಕೆ; ಲಯ= ಹಾಳಾಗುವಿಕೆಯಿಂದ; ಸೃಷ್ಟಿಸ್ಥಿತಿ ಲಯಮಯವಾಗಿದೆ; ಸ್ಥಿರರೂಪಂ= ಸ್ಥಿರವಾದ ರೂಪುಳ್ಳವನು ಎಂದರೆ ನೀನೊಬ್ಬನೇ; ಕರ್ಮ= ಕರ್ಮಗಳಿಂದಲೂ; ದ್ವಿತೀತಯ= ದ್ವಂದ್ವಗಳಿಗೆ ಅತೀತವಾದವನೂ ನೀನೆ; ಶುದ್ಧಾತ್ಮಕಂ =ಕೇವಲ ಪರಿಶುದ್ಧವಾದ ಪರಮಾತ್ಮನೂ ನೀನೆ; ರಸ= ಪೃಥಿವಿ; ದಿವ್ಯೋಮ= ಆಕಾಶ; ದಿಕ್ಪೂರಿತ= ಅಷ್ಟದಿಕ್ಕುಗಳಲ್ಲೂ ತುಂಬಿಕೊಂಡ; ನಿಜ= ಸತ್ಯವಾದ; ನಿಧಿ= ಸಂಪತ್ತು ನೀನೆಂಬ= ನೀನೇ ಎಂಬ; ಅಭಿಜ್ಞಾನ= ಸರಿಯಾದ ತಿಳುವಳಿಕೆ; ಆಧಾರ ಸಹಿತವಾದ ಜ್ಞಾನವನ್ನು ಕೊಟ್ಟು ನನ್ನನ್ನು ರಕ್ಷಿಸು ಸ್ವಾಮಿಯೇ.

**ಭಾವಾರ್ಥ:** ಯೋಚನೆಮಾಡಿ ನೋಡಿದರಾಗಲೀ, ಕಣ್ಣಾರೆ ಕಾಣುವುದಾಗಲೀ ಈ ಪ್ರಪಂಚವೆಲ್ಲವೂ ಅಸ್ಥಿರವಾದುದು. ಈ ಅಸ್ಥಿರ ಪ್ರಪಂಚದ ಸ್ಥಿರವಾದುದೆಂದರೆ ಭಗವಂತನೊಬ್ಬನೇ ಕರ್ಮಾತೀತನೂ ದ್ವಂದ್ವಾತೀತನೂ ಅವನೇ. ಪರಿಶುದ್ಧ ಪರಾತ್ಪರ ಪರಬ್ರಹ್ಮ ಸ್ವರೂಪನೂ ಅವನೇ. ಭೂಮಿ ಆಕಾಶಗಳಿಗೂ ಅಷ್ಟದಿಕ್ಕುಗಳಿಗೂ ಹಬ್ಬಿದವನೂ ಅವನೇ. ಈ ಸತ್ಯದ ಸಾಕ್ಷೀಸಹಿತ ಜ್ಞಾನವನ್ನು ಕೊಟ್ಟು ಪಂಪಾಪುರದರಸನಾದ ವಿರೂಪಾಕ್ಷಸ್ವಾಮಿಯು ನನ್ನನ್ನು ರಕ್ಷಿಸಲಿ.

**ಟಿಪ್ಪಣಿ:** ಇಹವೆಲ್ಲ ಮಿಥ್ಯೆ, ನಶ್ವರ; ಪರವೊಂದೇ ಸತ್ಯ ಶಾಶ್ವತ ಎಂಬ ಹಿಂದಿನ ಸತ್ಯವನ್ನು, ಮುಂದುವರಿದ ಆಧ್ಯಾತ್ಮಿಕ ಯುಗದಲ್ಲಿ ಕೊಂಚ ಮಟ್ಟಿಗೆ ಬದಲಾಯಿಸಿ ಒಪ್ಪಿಕೊಳ್ಳಬೇಕಾಗುತ್ತದೆ. ಯಾಕಂದರೆ, 'ಸ್ವರ್ಗ, ಸ್ವರ್ಗವೇ; ಮರ್ತ್ಯ ಮರ್ತ್ಯವೇ ಅವೆರಡೂ ಎಂದೂ ಕೂಡಿ ಬಾಳಲಾರದು' ಎಂಬ ಭಾವನೆ ಈಗ ಶ್ರೀಅರವಿಂದ ದರ್ಶನಪ್ರಚಾರದಲ್ಲಿ ಬಂದಮೇಲೆ, ಬಹುಮಟ್ಟಿಗೆ ಕುಸಿಯುತ್ತಿದೆ. ಈ ಪ್ರಪಂಚವೂ ಆ ಪ್ರಪಂಚದಷ್ಟೇ ಸತ್ಯ! ಆ ಈ ಪ್ರಪಂಚಗಳೆಂಬುವು ವಿರುದ್ಧವಾದುವುಗಳಲ್ಲ. ಎಲ್ಲದೂ ಅವನಿಂದಲೇ ಸೃಷ್ಟಿಯಾದರು, ಅವನ ಶುದ್ಧ ಪರಾತ್ಪರ ಸ್ವರೂಪವಮಾತ್ರ ಸತ್ಯ, ಅವನ ಜೀವಾತ್ಮವಾದ ಪ್ರಕೃತಿ ಅಸತ್ಯ, ಅಶಾಶ್ವತ ಎಂದರೆ ಬುದ್ಧಿಮೆಚ್ಚುವ ಮಾತಲ್ಲ. ಬ್ಯಾಂಕಿನಲ್ಲಿರುವ ಬಂಗಾರದ ಗಟ್ಟಿಯೇ ಸತ್ಯ ಶಾಶ್ವತ ಎಂದೂ ಅದರಿಂದ ತಯಾರಿಸಿದ ಒಡವೆಗಳು ಮಿಥ್ಯೆ, ಅಸತ್ಯ ಎಂದು ಹೇಳುವುದು ಅಷ್ಟೇನೂ ಸತ್ಯವಾದ ಮಾತಲ್ಲ, ಬಂಗಾರ ಹೇಗಿದ್ದರೂ ಬಂಗಾರವೇ! ಆದರೆ ಅದರಮೇಲೆ ಕೀಳು ಲೋಹದ ನೀರು ಕುಡಿಸಿರುತ್ತಾರೆ. ಅದೇ ಮಾಯೆ ಎಂಬುದು. ಅದು ಹರಿದರೆ, ಸ್ವಲ್ಪ ಆ ಮೇಲ್‌ಬಣ್ಣ ಹಾರಿದರೆ ಹಿಂದಿರುವ ಶುದ್ಧ ಸುವರ್ಣ ಗೋಚರಿಸುವುದು. ಈ ಸತ್ಯವು ಈಗ ವೈಜ್ಞಾನವಾಗಿ ಸ್ಥಿರವಾಗಿಹೋಗಿದೆ. ಆದಕಾರಣ ಈ ಪ್ರಪಂಚ ಅಸ್ಥಿರ, ಅಶಾಸ್ವತ, ಎಂಬುನ್ನು ಅದಕ್ಕಿಂತ ಅಸ್ಥಿರ ಅಶಾಶ್ವತ ಎಂದು ಬದಲಾಯಿಸಿಕೊಂಡು ನೋಡಬೇಕು.

## ವೃತ್ತ : ೮೫

ಅಪರಿಚ್ಛಿನ್ನಂ ಸ್ವತಂತ್ರಂ ನಿರವಧಿಯ ಮಳಂ ಶಂಕರಂ ನಿತ್ಯಸಾನಂ-
ದಪದಂ ಶಾಂತಾರ್ಕಕೋಟಿಪ್ರಭನಜರನಚಿಂತ್ಯಂ ಪರಂಧಾಮ ರೂಪಂ
ವಿಪುಳಜ್ಞಾನಾಬ್ಧಿ ಸತ್ಯಂ ನಿರುಪಮನಿಧಿ ನೀನೆಂಬಭಿಜ್ಞಾನಮಂ ನೀಂ
ಕೃಪೆಯಂ ಮಾಡುತ್ತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೮೫

ಅರ್ಥ : ಅಪರಿಚ್ಛಿನ್ನಂ = ಏಕನೂ, ಅಖಂಡನೂ; ಸ್ವತಂತ್ರಂ =ಸರ್ವಸ್ವತಂತ್ರನು; ನಿರವಧಿಯುಮಳಂ= ಆದಿ ಅಂತ್ಯಗಳೆಂಬ ಎರಡು ಅವಧಿಗಳಿಲ್ಲದವನು: ಶಂಕರಂ= ಮಂಗಳಫಲದಾಯಕನು; ನಿತ್ಯಂ= ಶಾಶ್ವತನು; ಸತ್ಯನು; ಆನಂದಪದಂ= ಸಚ್ಚಿದಾನಂದ ಸ್ವರೂಪಿಯು; ಶಾಂತಾರ್ಕಕೋಟಿ ಪ್ರಭನ್= ಶಾಂತಸೂರ್ಯನ ಕೋಟಿಪ್ರಭೆಯಂತೆ ಸ್ವಪ್ರಕಾಶನು; ಅಜರನು= ಮುಪ್ಪಿಲ್ಲದವನು; ಅಚಿಂತ್ಯಂ=ಚಿಂತನೆಗೆ ನಿಲುಕದವನು; ಪರಂಧಾಮರೂಪಂ= ಶ್ರೇಷ್ಠವಾದ ಆಶ್ರಯಸ್ಥಾನದಂತಹ ರೂಪುಳ್ಳವನು; ವಿಪುಳ =ಅನಂತವಾದ; ಜ್ಞಾನಾಬ್ಧಿ= ಜ್ಞಾನವೆಂಬ ಸಮುದ್ರನೂ ಸತ್ಯಂ =ಸತ್ಯಸ್ವರೂಪನು; ನಿರುಪಮನಿಧಿ=ಉಪಮಾತೀತನಾದವನು; ನೀನೆಂಬ ಅಭಿಜ್ಞಾನ= ನಿಶ್ಚಯವಾದ ರುಜುವಾತುಳ್ಳ; ಜ್ಞಾನಮಂ= ತಿಳಿವನ್ನು; ನೀಂ =ನೀನು; ಕೃಪೆಯಂ ಮಾಡುತ್ತೆ= ಕೃಪೆ ಮಾಡಿ ನೀಡಿ; ಪಂಪಾಪುರದರಸನಾದ ವಿರೂಪಾಕ್ಷ ಸ್ವಾಮಿಯೇ ರಕ್ಷಿಸು.

ಭಾವಾರ್ಥ: ಅಖಂಡನೂ, ಸರ್ವಸ್ವತಂತ್ರನೂ, ಆದ್ಯಂತರಹಿತನೂ ಮಂಗಳದಾಯಕನೂ, ನಿತ್ಯನು, ಸಚ್ಚಿದಾನಂದ ಸ್ವರೂಪಿಯೂ, ಸ್ವಪ್ರಕಾಶನೂ, ಮುಪ್ಪಿಲ್ಲದವನೂ, ಶ್ರೇಷ್ಠವಾದ ಆಶ್ರಯಸ್ಥಾನದಂತಿರುವವನೂ, ಸರ್ವರಿಗೂ ಆಶ್ರಯದಾತನೂ, ಅನಂತವಾದ ಜ್ಞಾನನಿಧಿಯೂ, ಸತ್ಯನೂ, ಉಪಮಾತೀತನು ಎಂಬ ಜ್ಞಾನವನ್ನು ಕೊಟ್ಟು ನನ್ನನ್ನು ಕಾಪಾಡು.

ಟಿಪ್ಪಣಿ : ಸಾಧಕ ಅವನನ್ನು ಕಂಡಿದ್ದಾನೆ. ಆದರೆ ಅವನು ಎಂತಹನು ಎಂಬುದನ್ನು ಹೇಳುವುದು ಸಾಧ್ಯವಿಲ್ಲ. ಆದ್ದರಿಂದ ಅವನ ಅನಂತ ನಾಮರೂಪುಗಳನ್ನು ಅನಂತರೀತಿಯಲ್ಲಿ ಬಣ್ಣಿಸಿ ಹಾಡುತ್ತಾನೆ. ೮೫ ರಿಂದ ೯೦ ನೆ ವೃತ್ತದವರೆಗೆ ಶಿವನಸ್ತುತಿಯೇ ತುಂಬಿದೆ ಭಗವದ್ದಿವ್ಯದರ್ಶನ ದೊರೆ

ತಾತನು ಅವನನ್ನು ಮೈಮರೆತು ಕೊಂಡಾಡುತ್ತಾನೆ. ಅವನನ್ನು ಎಷ್ಟು ಹೆಸರಿನಿಂದ ಕರೆದರೂ ಕೊನೆಯೆಲ್ಲಿ ?

**ವೃತ್ತ : ೮೬**

ಸ್ಥೂಲಂ ಸೂಕ್ಷ್ಮಂ ಸುಸೂಕ್ಷ್ಮಂ ಸುಲಭಸುಲಭಂ ಪುಣ್ಯಪಾಪಪ್ರದೂರಂ
ನೀಲಗ್ರೀವಂ ಚಿದಾತ್ಮಂ ಭವನಭವನೂನಾದ್ಯನಾದ್ಯಂತಶೂನ್ಯಂ
ಕಾಲಘ್ನಂ ಕಾಲರೂಪಂ ನತನಿಕರವಿಪಜ್ಜಾಲವಿಚ್ಛೇದಲೀಲಾ-
ಲೋಲಂ ನೀಂ ನೀನೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೮೬

ಅರ್ಥ : ಸ್ಥೂಲಂ=ಸ್ಥೂಲನು; ಜಡರೂಪದಲ್ಲಿ ವ್ಯಕ್ತವಾಗುವವನು; ಸೂಕ್ಷ್ಮಂ = ಬುದ್ಧಿ ಮನಸ್ಸು ಚಿತ್ತದಂತಹ ಸೂಕ್ಷ್ಮರೂಪದಲ್ಲೂ ಇರುವವನು; ಸುಸೂಕ್ಷ್ಮಂ= ಸೂಕ್ಷ್ಮಕ್ಕಿಂತಲೂ ಸೂಕ್ಷ್ಮತರವಾದ ಆತ್ಮದಂತೆ ಇರುವವನು; ಸುಲಭನು= (ಸಾಕ್ಷಾತ್ಕರಿಸಿಕೊಳ್ಳಲು) ಸುಲಭವಾಗಿ ಸಿಗುವವನು; ಅಸುಲಭನು= (ಒಮ್ಮೊಮ್ಮೆ) ಸುಲಭವಾಗಿ ಸಿಗಲಾರದವನು; ಪುಣ್ಯಪಾಪಗಳಿಂದ; ಪ್ರದೂರಂ= ದೂರವಾದವನು; ಸೋಂಕಿಲ್ಲದವನು; ನೀಲಗ್ರೀವಂ=ವಿಷಕಂಠನು; ಚಿದಾತ್ಮಂ= ಕೇವಲ ಚಿತ್ ಸ್ವರೂಪನು ಆತ್ಮಸ್ವರೂಪನು; ಭವನ್= ಹುಟ್ಟುಳ್ಳವನು; ಅಭವನ್= ಹುಟ್ಟಿಲ್ಲದವನು; ಅನೂನನ್= ಊನವಿಲ್ಲದವನು; ಅಖಂಡನು; ಆದ್ಯನ್= ಆದಿಗೆ ಆದಿಯೂ; ಅನಾದ್ಯಂತಶೂನ್ಯಂ= ಆದ್ಯಂತರಹಿತನು; ಕಾಲಘ್ನಂ=ಯಮನನ್ನು ಗೆದ್ದವನು; ಕಾಲರೂಪಂ =ಕಾಲರೂಪನೇ ಅವನು; ನತನಿಕರಂ =ಸ್ತೋತ್ರಗಳಿಂದ ತುಂಬಲ್ಪಟ್ಟವನು; ವಿಪಜ್ಜಾಲ= ಕಷ್ಟಪರಂಪರೆಗಳನ್ನು; ವಿಚ್ಛೇದ= ಸಂಹರಿಸುವ; ಲೀಲಾಲೋಲ= ಲೀಲೆಯಲ್ಲಿ ಮಗ್ನನಾದವನು; ನೀಂ= ನೀನೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಸು.

ಭಾವಾರ್ಥ : ಸ್ಥೂಲನು, ಸೂಕ್ಷ್ಮನೂ, ಸುಸೂಕ್ಷ್ಮನು, ಸುಲಭನೂ, ಅಸುಲಭನೂ, ಪಾಪಪುಣ್ಯಗಳಿಂದ ನಿರ್ಲಿಪ್ತನೂ, ನೀಲಕಂಠನೂ, ಚಿದಾತ್ಮರೂಪನೂ, ಹುಟ್ಟುವವನೂ, ಆದ್ಯಂತದಾಚೆಗಿರುವಾತನೂ, ಯಮನನ್ನು ಸಂಹರಿಸಿದವನು, ಕಾಲರೂಪನು, ಕಷ್ಟಪರಂಪರೆಗಳನ್ನು ಸಂಹರಿಸುವ ಲೀಲೆಯಲ್ಲಿ ತೊಡಗಿರುವವನೂ ಆದ ನೀನೇ ನನ್ನನ್ನು ರಕ್ಷಿಸಿ ಕಾಪಾಡು.

**ಟಿಪ್ಪಣಿ :** ಸರ್ವಸೃಷ್ಟಿಯ ಆದಿಯಾದ ಆತ್ಮನು ಸ್ಥೂಲ, ಸೂಕ್ಷ್ಮ, ಸುಸೂಕ್ಷ್ಮನಾಗಿರುವುದರಲ್ಲಿ ಆಶ್ಚರ್ಯವಿಲ್ಲ, ಭಗವಂತನನ್ನು ಒಲಿಸುವುದು ಕೆಲವರಿಗೆ ಸುಲಭ; ಕೆಲವರಿಗೆ ಕಷ್ಟ. ಅವನು ಶಿಶುಸ್ವಭಾವದವನು. ಕೈಯಲ್ಲಿರುವ ಬೊಂಬೆಯನ್ನು ಮಗು ಎಷ್ಟು ಕೇಳಿದರೂ ಕೊಡುವುದಿಲ್ಲ, ಆಗ ಆ ಮಗು ಸುಲಭನಲ್ಲ. ಆದರೆ ಮತ್ತೊಬ್ಬರು ಬಂದು ಒಂದೇ ಬಾರಿ ಕೇಳುತ್ತಾರೆ. ಮಗು ಕೈಲಿದ್ದುದನ್ನು ಎಸೆದು ಬಿಡುತ್ತದೆ. ಹಾಗೆಯೇ ಭಗವತ್ಕೃಪೆಯೂ ವಿಚಿತ್ರವಾದುದು. ಪೂರ್ವಜನ್ಮ ಸಂಸ್ಕಾರ, ಪುಣ್ಯವಿಶೇಷವಿದ್ದವರಿಗೆ ಭಗವಂತ ಸುಲಭನೆ. ಅವಿಲ್ಲದವರಿಗೆ ಕಷ್ಟದಾಯಕನೇ. ಅವನಿಗೆ ಪಾಪ ಪುಣ್ಯಗಳೆಂಬುವೇ ಇಲ್ಲ. ಪಾಪಪುಣ್ಯ ಎಂಬುವು ಮನುಷ್ಯ ಬುದ್ಧಿ ನಿರ್ಮಿತ ಭಾವನೆಗಳು. ಯಾವುದು ಪಾಪ, ಯಾವುದು ಪುಣ್ಯ – ಎಂಬ ವಿಚಾರದಲ್ಲಿ ಮನುಷ್ಯ ತನ್ನ ತರ್ಕಬುದ್ಧಿಯನ್ನು ಬಳಸುತ್ತಾನೆ. ಆದರೆ, ಶ್ರೀರಾಮನಂತೆ, ಶ್ರೀಕೃಷ್ಣನಂತೆ ಅತಿಮನಸ್ಸಿನಿಂದ ವ್ಯವಹರಿಸುವವರಿಗೆ ಪಾಪಪುಣ್ಯಗಳೆಂಬುವೇಯಿಲ್ಲ. ಕರ್ಣನ ರಥನಗಾಲಿ ಕೆಸರಿನಲ್ಲಿ ಹೂತಿದ್ದಾಗ ಅರ್ಜುನನಿಂದ ಅವನನ್ನು ಕೊಲ್ಲಿಸುವುದು ನಮ್ಮ ನಿಮ್ಮ ದೃಷ್ಟಿಯಲ್ಲಿ ಪಾಪವಾಗಿ ಅಧರ್ಮವಾಗಿ ಕಾಣಬಹುದು. ಮರದ ಮರೆಯಲ್ಲಿ ನಿಂತು ವಾಲಿಯನ್ನು ಸಂಹರಿಸುವುದು, ನಮ್ಮ ಬುದ್ಧಿಗೆ ಪಾಪವೆಂದು ತೋರೀತು. ಆದರೆ, ಶ್ರೀಕೃಷ್ಣ, ಶ್ರೀರಾಮರು ಯಾವ ಅತಿಮನಸ್ಸಿನ ಮಟ್ಟದಲ್ಲಿ ವ್ಯವಹರಿಸಿ ಆ ಕಾರ್ಯಗಳನ್ನು ಎಸಗಿದರೋ ಆ ಅತಿಮನಸ್ಸಿನ ಮಟ್ಟದಲ್ಲಿ ನಿಂತು ನೋಡುವಾಗ ಅದೆಲ್ಲವೂ ಧರ್ಮವಾಗಿ ತೋರಿತೋ ಏನೋ! ನಮ್ಮ ಈ ಪರಿಮಿತ ಮರ್ತ್ಯಮತಿಯಿಂದ, ಅವನ ಆ ಅಪರಿಮಿತ ಅಮರ್ತ್ಯಮತಿಯನ್ನು ಅಳೆದು ತೂಗಿ ನೋಡುವುದು, ಗಜದಕಡ್ಡಿಯಿಂದ ನೀರನ್ನು ಅಳೆದಂತೆಯೂ, ಸೇರಿನಲ್ಲಿ ಬಟ್ಟೆಯನ್ನು ಅಳೆದಂತೆಯೂ ಆದೀತು! ಅವನು, 'ಪಾಪಪುಣ್ಯ' ಎಂಬ ನಮ್ಮ ನಾವು ಕಲ್ಪಿಸಿಕೊಂಡಿರುವ ಭಾವನೆಗಳಿಗೆ ಅತೀತನು.

ವೃತ್ತ: ೮೭

ಶಿವ ಸರ್ವಾಧಾರ ಗಂಗಾಧರ ಪುರಹರ ಸರ್ವಜ್ಞ ಸರ್ವೇಶ ಗೌರೀ–
ಧವ ನೀಲಗ್ರೀವ ಕಾಲಾಂತಕ ಪಶುಗತಿ ಫಾಲಾಕ್ಷ ಭೋಗೀಂದ್ರಭೂಷಾ–

ಭವ ರುದ್ರೇಶಾನ ಭರ್ಗ ಪ್ರಮಥನಿಧಿ ಮಹಾದೇವ ಮಾರಾರಿ ನಿತ್ಯೋ-
ತ್ಸವ ಸತ್ಯಪ್ರೇಮಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೮೭

ಅರ್ಥ: ಶಿವ= ಮಂಗಳಕರನು; ಸರ್ವಾಧಾರ= ಸರ್ವಕ್ಕೂ ಆಧಾರನು; ಗಂಗಾಧರ= ಗಂಗೆಯನ್ನು ಧರಿಸಿದವನು; ಪುರಹರ= ತ್ರಿಪುರರೆಂಬ ರಾಕ್ಷಸರನ್ನು ಸಂಹರಿಸಿದವನು; ಸರ್ವಜ್ಞ= ಸರ್ವವನ್ನು ತಿಳಿದವನು; ಸರ್ವೇಶ= ಸರ್ವಕ್ಕೂ ಒಡೆಯನು ಗೌರೀಧವ= ಗೌರಿಯನ್ನು ವರಿಸಿದವನು; ನೀಲಗ್ರೀವ= ನೀಲಕಂಠ; ಕಾಲಾಂತಕ= ಯಮನನ್ನು ಸಂಹರಿಸಿದವನು. ಪಶುಪತಿ; ಫಾಲಾಕ್ಷ= ಹಣೆಯಲ್ಲಿ ಕಣ್ಣುಳ್ಳವನು; ಭೋಗೀಂದ್ರ= ಹಾವುಗಳನ್ನು; ಭೂಷಾಭವ= ಭೂಷಣವಾಗಿ ಧರಿಸಿದವನು; ರುದ್ರೇಶ =ಸಂಹಾರ ಕರ್ತೃವಾದ ರುದ್ರನೂ; ಭರ್ಗ=ಸ್ವಪ್ರಕಾಶನು; ಪ್ರಮಥನಿಧಿ= ಪ್ರಮಥರಿಗೆ ನಿಧಿಯಾದವನು; ಮಹಾದೇವ; ಮಾರಾರಿ=ಮನ್ಮಥನನ್ನು ಸುಟ್ಟವನು; ನಿತ್ಯೋತ್ಸವ= ನಿತ್ಯವೂ ಉತ್ಸವದಲ್ಲಿ ತಲ್ಲೀನನಾದವನು; ಸತ್ಯಪ್ರೇಮಿಯೂ ಆದ ಪಂಪಾಪುರದ ವಿರೂಪಾಕ್ಷ ಸ್ವಾಮಿಯು ನನ್ನನ್ನು ರಕ್ಷಿಸಲಿ.

ಭಾವಾರ್ಥ: ಶಿವನು, ಸರ್ವಕ್ಕೆ ಆಧಾರನೂ, ಗಂಗೆಯನ್ನು ಧರಿಸಿದವನು, ಪುರಹರನೂ, ಸರ್ವಜ್ಞನೂ, ಸರ್ವಕ್ಕೆ ಒಡೆಯನೂ, ಗೌರಿಯನ್ನು ವರಿಸಿದವನೂ, ನೀಲಕಂಠನೂ, ಯಮನನ್ನು ಗೆದ್ದವನು, ಪಶುಪತಿಯೂ, ತ್ರಿನೇತ್ರನೂ, ನಾಗೇಂದ್ರಹಾರನೂ, ಕಾಲರುದ್ರನೂ, ಸ್ವಪ್ರಕಾಶನೂ, ಪ್ರಮಥರಿಗೆ ನಿಧಿಯಾದವನೂ, ಮನ್ಮಥನನ್ನು ಸಂಹರಿಸಿದವನೂ, ನಿತ್ಯ ಉತ್ಸವದಲ್ಲಿ ಲೀನವಾದವನೂ, ಸತ್ಯಪ್ರೇಮಿಯೂ ಆದ ಪಂಪಾಪುರದ ಒಡೆಯನಾದ ವಿರೂಪಾಕ್ಷಸ್ವಾಮಿಯು ನನ್ನನ್ನು ರಕ್ಷಿಸಲಿ.

ವೃತ್ತ: ೮೮

ಗಿರಿಶ ಶ್ರೀಕಂಠ ದಕ್ಷಾಧ್ವರಹರ ವೃಷಭಾರೂಢ ಕಾಪಾಲಿಯಂಧಾ-
ಸುರವೈರಿ ವ್ಯೋಮಕೇಶ ಕ್ರತುಕುಲನೃಪತಿ ಸ್ಥಾಣು ಭೂತೇಶ ಪಂಚಾ-
ವರಣಪ್ರತ್ಯಕ್ಷ ಪಂಚಾನನ ಮೃಡ ಗಜಚರ್ಮಾಂಬರಶ್ರೇಷ್ಠ ವಿಶ್ವೋ-
ದರ ಸದ್ಯೋಜಾತ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೮೮

ಅರ್ಥ : ಗಿರಿಶ= ಗಿರೀಶ; ಶ್ರೀಕಂಠ= ಮಂಗಳಕರವಾದ ಕಂಠವುಳ್ಳವನು; ದಕ್ಷಾಧ್ವರಹರ=ದಕ್ಷಬ್ರಹ್ಮನಿಂದ ನಡೆಸಲ್ಪಟ್ಟ ಯಜ್ಞವನ್ನು ಧ್ವಂಸಮಾಡಿದವನು; ವೃಷಭಾರೂಢ= ವೃಷಭವಾಹನನು; ಕಾಪಾಲಿ= ಕಪಾಲವನ್ನು ಧರಿಸಿದವನು; ಅಂಧಾಸುರ = ಅಂಧಕಾಸುರನನ್ನು ಕೊಂದವನು; ವ್ಯೋಮಕೇಶಿ= ಆಕಾಶವೇ ಕೇಶವಾಗಿವುಳ್ಳವನು; ಕ್ರತುಕುಲನೃಪತಿ= ಯಾಗಗಳ ಅಧಿಪತಿಯು; ಸ್ಥಾಣು=ಅಚಲನು; ಸ್ಥಿರವಾದವನು; ಸತ್ಯವಾದವನು; ಭೂತೇಶ= ಭೂತಗಳಿಗೆಲ್ಲ ಒಡೆಯನಾದವನು; ಪಂಚಾವರಣ ಪ್ರತ್ಯಕ್ಷ= ಪಂಚಾನನ= ಐದುಮುಖಗಳುಳ್ಳವನು; ಮೃಡ= ಮೃತ್ಯುಂಜಯನು; ಗಜಚರ್ಮಾಂಬರ ಶ್ರೇಷ್ಠ= ಆನೆಯ ಚರ್ಮವನ್ನು ಧರಿಸಿದ ಶ್ರೇಷ್ಠನು. ವಿಶ್ವೋದರ =ವಿಶ್ವವನ್ನೇ ಉದರದಲ್ಲಿ ಧರಿಸಿದವನು - ವಿರಾಟ್‌ರೂಪನು, ಸದ್ಯೋಜಾತನು (ಸದ್ಯೋಜಾತ ಎಂದರೆ ಆಗ ತಾನೆ ಹುಟ್ಟಿದವನು ಎಂಬರ್ಥವುಂಟು) ಪಂಪಾಪುರದ ಅರಸನಾದ ವಿರೂಪಾಕ್ಷ ಸ್ವಾಮಿಯೇ ನನ್ನನ್ನು ರಕ್ಷಿಸು.

ಭಾವಾರ್ಥ : ಪ್ರತಿಪದಾರ್ಥದಲ್ಲಿಯೇ ಭಾವಾರ್ಥವು ಸ್ಪಷ್ಟವಾಗಿದೆ. ಇಲ್ಲಿ ಹೇಳಲಾದ ಪೂರ್ವಕಥೆಗಳಿಗೆ ಪುರಾಣನಾಮ ಚೂಡಾಮಣಿಯನ್ನು ನೋಡಬಹುದು..

ವೃತ್ತ: ೮೯

ಹರಭೀಮ ತ್ರ್ಯಕ್ಷ ಭಕ್ತವ್ರಜಹೃದಯ ಪಿನಾಕಿ ತ್ರಿಶೂಲಿ ತ್ರಿಕಾಲಾ-
ಕ್ಷರನಿರ್ದೇಹಾಭವಾ ಧೂರ್ಜಟಿ ಜಟಿಲಶಿರೋಮಾಲಿ ಶಂಭು ಪ್ರಪಂಚೋ-
ತ್ತರ ಪಂಚಬ್ರಹ್ಮ ಪಂಚಾಧಿಕ ಹಿಮಕರಚೂಡಾಮಣೀ ವೀರಭದ್ರೇ-
ಶ್ವರ ಕಾಲಾತೀತ ಪಂಪಾಪುರವರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೮೯

ಅರ್ಥ : ಹರ; ಭೀಮ= ಭಯಂಕರವಾದವನು, ರುದ್ರನು; ತ್ರ್ಯಕ್ಷ =ಮುಕ್ಕಣ್ಣ; ಭಕ್ತವ್ರಜಹೃದಯ =ಭಕ್ತಸಮೂಹದ ಹೃದಯದಲ್ಲಿರುವವನು; ಪಿನಾಕಿ= ಪಿನಾಕ ಎಂಬ ಆಯುಧವನ್ನು ಧರಿಸಿದವನು; ತ್ರಿಶೂಲಿ= ತ್ರಿಶೂಲವನ್ನು ಧರಿಸಿದವನು; ತ್ರಿಕಾಲಾಕ್ಷರ= ತ್ರಿಕಾಲಗಳಲ್ಲೂ ಕ್ಷಯವಿಲ್ಲದವನು; ನಿರ್ದೇಹ = ದೇಹವಿಲ್ಲದವನು; ಅಭವಾ= ಹುಟ್ಟುಯಿಲ್ಲದವನು; ಧೂರ್ಜಟಿ= ಜಟಾಧಾರಿಯೂ; ಜಟಿಲಶಿರೋಮಾಲಿ= ಶವಶಿರಗಳ

ಮಾಲೆಯನ್ನು ಧರಿಸಿದವನು; ಶಂಭು= ಮಂಗಳಕರನು; ಮಂಗಳವನ್ನುಂಟುಮಾಡುವವನು; ಪ್ರಪಂಚೋತ್ತರ =ಪ್ರಪಂಚದ ಹೆಮ್ಮೆಯನ್ನುಂಟುಮಾಡುವವನು; ಪಂಚಬ್ರಹ್ಮ= ಶಿವ; ಪಂಚಾಧಿಕ=ಪಂಚಭೂತಗಳಿಗಿಂತಲೂ ಅಧಿಕನು; ಹಿಮಕರ= ಚಂದ್ರ; ಚೂಡಾಮಣೀ= ಧರಿಸಿದವನು; ಚಂದ್ರಚೂಡನು; ವೀರಭದ್ರೇಶ್ವರ= ವೀರಭದ್ರನಿಗೆ ಪಿತನೂ, ಕಾಲಾತೀತ =ಕಾಲಕ್ಕೆ ಅತೀತನಾದವನು ಆದ ಪಂಪಾಪುರದರಸ ಒಡೆಯನಾದ ವಿರೂಪಾಕ್ಷಸ್ವಾಮಿಯು ನನ್ನನ್ನು ರಕ್ಷಿಸಲಿ.

ಭಾವಾರ್ಥವು ಮೇಲಿನ ಪ್ರತಿಪದಾರ್ಥದಲ್ಲಿಯೇ ಸ್ಫುಟವಾಗಿರುವುದರಿಂದ ಪ್ರತ್ಯೇಕವಾಗಿ ಭಾವಾರ್ಥವನ್ನು ಬರೆದಿಲ್ಲ.

## ವೃತ್ತ: ೯೦

ವರಕಾರುಣ್ಯಾಬ್ಧಿ ಷಡ್‌ದರ್ಶನಹಿತ ಪರಮಸ್ವಾಮಿ ಸರ್ವಜ್ಞ ಪಂಚಾ-
ಕ್ಷರಗರ್ಭಾವಾಸ ಮಾದ್ಯತ್ ಪ್ರಮಥಜನಪರೀತೋಷ ವಿಶ್ವೇಶ ತತ್ತ್ವಾ-
ಕರ ತಾರಾದ್ರೀಶ ನಾರಾಯಣನಯನಲಸತ್‌ಪಾದ ನಾದಾತ್ಮಭಕ್ತಾ-
ತುರಚಿತ್ತಗ್ರಾಹಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೯೦

ಅರ್ಥ: ವರ= ಒಳ್ಳೆಯ; ಶ್ರೇಷ್ಠವಾದ; ಕಾರುಣ್ಯಾಬ್ಧಿ= ಕರುಣೆಯೆಂಬ ಸಮುದ್ರ; ಷಡ್‌ದರ್ಶನಹಿತ= ಆರು ದರುಶನಗಳಿಗೆ ಹಿತನಾದವನು, ಪರಮಸ್ವಾಮಿ =ಸರ್ವಶ್ರೇಷ್ಠನಾದಸ್ವಾಮಿ; ಸರ್ವಜ್ಞನೂ; ಪಂಚಾಕ್ಷರ= ನಮಃಶಿವಾಯ ಎಂಬ ಪಂಚಾಕ್ಷರೀ ಮಂತ್ರದ; ಗರ್ಭಾವಾಸ =ಗರ್ಭದಲ್ಲಿ ನೆಲೆಸಿರುವವನು; ಮಾದ್ಯತ್= ಪ್ರೇಮರೆಯುವ; ಪ್ರಮಥಜನ ಪರಿತೋಷ= ಪ್ರಮಥಜನ ಸಂತೋಷವನ್ನುಂಟುಮಾಡುವವನು. ವಿಶ್ವೇಶ= ವಿಶ್ವಕ್ಕೇ ಒಡೆಯನಾದವನು; ತತ್ತ್ವಾಕರ =ತತ್ತ್ವಗಳಿಗೆಲ್ಲ ಗಣಿಯೋಪಾದಿಯಲ್ಲಿರುವವನು; ತಾರಾದ್ರೀಶ= ರಜತಾದ್ರೀಶ; ನಾರಾಯಣ= ವಿಷ್ಣುವಿನ; ನಯನ = ಕಣ್ಣಿನ; ಲಸತ್= ಕಾಂತಿಯನ್ನು; ಪಾದ= ಪಾದದಲ್ಲಿ ಪಡೆದಂಥವನು; ನಾದಾತ್ಮ= ಶಬ್ದಬ್ರಹ್ಮನೂ; ಭಕ್ತಾತುರಚಿತ್ತ =ಭಕ್ತರ ಕ್ಷೇಮದಲ್ಲಿ ಆತುರವುಳ್ಳವನೂ ಆದ ಪಂಪಾಪುರದರಸ ವಿರೂಪಾಕ್ಷಸ್ವಾಮಿಯು ನನ್ನನ್ನು ರಕ್ಷಿಸಲಿ.

ಭಾವಾರ್ಥ : ಕಾರುಣ್ಯಮಯನೂ, ಷಡ್‌ದರ್ಶನಗಳಿಗೂ ಹಿತನಾದವನು, ಸರ್ವಶ್ರೇಷ್ಠಸ್ವಾಮಿಯೂ, ಸರ್ವಜ್ಞನೂ, ಪಂಚಾಕ್ಷರೀ ಮಂತ್ರದಲ್ಲಿ ವಾಸಿಸುವವನು, ಪ್ರಮಥ ಜನರಿಗೆ ಸಂತೋಷವನ್ನುಂಟುಮಾಡುವವನೂ ವಿಶ್ವಕ್ಕೆಲ್ಲ ಒಡೆಯನೂ, ವಿಷ್ಣುವಿನ ಕಣ್ಣನ್ನು ತನ್ನ ಪಾದದಲ್ಲಿ ಧರಿಸಿದವನೂ ಶಬ್ದ ಬ್ರಹ್ಮಗೂ ಭಕ್ತರ ಕ್ಷೇಮ ಚಿಂತನೆಯಲ್ಲಿ ನಿರತನಾದವನೂ ಆದ ಪಂಪಾಪುರದ ಒಡೆಯ ವಿರೂಪಾಕ್ಷ ಸ್ವಾಮಿಯು ನನ್ನನ್ನು ರಕ್ಷಿಸಲಿ.

ವೃತ್ತ : ೯೧

ಶಿವ ನಿಮ್ಮಿಂ ಪುಟ್ಟಿತೀ ಮಾಯೆ ಗಡೆನಿಪಿದನಾಂ ಸೈರಿಸೆಂ ಪುಟ್ಟಿತೆಂಬೊಂ-
ದವಿಚಾರಂ ನಿಷ್‌ಕ್ರಿಯಾತ್ಮಪ್ರಭುತನಕೆ ಕರಂ ಹಾನಿ ಶುದ್ಧಾತ್ಮನೊಳ್ ಶಂ
ಭುವಿನೊಳ್ ಸಮ್ಯಕ್‌ಪರಾನಂದದ ತವನಿಧಿಯೊಳ್ ನಿನ್ನೊಳೀ ಭ್ರಾಂತಿ-
ಯೆಂಬಾ
ಶ್ರವೆಯಂ ತಗ್ರೋತ್ತಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೯೧

ಅರ್ಥ : ಶಿವ; ನಿಮ್ಮಿಂ=ನಿಮ್ಮಿಂದ; ಈ ಮಾಯೆ=(ಈ ಪ್ರಕೃತಿ) ಈ ಮಾಯೆ; ಪುಟ್ಟಿತು=ಹುಟ್ಟಿತು; ಗಡೆನಿಪಿದನ್= ಎನ್ನುವ ಇದನ್ನು; ನಾಂ = ನಾನು; ಸೈರಿಸೆಂ= ಸೈರಿಸಲಾರೆನು; ಪುಟ್ಟಿತು =ಎಂಬ+ಒಂದು; ಅವಿಚಾರ= ಅವಿಚಾರವು; ನಿಷ್‌ಕ್ರಿಯಾತ್ಮ = ಕ್ರಿಯಾರಹಿತವಾದ ನಿನ್ನ ಸ್ವಾಮಿತ್ವಕ್ಕೆ; ಕರಂ= ಹೆಚ್ಚಾಗಿ; ಹಾನಿ=ಅಪಚಾರ; ಶುದ್ಧಾತ್ಮನೊಳ್= ಪರಿಶುದ್ಧಾತ್ಮನಾದ; ಶಂಭುವಿನೊಳ್= ಮಂಗಳಕರವಾದ; ಸಮ್ಯಕ್= ಸರಿಯಾದ; ಪರಾನಂದದ= ಆಧ್ಯಾತ್ಮಿಕ ಆನಂದದ ತವನಿಧಿಯೊಳ್= ನಿಧಿಯಾದ ನಿನ್ನೊಳ್ ನಿನ್ನಲ್ಲಿ; ಈ ಭ್ರಾಂತಿಯೆಂಬ= ಈ ಭ್ರಾಂತಿಯೆಂಬ; ಆಶ್ರವೇ=ದುಃಖವನ್ನು ತಪ್ಪನ್ನು; ತಗ್ರೋತ್ತಿ= ಕಡಿಮೆಮಾಡಿ; ಪಂಪಾಪುರದರಸ ವಿರೂಪಾಕ್ಷ ರಕ್ಷಿಸುವುದು.

ಭಾವಾರ್ಥ: ನಿಷ್ಕ್ರಿಯಾತ್ಮ ಪ್ರಭುವಾದ ಶಿವನಿಂದ ಈ ಪ್ರಕೃತಿಯು ಮಾಯೆಯು ಹುಟ್ಟಿತು ಎಂಬ ವಿಚಾರರಹಿತ ಮಾತನ್ನು ನಾನು ಸಹಿಸಲಾರೆ. ನಿಷ್ಕ್ರಿಯಾತ್ಮನಾದ ಪ್ರಭು ಕ್ರಿಯೆಯಲ್ಲಿ ತೊಡಗಿದನೆಂಬುದು ಅವನ ನೈಜಗುಣಕ್ಕೆ ಅಪಚಾರವನ್ನುಂಟುಮಾಡುವ ಮಾತು. ಪರಿಶುದ್ಧನೂ

ಮಂಗಳಕರನೂ ಆನಂದದ ನಿಧಿಯೂ ಆದ ಶಿವನಲ್ಲಿ ಇಂಥ ತಪ್ಪನ್ನು ಕಲ್ಪಿಸುವ ಭ್ರಾಂತಿಯನ್ನು ತತ್ಕ್ಷಣ ನನ್ನನ್ನು ರಕ್ಷಿಸು ಸ್ವಾಮಿಯೇ.

**ಟಿಪ್ಪಣಿ :** ನಿಶ್ಚಲನೂ, ನಿಷ್ಕ್ರಿಯಾತ್ಮನೂ, ಪರಿಶುದ್ಧನೂ, ನಿಷ್ಕಲಂಕನೂ ನಿತ್ಯನೂ ಸತ್ಯನೂ ಆದ ಸಚ್ಚಿದಾನಂದ ಸ್ವರೂಪಿಯಾದ ಪರಮಾತ್ಮನಿಂದ, ಚಂಚಲವೂ, ಕ್ರಿಯಾತ್ಮಕವೂ, ದೋಷಭರಿತವೂ, ಕಲುಷಪೂರಿತವೂ, ಅನಿತ್ಯವೂ, ಅಶಾಶ್ವತವೂ, ಮಿಥ್ಯೆಯೂ ಆದ ಈ ಮಾಯೆಯು ಹುಟ್ಟಿತೆಂಬುದು ಅವನ ಗುಣಕ್ಕೆ ನಾವೆಸಗುವ ಅಪಚಾರ ಎಂದು ಕವಿಯು ಭಾವಿಸುತ್ತಾನೆ ಅದನ್ನು ಕೇಳುವುದಕ್ಕೂ ಆಗಲಾರದು. ಪತಿವ್ರತೆಯನ್ನು, ಜಾರಿಣಿ ಎಂದು ಕರೆದಷ್ಟು ವ್ಯತಿರಿಕ್ತವಾಗಿ ತೋರುತ್ತದೆ ಈ ಕವಿಯ ದೃಷ್ಟಿಗೆ ಈ ಭಾವನೆ ಅಷ್ಟರಮಟ್ಟಿಗೆ ಸತ್ಯವೇ ಒಪ್ಪತಕ್ಕುದೇ. ಆದರೆ ಆಧ್ಯಾತ್ಮಿಕ ಸಂಶೋಧನೆಯಲ್ಲಿ ಶ್ರೀ ಅರವಿಂದರು ಕೈಕೊಂಡ ಪ್ರಯೋಗ, ಅವರು ತಲುಪಿದ ಸಿದ್ಧಾಂತಗಳ ಬೆಳಕಿನಲ್ಲಿ ನೋಡಿದಾಗ, ನಿತ್ಯನೂ ಶುದ್ಧನೂ ಸರ್ವಜ್ಞನೂ ಆನಂದಸ್ವರೂಪಿಯೂ ಆದ ಪರಬ್ರಹ್ಮನು ಅಜ್ಞಾನಿಯೂ, ದುಃಖಿಯೂ, ಅನಿತ್ಯನೂ ಆಗಿ ಅವತರಿಸುವುದು ವೈಜ್ಞಾನಿಕ ಸತ್ಯವಾಗಿದೆ. ಶ್ರೀ ಅರವಿಂದರು ತತ್ತ್ವಜ್ಞಾನಕ್ಕೆ ನೀಡಿದ ಒಂದು ಮಹತ್ತರವಾದ ಕಾಣಿಕೆಯೆಂದರೆ, ಅಜ್ಞಾನದ ಸೃಷ್ಟಿ ಹೇಗಾಯಿತೆಂಬುದನ್ನು ವಿವರಿಸುವ ಸಿದ್ಧಾಂತ, ಸರ್ವಜ್ಞನಾದ ಪರಮಪುರುಷೋತ್ತಮನು, ಅಜ್ಞಾನವನ್ನು ಹೇಗೆ ಹೊಂದುವನು ? ಅದಕ್ಕೆ ಶ್ರೀ ಅರವಿಂದರು ಹೇಳುವ ಸಮಾಧಾನ ಇದು : ಒಬ್ಬಾತ ವೃತ್ತಿಯಿಂದ ವಕೀಲನಾಗಿರಬಹುದು. ಆದರೆ ಅವನು ಗಣಿತದಲ್ಲಿ ಪಾರಂಗತನಾಗಬಹುದು. ಅಣು ವಿಜ್ಞಾನವೂ ಅವನಿಗೆ ತಿಳಿದಿರಬಹುದು. ಆದರೆ ಅವನು ಕೋರ್ಟಿನಲ್ಲಿ ನಿಂತು ತನ್ನ ಖಟ್ಲೆಯನ್ನು ವಾದಿಸುವಾಗ ಅವನ ಗಣಿತಜ್ಞಾನ, ಅಣುವಿಜ್ಞಾನ ಎಲ್ಲದೂ ಮರೆತುಹೋಗಿರುತ್ತದೆ. ಆಗ ಅವನು ಗಣಿತ, ಅಣುವಿಜ್ಞಾನದಬಗ್ಗೆ ಅಜ್ಞಾನಿಯೆ ! ಆದರೆ ವಾಸ್ತವವಾಗಿ ಅವನು ಆ ವಿಚಾರಗಳ ಬಗ್ಗೆ ಅಜ್ಞಾನಿಯಲ್ಲ. ಹಾಗೆಯೇ ಬ್ರಹ್ಮನು ಸರ್ವಜ್ಞನೆಂಬುದೇನೋ ನಿಜ. ಅವನು ಕೇವಲ ಬ್ರಹ್ಮನಾಗಿದ್ದಾಗ ಎಲ್ಲವನ್ನೂ ಬಲ್ಲ ಸರ್ವಜ್ಞನೇ. ಆದರೆ, ವಕೀಲ ತನ್ನ ಖಟ್ಲೆಯ ವಾದಕ್ಕೆ ನಿಂತುಕೊಂಡಂತೆ,

ತನ್ನ ಲೀಲೆಯಲ್ಲಿ ಬ್ರಹ್ಮನು ಯಾವುದಾದರೂ ಒಂದು ನಾಮರೂಪವನ್ನು ಧರಿಸಿನಿಂತಾಗ ಇನ್ನುಳಿದ ಎಲ್ಲ ವಿಚಾರಗಳೂ ಆ ನಾಮರೂಪಾವಸ್ಥೆಯಲ್ಲಿರು ವಾಗ ಮರೆತುಹೋಗಿರುತ್ತಾನೆ. ಅಷ್ಟರಮಟ್ಟಿಗೆ ಅಜ್ಞಾನಿಯೇ! ಹಾಗೆಯೇ ಪರಿಶುದ್ಧನೂ, ಸಚ್ಚಿದಾನಂದನೂ ಆದ ಬ್ರಹ್ಮನು ತನ್ನ ಲೀಲೆಯಲ್ಲಿ ಮಾಯೆ ಯಾಗಿ ಅವತರಿಸುವುದು ಅವನ ನಿಷ್ಕ್ರಿಯಾತ್ಮಕ್ಕೆ ಅಪಚಾರವೇನೂ ಅಲ್ಲ. ಅದು ಅವನ ಗುಣವೇ! ಇದೂ ಅವನ ಗುಣವೇ!

ಈಗ ಹರಿಹರ ಕವಿ ಇದ್ದಿದ್ದರೆ ಏನು ಭಾವಿಸುತ್ತಿದ್ದನೋ. ಆದರೆ ಅಂದು ಪ್ರಚಲಿತವಿದ್ದ ನಂಬುಗೆಗೆ ಅನುಗುಣವೇ ಆಗಿದೆ ಅವನ ಈ ಭಾವ.

ವೃತ್ತ: ೯೨

ಮೊದಲಿಂದಂ ಕೂರ್ಮರೋಮಂಬಗೆಯ ಶಶಿವಿಷಾಣಂ ವಿಯತ್‌ಪುಷ್ಪದಂತಿ
ಲ್ಲದುದೇ ಸತ್ಯಂ ಪ್ರಪಂಚೆಂದರಿದು ತಿಳಿದು ನಿಷ್ಕಾಮ ನಿರ್ಮಾಯ ನಿತ್ಯಾ-
ಭ್ಯುದಯಾನಂದೈಕತೇಜೋನಿಧಿ ನಿರುಪಮ ನಿರ್ಲೇಪ ನಿರ್ವಾಣ ನೀನೆಂ-
ಬಿದನೇ ಸೈತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೯೨

ಅರ್ಥ: ಮೊದಲಿಂದಂ= ಮೊದಲಿನಿಂದಲು; ಕೂರ್ಮ= ಆಮೆಯ; ರೋಮ = ಕೂದಲು; ಬಗೆಯ= ವಿಚಾರಿಸಲಾಗಿ; ಶಶಿವಿಷಾಣಂ= ಮೊಲದಕೋಡು; ವಿಯತ್ = ಆಕಾಶ; ಪುಷ್ಪದಂತೆ= ಹೂವಿನಂತೆ; ಪ್ರಪಂಚ= ಸೃಷ್ಟಿಯು; ಇಲ್ಲದುದೇಸತ್ಯಂ= ವಾಸ್ತವವಾಗಿ ಇಲ್ಲದಿರುವುದೇ ಸತ್ಯವಾದುದು; ಎಂದು ಅರಿದು= ಎಂದು ತಿಳಿದು; ನಿಷ್ಕಾಮ= ಕಾಮರಹಿತನು; ನಿರ್ಮಾಯ= ಮಾಯಾರಹಿತನು; ನಿತ್ಯ= ಯಾವಾಗಲೂ; ಅಭ್ಯುದಯ= ಏಳಿಗೆಯಾಗುವವನು; ಆನಂದವೂ; ಏಕ=ಎರಡಿಲ್ಲದವನು; ನಿರುಪಮ= ಉಪಮಾತೀತನು; ನಿರ್ಲೇಪ= ಯಾವುದಕ್ಕೂ ಅಂಟಿಕೊಳ್ಳದವನು; ನಿರ್ವಾಣ=ಪರಮ ಪದವಿಯು; ನೀನು; ಎಂಬ ಬಿದನೇ= ಎಂಬುವ ನಂಬುಗೆಯನ್ನೇ; ಸೈತಿತ್ತು =ಕೊಟ್ಟು ಪಂಪಾಪುರದರಸ ವಿರೂಪಾಕ್ಷನೇ ನನ್ನನ್ನು ರಕ್ಷಿಸು.

ಭಾವಾರ್ಥ: ಈ ಪ್ರಪಂಚವೆಂಬುದು ಮೊದಲಿನಿಂದಲೂ ಆಮೆಯ ರೋಮದಂತೆ, ಮೊಲದ ಕೋಡಿನಂತೆ, ಗಗನಕುಸುಮದಂತೆ ಎಂದೂ ಇಲ್ಲ

ವೆಂಬುದೇ ಸತ್ಯ ಎಂಬದನ್ನು ತಿಳಿಯುವ ತಿಳುವಳಿಕೆಯನ್ನು ಕೊಡು. ನೀನು ನಿಷ್ಕಾಮನು; ನಿರ್ಮಾಯನು, "ಏಕಂ, ನಿತ್ಯಂ, ವಿಮಲಮಚಲಂ'' ನಿರ್ಲಿಪ್ತನು ಎಂಬುದೇ ಸತ್ಯ ಎಂಬ ನಂಬುಗೆಯನ್ನು ಕೊಟ್ಟು ನನ್ನನ್ನು ಸಲಹು ಸ್ವಾಮಿ.

**ಟಿಪ್ಪಣಿ :** ಇಲ್ಲಿಯೂ ಹಾಗೆಯೇ 'ಬ್ರಹ್ಮಸತ್ಯಾ ಜಗನ್ಮಿಥ್ಯಾ' ಎಂಬ ಮಾತು ಈಗ ಅರೆಸತ್ಯವಾಗಿದೆ. ಬ್ರಹ್ಮಸತ್ಯವೆಂಬುದೇನೋ ನಿಜ. ಆದರೆ ಬ್ರಹ್ಮನಿಂದಲೇ ಆದ ಈ ಜಗತ್ತು ಮಿಥ್ಯೆ ಎಂದಿಗೂ ಆಗಲಾರದು. ಬ್ರಹ್ಮ ಶುದ್ಧ ಚಿನ್ನದ ಗಟ್ಟಿ ಎಂದು ಭಾವಿಸಿದರೆ, ಈ ಪ್ರಪಂಚ ಚಿನ್ನದ ಒಡವೆ ಅಥವಾ ಆಭರಣ ಎನ್ನಬಹುದು. ಆಭರಣವನ್ನು ಕರಗಿಸಿದರೆ ಅದೇ ಚಿನ್ನದ ಸ್ವರೂಪವನ್ನೇ ತಾಳುವುದು. ಚಿನ್ನ ಗಟ್ಟಿಯಾಗಿದ್ದಾಗ ಮಾತ್ರ ಸತ್ಯ ಅದು ರೂಪಾಂತರ ಹೊಂದಿ ಒಡವೆಗಳಾದಾಗ ಮಿಥ್ಯ ಎಂದರೆ ಒಪ್ಪತಕ್ಕಮಾತಲ್ಲ. ಹಾಗೆಂದು ಶ್ರೀ ಅರವಿಂದರ ಸಿದ್ಧಾಂತ ಮಾಡಿತೋರಿಸಿದ್ದಾರೆ. ಎಂದ ಮೇಲೆ ಈ ಪ್ರಪಂಚವೆಂಬುದನ್ನು ಮೊಲದ ಕೋಡಿನಂತೆ; ಗಗನಕುಸುಮ ದಂತೆ, ಆಮೆಯ ರೋಮದಂತೆ ಎಂದು ಭಾವಿಸುವುದು ಶ್ರೀ ಅರವಿಂದರ ದರ್ಶನದ ಲಾಭಪಡೆದಯಾರಿಗೂ ಒಪ್ಪಲಾರದು. ಇಲ್ಲಿ ಹರಿಹರ ಮಹಾಕವಿ ಅಂದಿನ ಅದ್ವೈತ ಸಿದ್ಧಾಂತಕ್ಕೆ ಅನುಗುಣವಾಗಿ, ತಾನು ನಂಬಿದ್ದ ಸತ್ಯಕ್ಕೆ ಅನುಗುಣವಾಗಿಯೇ ಯಿದೆ. ಆದರೆ, ಆ ನಂಬುಗೆಯೇ ಈಗ ಕುಸಿದು ಬೀಳುತ್ತಿದೆ.

### ವೃತ್ತ: ೯೩

ತೋಱುತ್ತಿರ್ಪೀ ಜಗಂ ತಾನಱವಿನ ಮುಖದೊಳ್ ತೋಱದಿರ್ಪಂತೆ<br>ತೋರ್ಕುಂ<br>ತೋಱಲ್ ಪೇಳಲ್ಕೆ ಕೇಳಲ್ಕಸದಳಮೆನಿಪಾ ಬ್ರಹ್ಮತಾ ಬ್ರಹ್ಮವಾಗು-<br>ತ್ತಾಱುಂ ಬಣ್ಣಕ್ಕಮೇಳುಂ ತಸುವಿನ ಪೊರೆಗೆಂಟುಂ ಶರೀರಕ್ಕೆ ಮಿಕ್ಕುಂ<br>ಮೀಱುರ್ಪಂತಿತ್ತು ಪಂಪಾಪುರವರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೯೩

ಅರ್ಥ : ತೋಱುತ್ತ+ಇರ್ಪ+ಈಜಗಂ= ಕಣ್ಣಿಗೆ ಕಾಣುತ್ತಿರುವ ಈ ಜಗತ್ತು ತಾನ್= ತಾನು; ಅಱಿವಿನ= ಜ್ಞಾನದ; ಮುಖದೊಳ್= ಸ್ಥಿತಿಯಲ್ಲಿ; ತೋಱದಿರ್ಪ = ಇಲ್ಲದ;ಅಂತೆ=ರೀತಿಯಲ್ಲಿ; ತೋರ್ಕುಂ= ಕಾಣುವುದು; ತೋಱಿಲ್= ಕಾಣಿಸಿದರೂ ಪೇಳಲ್ಕೆ=ಹೇಳ್ವಲಿಕ್ಕೆ; ಕೇಳಲ್ಕೆ= ಕೇಳಲಿಕ್ಕೆ; ಅಸದಳಂ =ಅಸಾಧ್ಯವಾದುದು; ಎನಿಪ =ಎನ್ನುವಂಥ; ಆ ಬ್ರಹ್ಮ= ಆ ಬ್ರಹ್ಮವು; ಬ್ರಹ್ಮವಾಗುವಾಗುತ್ತ= ಕೇವಲ ನಿರಾಕಾರ ನಿರ್ಗುಣ ಬ್ರಹ್ಮವು; ಆರುಂ= ಆರೂ; ಬಣ್ಣಕ್ಕಂ= ಬಣ್ಣಗಳಿಗೂ; ಅಂದರೆ ವರ್ಣಾತೀತನು; ಏಳುಂ= ಏಳೂ; ತನುವಿನ=ದೇಹಗಳಿಗೂ; ಏಳು ಪ್ರಮಾತೃಗಳ ತನುಗಳಿಗಿಂತಲೂ ಅತೀತನು; ಎಂಟುಂ= ಎಂಟೂ; ಶರೀರಕ್ಕೆ= ಶರೀರಗಳಿಗೂ; ಮಿಕ್ಕುಂ=ಅತೀತನಾಗಿ; ಮೀಱಿರ್ಪಂತೆ= ಅವೆಲ್ಲವುಗಳಿಗೂ (ಆರು ಬಣ್ಣಗಳಿಗೂ, ಏಳು ತನುಗಳಿಗೂ, ಎಂಟು ಶರೀರಗಳಿಗೂ ಮಿಕ್ಕು ಅತೀತನಾಗಿರುವಂಥ ಸ್ಥಿತಿಯನ್ನು) ಇತ್ತು= ಕೊಟ್ಟು; ಪಂಪಾಪುದದರಸ ವಿರೂಪಾಕ್ಷ ಎನ್ನಂ= ನನ್ನನ್ನು; ರಕ್ಷಿಪ್ಪುದು =ರಕ್ಷಿಸುವುದು.

ಭಾವಾರ್ಥ: ಕಣ್ಣಿಗೆ ಕಾಣುತ್ತಿರುವ ಈ ಜಗತ್ತು, ಜ್ಞಾನದ ಸ್ಥಿತಿಯಲ್ಲಿ ಇಲ್ಲಂತೆ ಕಾಣುವುದು. ಹೀಗೆ ಇದ್ದೂ ಇಲ್ಲದಂತೆ ಕಾಣುವ ಈ ಸೃಷ್ಟಿಯು ಕಣ್ಣಿಗೂ ಮತ್ತು ಅರುವಿಗೂ ಗೋಚರಿಸಿದರೂ ಹೇಳಲಿಕ್ಕೂ, ಕೇಳಲಿಕ್ಕೂ ಅಸಾಧ್ಯವಾದುದು, ಎನ್ನುವಂಥ ಆ ಬ್ರಹ್ಮವು, ಕೇವಲ ನಿರಾಕಾರ ನಿರ್ಗುಣ ಬ್ರಹ್ಮವಾಗುತ್ತ ಅಷ್ಟ ವರ್ಣಾತೀತನೂ, ಸಪ್ತತನುಗಳಿಗೂ ಅತೀತನೂ, ಅಷ್ಟಶರೀರಕ್ಕೂ ಅತೀತನಾಗಿ ಕೇವಲ ಬ್ರಹ್ಮ ಸ್ವರೂಪವನ್ನು ಅನುಭವಿಸುವಂತ ನಿರ್ವಿಕಲ್ಪ ಸಮಾಧಿ ಸ್ಥಿತಿಯನ್ನು ಕೊಟ್ಟು ಪಂಪಾಪುರದ ಅರಸನಾದ ವಿರೂಪಾಕ್ಷಸ್ವಾಮಿಯೇ ನನ್ನನ್ನು ರಕ್ಷಿಸು.

ಟಿಪ್ಪಣಿ : ಈ ವೃತ್ತದಲ್ಲಿ ಸಾಧಕನು ಸಾಧಿಸಬಹುದಾದ ಕೊಟ್ಟ ಕೊನೆಯ ತುರೀಯಾವಸ್ಥೆಯನ್ನು ಬಯಸಿ ಕವಿ ಪ್ರಾರ್ಥಿಸುತ್ತಾನೆ. ನಿರ್ವಿಕಲ್ಪ ಸಮಾಧಿ ಸ್ಥಿತಿಯೇ, ತುರೀಯಾವಸ್ಥೆಯೇ, ಆಧ್ಯಾತ್ಮ ವಿದ್ಯೆಯಲ್ಲಿ ಕೊಟ್ಟಕೊನೆಯ ಮೆಟ್ಟಿಲು, ಆ ಸ್ಥಿತಿಯನ್ನು ಮುಟ್ಟಿದಮೇಲೆ ಸಾಧಕನಿಗೆ ಕ್ರಮಿಸಬೇಕಾದ ಇನ್ನಾವದಾರಿಯೂ ಇಲ್ಲ. ಆ ಸ್ಥಿತಿಯಲ್ಲಿ 21 ದಿನಗಳಿಗಿಂತಲೂ ಹೆಚ್ಚಾಗಿ ಇರುವುದಿಲ್ಲವೆಂದು ಹೇಳುತ್ತಾರೆ. ಬೇಕಾದರೆ ಆತ ತನ್ನ

ಇಷ್ಟಾನುಸಾರವಾಗಿ ದೇಹತ್ಯಾಗ ಮಾಡಬಲ್ಲ. ಆಗ ಇಚ್ಛಾಮರಣಿಯಾಗುತ್ತಾನೆ. ಶರಣರ ಪರಿಭಾಷೆಯಲ್ಲಿ ಇಂಥ ಸ್ಥಿತಿಯನ್ನು 'ಐಕ್ಯಸ್ಥಳ' ಎನ್ನುತ್ತಾರೆ.

ಹರಿಹರ ಮಹಾಕವಿ ಸಾಧಾರಣವಾಗಿ ಪದಚಮತ್ಕಾರದಲ್ಲಿ ಪಾಂಡಿತ್ಯ ಪ್ರದರ್ಶನದಲ್ಲಿ ತೊಡಗುವುದಿಲ್ಲ. ಅವನ ಪ್ರಪ್ರಥಮವಾಗಿ, ಪ್ರಾಧಾನ್ಯವಾಗಿ, ಪ್ರಮುಖವಾಗಿ ಭಕ್ತಕವಿ ಆತನಿಗೆ ಕಾವ್ಯ, ಆತ್ಮವಿಕಾಸಕ್ಕೆ, ಆತ್ಮಸಾಕ್ಷಾತ್ಕಾರಕ್ಕೆ ಸಾಧನೆಯೇ ಹೊರತು, ಪಾಂಡಿತ್ಯ ಪ್ರದರ್ಶನ, ಕೀರ್ತಿಸಂಪಾದನೆ ಇವೆಲ್ಲ ಕೇವಲ ತುಚ್ಛ. ಇಲ್ಲಿ ಹೇಗೊ ಕೊಂಚ ಪಾಂಡಿತ್ಯದ ದಾರಿಯನ್ನು ಹಿಡಿದಿರುವುದು ಕಂಡು ಬರುತ್ತದೆ. ಆರು ಬಣ್ಣಗಳಿಗೂ, ಏಳು ತನುಗಳಿಗೂ, ಎಂಟು ಶರೀರಗಳಿಗೂ ಅತೀತನಾಗುವಂಥ ಸ್ಥಿತಿಯನ್ನು ಕೊಟ್ಟು ನನ್ನನ್ನು ಕಾಪಾಡು ತಂದೇ ಎಂದು ಹೇಳುವಾಗ, ಈ ಆರು, ಏಳು, ಎಂಟುಗಳು ಏನು ? ಯಾವುವು ? ಎಂಬ ಸಂಶೋಧನೆ ಮಾಡಬೇಕಾಗುತ್ತದೆ. ಆರು ಬಣ್ಣಗಳು ಯಾವುವೆಂದರೆ – ಶ್ವೇತ, ಪೀತ, ಕಪಿಲ, ಹರಿತ, ಕೃಷ್ಣ, ಮಾಂಜಿಷ್ಟ (ಕ್ರಮವಾಗಿ ಬಿಳುಪು, ಹಳದಿ, ಗೋರೋಚನ ಬಣ್ಣ, ಹಸುರು, ಕಪ್ಪು, ಕೆಂಪು). ಏಳು ತನುಗಳು ಯಾವುವೆಂದರೆ ಪ್ರಮಾತೃಗಳ ತನುಗಳು- ಶಿವ, ಮಂತ್ರ, ಮಹೇಶ್ವರ, ಮಂತ್ರೇಶ್ವರ, ಮಂತ್ರ, ವಿಜ್ಞಾನಾಕಲ, ಪ್ರಳಯಾಕಲ, ಸಕಲ; ಅಷ್ಟಶರೀರಗಳು ಯಾವುವುವೆಂದರೆ : ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ, ಸೂರ್ಯ, ಚಂದ್ರ, ಆತ್ಮ ಇವುಗಳು ಶಿವನ ಅಷ್ಟ ಶರೀರಗಳು.

### ವೃತ್ತ: ೯೪

ತೊಳಗುತ್ತಿರ್ಪರ್ಕನಿಂದಾಗಸವೆನಿತನಿತಂ ಮಾಡಿದಂತಿರ್ಪ ಧಾತ್ರೀ-
ತಳವೆಲ್ಲಂ ಚಂದ್ರನಿಂದಂ ಸಮೆದುದೆನಿಸಿದಂತಿರ್ಪ ದಿಕ್ಸಂಕುಳಂ ನಿ-
ರ್ಮಳವಿದ್ಯುಲ್ಲೇಖೆಯಿಂ ನಿರ್ಮಿಸಿದವೊಲೆಸೆದಿರ್ಪಾ ಪರಂಜ್ಯೋತಿಯೆನ್ನೊಳ್
ಬೆಳಗುತ್ತಿರ್ಪಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೯೪

ಅರ್ಥ : ತೊಳಗುತ್ತಿರ್ಪ= ಪ್ರಕಾಶಿಸುತ್ತಿರುವ, ಅರ್ಕನಿಂದ= ಸೂರ್ಯನಿಂದ; ಅಗಸವ= ಆಕಾಶವನ್ನು; ಎನಿತತನಿತಂ= ಎಷ್ಟೊ, ಎಲ್ಲವನ್ನೂ; ಮಾಡಿದಂತಿರ್ಪ= ಮಾಡಿದಂತೆಯೂ; ಧಾತ್ರೀತಳಮೆಲ್ಲಂ= ಭೂಲೋಕವೆಲ್ಲವೂ; ಚಂದ್ರನಿಂದಂ= ಚಂದ್ರನಿಂದ; ಸಮೆದುದು= ಬೆಳಗಿದುದು; ಎನಿಸಿದಂತಿರ್ಪ= ಎನಿಸದಂತೆ ಇರುವ; ದಿಕ್ಸಂಕುಳಂ= ದಶದಿಕ್ಕುಗಳೂ ನಿರ್ಮಳ= ನಿಷ್ಕಳಂಕವಾದ, ಶುಭ್ರವಾದ; ಉದ್ಯುಲ್ಲೇಖಿಯಿಂ= ವಿದ್ಯುತ್ತಿನ ಬಳ್ಳಿಯಿಂದ ನಿರ್ಮಿಸಿದಪೊಲ್= ಸೃಷ್ಟಿಸಿದ ರೀತಿಯಲ್ಲಿ; ಇರ್ಪ= ಇರುವ; ಪರಂಜ್ಯೋತಿ= ಪರಂಜ್ಯೋತಿ ಸ್ವರೂಪನಾದ ಪರಬ್ರಹ್ಮನು ಎನ್ನೋಳ್= ನನ್ನಲ್ಲಿ; ಬೆಳಗುತ್ತಿರ್ಪಂತೆ= ಬೆಳಗುವಂತೆ; ಪಂಪಾಪುರದ ಒಡೆಯನಾದ ವಿರೂಪಾಕ್ಷ ಸ್ವಾಮಿಯೇ ರಕ್ಷಿಸು.

ಭಾವಾರ್ಥ: ಪ್ರಕಾಶಿಸುವ ಸೂರ್ಯನಿಂದಲೇ ಆಕಾಶವನ್ನೆಲ್ಲವನ್ನೂ ಮಾಡಿದಂತೆಯೂ, ಜಗತ್ತೆಲ್ಲವೂ ಹೊಳೆಯುವ ಚಂದ್ರನಿಂದಲೇ ಬೆಳಗಿದಂತೆಯೂ, ದಶದಿಕ್ಕುಗಳೆಲ್ಲವೂ ವಿದ್ಯುತ್ತಿನ ಬಳ್ಳಿಯಿಂದಲೇ ನಿರ್ಮಿಸಿದಂತೆಯೂ, ಶ್ರೀಪರಂಜೋತಿ ಸ್ವರೂಪನಾದ ಪರಬ್ರಹ್ಮನು ಎನ್ನಲ್ಲಿಯೇ ಪ್ರಕಾಶಿಸುವಂತೆ ಕೃಪೆಮಾಡಿ ರಕ್ಷಿಸು ವಿರೂಪಾಕ್ಷ ಸ್ವಾಮಿಯೇ.

ಟಿಪ್ಪಣಿ: ಸಾಧಕನು, ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗ, ಶರಣ ಸ್ಥಳಗಳನ್ನು ದಾಟಿ ಕೊನೆಗೆ ಐಕ್ಯಸ್ಥಳವನ್ನು ಹತ್ತುವನು; ಅಥವಾ ಐಕ್ಯ ಸ್ಥಳದಲ್ಲಿ ಐಕ್ಯನಾಗುವನು. ಈ ಹಿಂದಿನ ವೃತ್ತಗಳಲ್ಲಿ ಅಲ್ಲಲ್ಲಿ ಆಯಾ ಸ್ಥಳದ ವಿಚಾರವಾಗಿ ಸೂಚ್ಯವಾಗಿ ಪ್ರಸ್ತಾಪಿಸಲಾಗಿದೆ. ಹರಿಹರ ಮಹಾಕವಿ, ಈ ಶತಕದ ರಚನೆಯಲ್ಲಿ ವೈಜ್ಞಾನಿಕವಾದ ತರ್ಕಬದ್ಧವಾದ ಒಂದು ಸೂತ್ರವನ್ನು, ಕ್ರಮವನ್ನು ಇಟ್ಟುಕೊಂಡಿದ್ದಾನೆಂಬುದು ಸ್ವಲ್ಪಮಟ್ಟಿಗೆ ಯೋಚಿಸುವವರ ಗಮನಕ್ಕೆ ಬರುವುದು. ಆ ಷಟಸ್ಥಳಗಳ ಕೊನೆಯೂ ಗುರಿಯೂ ಆದ ಐಕ್ಯಸ್ಥಳವನ್ನು ಮುಟ್ಟಿದ ಸಾಧಕನ ಅನುಭವ ಎಂಥದು ಎಂಬುದನ್ನು ಯಾರು ಮಾತಿನಿಂದ ವರ್ಣಿಸಬಲ್ಲರು ? ಮಾತಿಗೆ ನಿಲುಕದ ಅನುಭವವನ್ನು ಮಾತಿನಿಂದ ಎಂತು ವರ್ಣಿಸುವುದು ? ಐಕ್ಯಸ್ಥಳಕ್ಕೆ ಹತ್ತಿದ ಪ್ರತಿಯೊಬ್ಬರೂ ಬೆಳಗಿನಲ್ಲಿ ಒಂದಾದ ಮಹಾಬೆಳಗಿನ ಪ್ರಕಾಶವನ್ನು ಕುರಿತು

ಹಾಡಿದ್ದಾರೆ- ಬಸವಣ್ಣನವರೂ ಕೂಡ : "ಬೆಳಗಿಂಗೆ ಬೆಳಗು ಸಿಂಹಾಸನ ವಾಗಿ, ಬೆಳಗುಬೆಳಗ ಕೂಡಿದ ಕೂಟವ ಕೂಡಲಸಂಗಯ್ಯ ತಾನೇ ಬಲ್ಲ !" ಎಂದಿದ್ದಾರೆ. ಬೆಳಕಿಗೆ ಬೆಳಕೇ ಆಧಾರ. ಆ ಬೆಳಕು ಮತ್ತೆ ಬೆಳಕಿನಲ್ಲಿಯೇ ಒಂದಾಗುತ್ತದೆ. ಆ ಬೆಳಕು ಮತ್ತೆಲ್ಲಿಂದಲೋ ಬರುವುದಿಲ್ಲ. ಅದು ತನ್ನ ಲ್ಲಿಯೇ ಅವ್ಯಕ್ತವಾಗಿದೆ. ಹಾಲಿನಲ್ಲಿರುವ ತುಪ್ಪದಂತೆ. ಆದರೆ ಅದನ್ನು ಅನುಭವಿಸಬೇಕು. ಆ ಅನುಭವಿಸಿದ ಸ್ಥಿತಿಯನ್ನಿಲ್ಲಿ ಕವಿ ಬಣ್ಣಿಸಿದ್ದಾನೆ.

ವೃತ್ತ: ೯೫

ಗುರುವಿಂ ಶುದ್ಧಾತ್ಮನಾದೆಂ, ಗುರುವಿನ ಕೃಪೆಯಿಂದಂ ಜಗತ್ಪೂಜ್ಯನಾದೆಂ
ಗುರುವಿಂ ನಿಷ್ಕಾಮನಾದೆಂ, ಘನತರಗುರುವಿಂ ಶಾಂತಿಸಂಪನ್ನನಾದೆಂ
ಗುರುವಿಂ ಸರ್ವಜ್ಞನಾದೆಂ ದಿಟವೆನಿಪಿದನೆನ್ನೊಳ್ ದಿಟಂ ಮಾಡುತುಂ ಮತ್
ಗುರುವೇ ಗೌರೀಶ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ.

ಅರ್ಥ : ಗುರುವಿಂ= ಗುರುವಿನ ಕೃಪೆಯಿಂದ; ಶುದ್ಧಾತ್ಮನಾದೆಂ= ಪರಿಶುದ್ಧವಾದ ಆತ್ಮವುಳ್ಳವನಾದೆ. ಗುರುವಿನ ಕೃಪೆಯಿಂದಲೇ ಜಗತ್ಪೂಜ್ಯನಾದೆಂ= ಜಗತ್ತೆಲ್ಲವೂ ನನ್ನನ್ನು ಪೂಜಿಸುವ ಸ್ಥಿತಿಯನ್ನು ಪಡೆದೆ; ಗುರುವಿನಿಂದ; ನಿಷ್ಕಾಮನಾದೆಂ= ಕಾಮರಹಿತನಾದೆ; ಘನತರ ಗುರುವಿನಿಂದ; ಶಾಂತಿಸಂಪನ್ನನಾದೆಂ= ಶಾಂತಿಯನ್ನು ಪಡೆದೆ; ಗುರುವಿನಿಂದ; ಸರ್ವಜ್ಞನಾದೆ= ಎಲ್ಲಬಲ್ಲ ಜ್ಞಾನಿಯಾದೆ; ದಿಟವೆನಿಪಿದ= ಇದು ದಿಟ ಎನಿಪಿ; ಎನ್ನೊಳ್= ನನ್ನಲ್ಲಿ; ದಿಟಂ= ಸತ್ಯವನ್ನಾಗಿ ಮಾಡುತುಂ= ಮಾಡುತ್ತ; ಮತ್= ನನ್ನ; ಗುರುವೇ; ಗೌರೀಶ= ಗೌರೀ ಪತಿಯಾದ ಶಿವವೇ; ಪಂಪಾಪುರದ ಅರಸನಾದ ವಿರೂಪಾಕ್ಷ ಸ್ವಾಮಿಯು ನನ್ನನ್ನು ಕಾಪಾಡಲಿ.

ಭಾವಾರ್ಥ: ಗುರುಕರುಣೆಯಿಂದ ಪರಿಶುದ್ಧಾತ್ಮನಾದೆ. ಗುರುವಿನ ಕೃಪೆಯಿಂದಲೇ ಜಗತ್ತೆಲ್ಲವೂ ಪೂಜೆಮಾಡಲಿಕ್ಕೆ ಯೋಗ್ಯನಾಗುವಂತಹನಾದೆ. ಗುರುವಿನ ಕರುಣೆಯಿಂದ ಆಸೆಯೆಂಬುದೆಲ್ಲವೂ ನೀಗಿಹೋಯಿತು. ಘನತರವಾದ ಅವೇ ಗುರುವಿನಿಂದಲೇ ಶಾಂತಿಪದವಿಯೂ ದೊರೆಯಿತು.

ಅದೇ ಗುರುವಿನಿಂದಲೇ ಎಲ್ಲ ಬಲ್ಲ ಜ್ಞಾನಿಯೂ ಆದೆ, ಈ ಮಾತು ನಿಜ ಎನ್ನುವ ರೀತಿಯಲ್ಲಿ ನೀನು ನನ್ನಲ್ಲಿದ್ದು ನೆಲೆಸಿ ಉದ್ಧಾರಮಾಡಿ ಕಾಪಾಡು ತಂದೇ.

ಟಿಪ್ಪಣಿ : ಗುರುಮಹಾತ್ಮ್ಯೆಯನ್ನು ಈ ವೃತ್ತದಲ್ಲಿ ಕವಿ ಬಹುಮನೋಜ್ಞವಾಗಿ ಚಿತ್ರಿಸಿದ್ದಾನೆ. ಗುರುವೇ ಬ್ರಹ್ಮ ವಿಷ್ಣು ಮಹೇಶ್ವರರೂ ಕೂಡ. ಗುರು ಎಂಬ ಮಾತಿನ ಅರ್ಥವೇ ಕತ್ತಲೆಯನ್ನು ನೀಗಿ ಕಳೆಯುವವರು ಎಂದು. ಅಜ್ಞಾನವೆಂಬ ತಿಮಿರಾಂಧಕಾರವನ್ನು ಹೋಗಲಾಡಿಸಿ ಸತ್ಯದ ಬೆಳಕನ್ನು ತೋರುವವನೂ ಗುರುವೇ ! ಅಂಥ ಗುರುಕರುಣೆ ಆದರೇನೇ ಮುಂದಿನ ಬಾಣ ಸಾಗುವುದು. ಇಲ್ಲದಿದ್ದರೆ ಎಂಥ ಜಪತಪ ಧ್ಯಾನ ಎಲ್ಲದೂ ವ್ಯರ್ಥ.

## ವೃತ್ತ : ೯೬

ಎನ್ನಾನಂದಾಬ್ಧಿಯೇ ಎನ್ನನುಪಮಸುಧೇಯೋ ಎನ್ನ ಪುಣ್ಯಸ್ವರೂಪವೇ
ಎನ್ನಾಯುಃಪುಂಜವೇ ಎನ್ನಯ ಗತಿಮತಿಯೋ ಎನ್ನ ವಿಜ್ಞಾನಮೂರ್ತೀ
ಎನ್ನತ್ಯಾಶ್ಚರ್ಯವೇ ಎನ್ನತಿಶಯಗುರುವೇ ಎನ್ನ ಚೈತನ್ಯದಾಗೇ
ಎನ್ನ ಪ್ರಾಣೇಶ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೯೬

ಅರ್ಥ: ಎನ್ನ= ನನ್ನ; ಆನಂದದ; ಅಬ್ಧಿಯೇ= ಸಮುದ್ರವೇ; ಎನ್ನ; ಅನುಪಮ= ಹೋಲಿಸಲಾರದ; ಸುಧೆಯೇ= ಅಮೃತವೇ; ಎನ್ನ ಪುಣ್ಯಸ್ವರೂಪೇ= ನನ್ನ ಪುಣ್ಯಗಳ ಸಾಕಾರಮೂರ್ತಿಯೇ; ಎನ್ನ ಆಯುಃಪುಂಜವೇ= ನನ್ನ ಆಯುಷ್ಯವೇ; ಎನ್ನ ಗತಿಮತಿಯೇ= ಕ್ರಿಯಾಮೂರ್ತಿ ಮತ್ತು ಜ್ಞಾನಮೂರ್ತಿ, ಎನ್ನ ವಿಜ್ಞಾನಮೂರ್ತಿ ಆನಂದಮಯಕ್ಕು ಮೀರಿದ ವಿಜ್ಞಾನಮಯ ಪ್ರತಿಮೆಯೇ; ಎನ್ನ; ಅತ್ಯಾಶ್ಚರ್ಯವೇ = ಆಶ್ಚರ್ಯಕಾರಣವಾದವನೇ, ಎನ್ನ ಅತಿಶಯವಾದ ಗುರುವೇ ಎನ್ನ ಚೈತನ್ಯದಾಗೆ = ಎನಗೆ ಚೈತನ್ಯವನ್ನು ಕೊಡುವವನೇ: ಎನ್ನ ಪ್ರಾಣೇಶ= ಪ್ರಾಣಸ್ವರೂಪವೇ ನನ್ನನ್ನು ರಕ್ಷಿಸು ತಂದೆ.

ಭಾವಾರ್ಥ: ನನ್ನ ಆನಂದದ ಸಮುದ್ರದೋಪಾದಿಯಲ್ಲಿರುವವನೇ; ಎನ್ನ ಉಪಮಾತೀತವಾದ ಅಮೃತ ಸ್ವರೂಪಿಯೇ; ಎನ್ನ ಪುಣ್ಯಸ್ವರೂಪೀ ಎನ್ನ ಆಯುಷ್ಯವೇ; ಕ್ರಿಯ ಮತ್ತು ಜ್ಞಾನಮೂರ್ತಿಯೇ ಎನ್ನ ವಿಜ್ಞಾನ ಮೂರ್ತಿಯೇ, ಅತ್ಯಾಶ್ಚರ್ಯವನ್ನುಂಟು ಮಾಡುವವನೇ, ಎನ್ನ ಅತಿಶಯವಾದಪ್ಪಗುರುವೇ ಎನ್ನ ಚೈತನ್ಯದಾತನೇ ಎನ್ನ ಪ್ರಾಣೇಶನೇ ನನ್ನನ್ನು ರಕ್ಷಿಸಿ ಕಾಪಾಡು.

ಟಿಪ್ಪಣಿ: ಮುಪ್ಪಿನಾರ್ಯರ ಒಂದು ಗೀತೆಯಲ್ಲಿ ಹೀಗೆ ಹೇಳುತ್ತಾರೆ:

"ಎನ್ನ ಗತಿಮತಿಯು ನೀನೆನ್ನ ಚೈತನ್ಯವೇ
ಎನ್ನ ನಗಲದೆ ಕೂಡಿಬಿಡದಾಳ್ದನೇ।
ಎನ್ನ ಇಹಪರಸುಖವೆ ಎನ್ನ ಮುಕ್ತಿಯಸಿರಿಯೆ।"

ಎಂದು ತನ್ನ ಇಷ್ಟದೈವವನ್ನು ಬಣ್ಣಿಸಿದ್ದಾನೆ. ವೀರಶೈವ ಕವಿಗಳು "ಗತಿಮತಿ" ಎಂಬ ಪದಸಮುಚ್ಚಯವನ್ನು ಒಂದು ವಿಶೇಷವಾದ, ನಿರ್ದಿಷ್ಟವಾದ ಅರ್ಥದಲ್ಲಿ ಉಪಯೋಗಿಸುತ್ತಾರೆ. 'ಗತಿ' ಎಂದರೆ, ನಡೆ, ಕ್ರಿಯೆ ಎಂಬ ಅರ್ಥದಲ್ಲೂ ಮತಿ ಎಂದರೆ ಜ್ಞಾನ ಎಂಬ ಅರ್ಥದಲ್ಲೂ ಉಪಯೋಗಿಸುತ್ತಾರೆ.

## ವೃತ್ತ: ೯೭

ನಿತ್ಯಜ್ಞಾನೈಕಮೂರ್ತೀ ಸುಖತರಪರಮಾನಂದ ಸರ್ವಜ್ಞಮೂರ್ತೀ
ನಿತ್ಯತ್ವಾಧಾರಮೂರ್ತೀ ನಿರವಯವಮಹಾಮೂರ್ತಿ ನಿರ್ಲೇಪಮೂರ್ತೀ
ನಿತ್ಯಪ್ರತ್ಯಕ್ಷಮೂರ್ತೀ ನಿಖಿಲಗುಣಗಣಾಧಾರ ನಿರ್ಮಾಯಮೂರ್ತೀ
ನಿತ್ಯಶ್ರೀಮೂರ್ತಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೯೭

ಅರ್ಥ: ನಿತ್ಯ= ಶಾಶ್ವತವಾದ; ಜ್ಞಾನ= ಜ್ಞಾನದ; ಏಕಮೂರ್ತಿ= ಐಕ್ಯಕ ಮೂರ್ತೀ; ಸುಖತರ= ಅಧಿಕತರವಾದ ಸುಖ; ಪರಮಾನಂದ= ಸರ್ವಶ್ರೇಷ್ಠವಾದ

ಆನಂದದ; ಸರ್ವಜ್ಞ= ಎಲ್ಲವನ್ನೂ ಬಲ್ಲ; ಮೂರ್ತೇ= ಮೂರ್ತಿಯೇ; ನಿತ್ಯತ್ವ= ಶಾಶ್ವತದ; ಆಧಾರಮೂರ್ತಿ =ಆಧಾರವಾದ ಮೂರ್ತಿಯೇ; ನಿರವಯವ =ಅವಯುವಗಳಿಲ್ಲದ; ಮಹಾಮೂರ್ತಿಯೇ; ನಿರ್ಲೇಪ=ಯಾವುದಕ್ಕೂ ಅಂಟಿಕೊಳ್ಳದೆ ನಿರ್ಲಿಪ್ತನಾಗಿರುವ ಮೂರ್ತಿಯೇ; ನಿತ್ಯ=ಯಾವಾಗಲೂ; ಪ್ರತ್ಯಕ್ಷ= ಸಾಕ್ಷಾತ್ತಾಗಿ ಇರುವ; ಮೂರ್ತೆ= ಮೂರ್ತಿಯೇ; ನಿಖಿಲಗುಣಗಣ= ಸರ್ವಗುಣಗಳ ಗುಂಪಿಗೂ; ಆಧಾರ= ಆಧಾರವಾಗಿರುವ; ನಿರ್ಮಾಯ= ಮಾಯಾರಹಿತವಾದ; ಮೂರ್ತೆ; ನಿತ್ಯ= ಯಾವಾಗಲೂ; ಶ್ರೀ = ಮಂಗಳಕರವಾದ ಮೂರ್ತಿಯೇ; ಪಂಪಾಪುರದರಸ ವಿರೂಪಾಕ್ಷ ರಕ್ಷಿಸುವುದು.

ಭಾವಾರ್ಥ: ಶಾಶ್ವತಜ್ಞಾನದ ಏಕೈಕ ಮೂರ್ತಿಯೇ, ಅಧಿಕತರವಾದ ಸುಖ, ಸರ್ವಶ್ರೇಷ್ಠವಾದ ಆನಂದವನ್ನುಂಟುಮಾಡುವ ಸರ್ವಜ್ಞ ಮೂರ್ತಿಯೇ, ಅವಯುವಗಳಿಲ್ಲದ ಮಹಾಮೂರ್ತಿಯೇ ನಿರ್ಲಿಪ್ತನಾದ ಮೂರ್ತಿಯೇ, ನಿತ್ಯವೂ ಎಲ್ಲೆಲ್ಲಿಯೂ ಪ್ರತ್ಯಕ್ಷವಾಗಿರುವ ಮೂರ್ತಿಯೇ, ಸಕಲ ಗುಣಗಳಿಗೂ ಆಧಾರನೂ, ಗುಣರಹಿತನೂ ನಿರ್ಮಾಯನೂ ಆದ ಮೂರ್ತಿಯೇ, ಯಾವಾಗಲೂ ಮಂಗಳಕರನಾದ ಮೂರ್ತಿಯೇ ನೀನು ನನ್ನನ್ನು ರಕ್ಷಿಸು.

**ಟಿಪ್ಪಣಿ :** ಬ್ರಹ್ಮನು ಸರ್ವಾಂತರ್ಯಾಮಿಯಾಗಿದ್ದಾನೆ. ಎಲ್ಲದರಲ್ಲೂ ಇದ್ದಾನೆ. ಎಲ್ಲರಲ್ಲೂ ಇದಾನೆ. ಆದರೆ ಅವನಿಗೆ ಮಾತ್ರ ಯಾವ ಅವಯವನವೂ ಇಲ್ಲ. ಅವನು ಬ್ರಹ್ಮಾಂಡದಲ್ಲೆಲ್ಲ ವ್ಯಾಪಿಸಿದ್ದಾನೆ. ಆದರೆ ಯಾವುದಕ್ಕೂ ಅವನು ಅಂಟಿಕೊಂಡಿಲ್ಲ, ಎಲ್ಲವುದರಲ್ಲೂ ಇದ್ದರೂ, ಯಾವುದಕ್ಕೂ ಅವನು ಅಂಟಿಕೊಂಡಿಲ್ಲ. ಎಲ್ಲವುದನ್ನೂ ಅಲಿಪ್ತನಾಗಿ ನಿಂತು ನೋಡುತ್ತಿದ್ದಾನೆ. ಎಲ್ಲೆಲ್ಲಿಯೂ ಇದ್ದಾನೆ. ಆದರೂ ಯಾರಿಗೂ ಕಾಣುತ್ತಿಲ್ಲ. ಎಲ್ಲ ಗುಣಗಳಿಗೂ ಆಧಾರಮೂರ್ತಿಯಾಗಿದ್ದರೂ ಗುಣರಹಿತನಾಗಿದ್ದಾನೆ. ಪುರುಷನಾಗಿರುವವನೂ ಅವನೇ ಪ್ರಕೃತಿಯಾಗಿರುವವನೂ ಅವನೇ.

ವೃತ್ತ : ೯೮

ಬಿಡೆನೀಶಾ ನಿಮ್ಮ ಪಾದಾಬ್ಜಮುಳಿಲೆ ಬಿಡೆಂ ಸೀಳ್ದೊಡಂ ಪೂಳ್ದೊಡಂ ಪೊ -

ಯ್ದೊಡ ಮಂದಿಂದೆಂದುಮೆಂತು ಬಿಡೆನಭವ ಬಿಡೆಂ ಶಂಕರಾ ಮಾಣೆನಾಂ
ಬಲ್-
ವಿಡಿದೆಂ ಮತ್ತತ್ತವಿತ್ತಂ ಚಲಿಯಿಸದೆಲೆ ಮತ್ ಸ್ವಾಮಿ ನಿಮ್ಮಾಜ್ಞೆಯಿಂದಂ
ಮೃಡನೇ ಭಕ್ತಾರ್ಥಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೯೮

ಅರ್ಥ: ಈಶಾ= ಈಶ್ವರನೇ; ನಿಮ್ಮ ಪಾದಾಬ್ಜಮಂ= ಪಾದಕಮಲಗಳನ್ನು; ಬಿಡೆನು= ಕೈಬಿಡೆನು; ಎಲೆಲೆ; ಸೀಳ್ದೊಡಂ= ಸೀಳಿದರೂ; ಪೊಳ್ದೊಡಂ= ಹೋಳಾಗಿ ಮಾಡಿದರೂ; ಪೊಯ್ದೊಡಂ= ಹೊಯ್ದರೂ; ಬಿಡೆಂ= ಬಿಡೆನು; ಅಂದು + ಇಂದು+ ಎಂದುಂ= ಅಂದಿಂದೆಂದುಂ= ಅಂದು ಇಂದು ಎಂದೂ; ಎಂತುಂ= ಹೇಗೆಮಾಡಿದರೂ; ಬಿಡೆಂ= ಬಿಡೆನು; ಅಭವ= ಹುಟ್ಟಿಲ್ಲದವನೇ; ಬಿಡೆಂ= ಬಿಡುವುದಿಲ್ಲ; ಶಂಕರಾ= ಶಿವನೇ ಮಾಣೆನ್= ಕೈಬಿಡೆನು; ಆಂ= ನಾನು; ಮತ್ತೆ; ಅತ್ತಂ+ಇತಂ= ಮತ್ತತ್ತವಿತ್ತಂ= ಮತ್ತೆ ಅತ್ತಲೂ ಇತ್ತಲೂ; ಚಲಿಯಿಸದೆ ಚಂಚಲಮನಸ್ಕನಾಗದೆ; ಬಲ್ ವಿಡಿದೆಂ= ಬಲವಾಗಿ ಹಿಡಿದುಕೊಂಡಿದ್ದೇನೆ; ಮತ್ ಸ್ವಾಮಿ= ನನ್ನ ಸ್ವಾಮಿಯೇ; ನಿಮ್ಮಾಜ್ಞೆಯಿಂದಂ= ನಿಮ್ಮ ಆಜ್ಞೆಯಿಂದ; ಮೃಡನೇ= ಮೃತ್ಯುಂಜಯನೇ; ಭಕ್ತಾರ್ಥಿ= ಭಕ್ತರನ್ನು ಪ್ರೇಮಿಸುವ ಪಂಪಾಪುರದರಸ ವಿರೂಪಾಕ್ಷ ಸ್ವಾಮಿಯೇ ನನ್ನನ್ನು ರಕ್ಷಿಸು.

ಭಾವಾರ್ಥ : ಈಶಾ ನಿಮ್ಮ ಪಾದಕಮಲಗಳನ್ನು ನಾನು ಬಿಡುವುದಿಲ್ಲ. ನನ್ನನ್ನು ನೀನು ಸೀಳಿದರೂ, ಹೋಳುಮಾಡಿ ಹಾಕಿದರೂ, ಹೊಯ್ದರೂ ಬಿಡಲಾರೆ. ಇಂದಾಗಲಿ, ಅಂದಾಗಲೀ, ಎಂದೇ ಆಗಲಿ ನಿನ್ನ ಪಾದಕಮಲಗಳನ್ನು ಬಿಡಲಾರೆ! ಅಭವಾ, ಶಂಕರಾ ಇನ್ನೆಂದೂ ನಿನ್ನ ಚರಣ ಕಮಲಗಳನ್ನು ಬಿಡಲಾರೆ ಮತ್ತೆ ಅತ್ತ ಇತ್ತ ಎತ್ತೆತ್ತಲೂ ಚಲಿಸದೆ ನಿನ್ನನ್ನೆ ಬಲವಾಗಿ ಹಿಡಿದಿದ್ದೇನೆ. ಮೃತ್ಯುಂಜಯನೂ, ಭಕ್ತ ಪ್ರೇಮಿಯೂ ಆದ ನೀನು ನನ್ನನ್ನು ಕಾಪಾಡು.

ಟಿಪ್ಪಣಿ : ಜೀವ ಶಿವನನ್ನು ಕಾಣಲಿಕ್ಕೆ ಎಷ್ಟು ಸಾಧನೆಮಾಡಿದೆ! ಎಂಥ ಘೋರತಪಸ್ಸನ್ನಾಚರಿಸಿದೆ! ಎಂಬಂಥ ಕಷ್ಟಗಳನ್ನು ದಾಟಬಂದಿ

ದೆ! ಇಷ್ಟೆಲ್ಲ ಕಷ್ಟಗಳನ್ನು ದಾಟಿ ಹೇಗೋ ಕೊನೆಗೊಮ್ಮೆ ಅವನ ಪಾದಕಮಲಗಳು ಕೈಗೆ ಸಿಕ್ಕಿವೆ. ಅವು ಸಿಗುವುದೇ ದುರ್ಲಭ. ಅವುಗಳು ಸಿಕ್ಕಮೇಲೆ ಕೈಬಿಡುವುದುಂಟೇ? ಏನು ಕೊಟ್ಟರೆ ಅವು ಸಿಕ್ಕಾವು? ಅವನನ್ನೇ ನಂಬಿದ ಜೀವನಿಗೆ ಎನಿತೆನಿತೋ ಕಷ್ಟಗಳು ಬರಬಹುದು. ಶಿವನೆಡೆಗೆ ತಿರುಗಿದ ಜೀವಕ್ಕಲ್ಲದೆ ಮತ್ತಿನ್ನಾರಿಗೆ ಕಷ್ಟ ದುಃಖ ಬಂದಾವು? ಏನೇನೋ ಪರೀಕ್ಷೆಗೆ ಭಕ್ತನನ್ನು ಗುರಿಪಡಿಸುವನು. ನಮ್ಮನ್ನು ಸೀಳಬಹುದು. ಆದರೂ ಅವನ ಪಾದಕಮಲಗಳನ್ನು ಬಿಡುವುದುಂಟೇ? ಸಾಧ್ಯವಿಲ್ಲ. ಭಕ್ತ ನಂಬಿದಮೇಲೆ ಏನಾದರೂ ಅವನಲ್ಲಿ ನಂಬುಗೆಯನ್ನು ಬಿಡಕೂಡದು. ಅತ್ತಯಿತ್ತ ಚಲಿಸದೆ ಅವನನ್ನೇ ನೆರೆನಂಬಿ ಅವನ ಪಾದಕಮಲಗಳನ್ನೇ ಹಿಡಿಯಬೇಕು.

ವೃತ್ತ: ೯೯

ಕರ್ತಾರಂ ನೀನೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ
ಭರ್ತಾರಂ ನೀನೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ
ಹರ್ತಾರಂ ನೀನೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ
ಕೂರ್ತಿಂತೋರಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೯೯

ಅರ್ಥ: ಕರ್ತಾರ = ಈ ಸೃಷ್ಟಿಗೆ ಕರ್ತೃವಾದ ನೀನೇ ನನ್ನನ್ನು ರಕ್ಷಿಸು; ಭರ್ತಾರಂ = ಈ ಸೃಷ್ಟಿಯನ್ನು ರಕ್ಷಿಸುವವನಾದ ನೀನೇ ನನ್ನನ್ನು ರಕ್ಷಿಸು, ಹರ್ತಾರಂ = ಈ ಸೃಷ್ಟಿಯ ಲಯಕರ್ತನಾದ ನೀನೇ ನನ್ನನ್ನು ರಕ್ಷಿಸು; ಕೂರ್ತು = ಪ್ರೇಮದಿಂದ; ಓರಂತೆ = ಚೆನ್ನಾಗಿ; ಪಂಪಾಪುರದರಸ ವಿರೂಪಾಕ್ಷ ನನ್ನನ್ನು ರಕ್ಷಿಸು.

ಭಾವಾರ್ಥ: ಸೃಷ್ಟಿಸ್ಥಿತಿಲಯ ಕರ್ತನಾದ ನೀನೇ ನನ್ನನ್ನು ರಕ್ಷಿಸಿ ಉದ್ಧಾರಮಾಡು ಪಂಪಾಪುರದ ಅರಸ ವಿರೂಪಾಕ್ಷ ಸ್ವಾಮಿಯೇ.

ಟಿಪ್ಪಣಿ: ಸೃಷ್ಟಿಸ್ಥಿತಿಲಯ ಕರ್ತನಾದರೂ, ಭಕ್ತನಾದ ನನ್ನನ್ನು ಯಾವಾಗಲೂ ರಕ್ಷಿಸಿ ಕಾಪಾಡು ವಿರೂಪಾಕ್ಷಸ್ವಾಮಿ ಎಂಬುದು ಧ್ವನಿ. ಬ್ರಹ್ಮನಿಗೆ ಮುಮ್ಮುಖವಿದೆ. ಸೃಷ್ಟಿಸುವುದು, ಪಾಲಿಸುವುದು, ಮರ್ದಿಸುವು

ದು. ಆದರೆ ನೀನು ಮಾತ್ರ ನನ್ನನ್ನು ಯಾವಾಗಲೂ ಕಾಪಾಡಿ ಉದ್ಧಾರ ಮಾಡು ತಂದೇ.

## ವೃತ್ತ: ೧೦೦

ಭರದಿಂ ಕೇಳ್ದೋದುವಾನಂದ ದೊಳತಿಶಯದಿಂ ಮಚ್ಚಿ ಲಾಲಿಪ್ಪವರ್ಗಾ-
ದರದಿಂ ನಿತ್ಯಾಯುವಂ ಸಂಪದವನಭವನೀಯುತ್ತು ವಿರ್ಕೆಂದನೂನಂ
ಧರೆಯೊಳ್ ಕೈಕೊಂಡು ರಕ್ಷಾಶತಕವನೊಲವಿಂ ಪ್ರೇಮದಿಂನಚ್ಚಿ ಪೇಳ್ದಂ
ಹರಿದೇವಂ ದೇವ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೧೦೦

ಅರ್ಥ: ಭರದಿಂ= ಭಕ್ತಿನಿರ್ಭರತೆಯಿಂದ; ಕೇಳ್ದು=ಕೇಳಿ; ಓದುವ= ಓದುವ ಆನಂದದೊಳ್= ಆನಂದದಲ್ಲಿ; ಅತಿಶಯದಿಂ= ಅತಿಶಯದಿಂದ; ಮಚ್ಚಿ= ಮೆಚ್ಚಿ; ಲಾಲಿಪ್ಪವರ್ಗೆ= ಕೇಳುವವರಿಗೆ; ಆದರದಿಂ= ಆದರದಿಂದ, ಪ್ರೇಮದಿಂದ; ನಿತ್ಯಾಯುವಂ= ದೀರ್ಘಾಯುಷ್ಯವನ್ನು, ನಿತ್ಯತ್ವವನ್ನು; ಸಂಪದವನ್= ಸಕಲ ಸಿರಿಸಂಪತ್ತನ್ನು; ಅಭವ =ಸ್ವಾಮಿಯೇ; ವೀಯಿತ್ತು= ನೀನು ಕೊಟ್ಟು; ಇರ್ಕೆಂದು ಈ ರಕ್ಷಾಶತಕವನ್ನು ಓದುವವರೂ, ಓದಿದುದನ್ನು ಕೇಳುವವರೂ ಅನೂನಂ= ಕೊರತೆಯಾಗದಂತೆ; ಧರೆಯೊಳ್= ಭೂಮಿಯಲ್ಲಿ; ಕೈಕೊಂಡು= ಕಾಪಾಡಲ್ಪಟ್ಟವರಾಗಿರಲಿ ಎಂದು; ರಕ್ಷಾಶತಕವನ್= ಈ ರಕ್ಷಾಶತಕವನ್ನು; ಹರಿದೇವಂ= ಹಂಪೆಯ ಹರಿಹರದೇವಕವಿಯು; ಒಲವಿಂ= ಪ್ರೀತಿಯಿಂದ; ಪ್ರೇಮದಿಂದ= ಪ್ರೇಮದಿಂದ; ನಚ್ಚಿ= ನಂಬಿ; ಪೇಳ್ದಂ= ಹೇಳಿದನು; ಪಂಪಾಪುರದರಸ ವಿರೂಪಾಕ್ಷಸ್ವಾಮಿಯೇ ನನ್ನನ್ನು ರಕ್ಷಿಸು.

ಭಾವಾರ್ಥ: ಭಕ್ತಿ ನಿರ್ಭರತೆಯಿಂದ ಈ ರಕ್ಷಾಶತಕವನ್ನು ಕೇಳಿ, ಓದುವ ಆನಂದಭರದಲ್ಲಿ ಮೆಚ್ಚಿ ಕೇಳುವವರಿಗೆ ದೇವರು ಸಂತೃಪ್ತನಾಗಿ ನಿತ್ಯತ್ವವನ್ನು, ಸಕಲ ಸಿರಿಸಂಪದವನ್ನು ಕೊಟ್ಟು, ಯಾವ ಕೊರತೆಯೂ ಇಲ್ಲದಂತೆ ಈ ಪ್ರಪಂಚದಲ್ಲಿ ಬದುಕಲಿ ಎಂಬ ನಂಬಿಗೆಯಿಂದ, ಈ ರಕ್ಷಾಶತಕವನ್ನು ಪ್ರೇಮದಿಂದ ಹರಿಹರದೇವನು ರಚಿಸಿದ್ದಾನೆ.

**ಟಿಪ್ಪಣಿ:** ಪ್ರತಿಯೊಬ್ಬ ಹಿಂದಿನ ಕವಿಯೂ ತನ್ನ ಕಾವ್ಯಾರಂಭದಲ್ಲಿಯೋ, ಕಾವ್ಯಾಂತ್ಯದಲ್ಲಿಯೋ ತನ್ನ ಕಾವ್ಯವನ್ನು ಓದುವವರಿಗೂ, ಓದಿದುದನ್ನು ಕೇಳುವವರಿಗೂ ಭಗವಂತನು ಸಕಲ ಸನ್ಮಂಗಳವನ್ನೂ ಕೊಟ್ಟು ಕಾಪಾಡಲಿ ಎಂದು ಹಾರೈಸುವುದು ಸಂಪ್ರದಾಯವಾಗಿದೆ. ದಿನಸುಗಳನ್ನು ಮಾರಾಟಕ್ಕಿಟ್ಟ ವ್ಯಾಪಾರಿ, ತನ್ನ ಮಾಲನ್ನು ಮಾರ್ಕೆಟ್ಟಿನಲ್ಲಿ ನುಗ್ಗಿಸಲು ಮಾಡುವ ಜಾಹಿರಾತಿನಂತೆ ವಿಚಿತ್ರವಾಗಿ ತೋರುತ್ತದೆ ಈ ತರದ ಹಾರೈಕೆ. ಸಕಲ ಸನ್ಮಂಗಳಗಳು ಸಂಪತ್ತುಗಳು ದೊರೆಯುತ್ತವೆ ಎಂಬ ಆಸೆಯಿಂದಲಾದರೂ, ಪ್ರಾಪಂಚಿಕ ಸುಖಪ್ರಾಪ್ತಿಯ ಆಸೆಯಿಂದಲಾದರೂ ಜನ ತಮ್ಮ ಕಾವ್ಯವನ್ನು ಓದಲಿ ಎಂಬಂಥ ಆಸೆ ಕವಿಗಿದ್ದರೂ ಇರಬಹುದೆಂದು ಭಾವಿಸಬಹುದು. ಚೈತನ್ಯದೇವ ಭಕ್ತರನ್ನು ಆಕರ್ಷಿಸಲು ಒಂದು ಉಪಾಯ ಹೂಡಿದ್ದನಂತೆ: 'ಇಲ್ಲಿಗೆ ಬರುವವರಿಗೆ, ಸುರೆ, ಸ್ತ್ರೀಸಂಗ ಲಭಿಸುತ್ತದೆ' ಎಂದು ಜಾಹೀರು ಮಾಡುತ್ತಿದ್ದ. ಲೌಕಿಕ ಸುಖ ಪ್ರಿಯರು, ವಿಷಯ ಲೋಲುಪ್ತರು ಅವನಲ್ಲಿಗೆ ಧಾವಿಸಿಬರುತ್ತಿದ್ದರು. ಆಗ ಹರಿನಾಮ ಸಂಕೀರ್ತನೆ ಯೆಂಬ ಸುರೆಯನ್ನು ಅವರಿಗೆ ಕುಡಿಸುತ್ತಿದ್ದ. ಅದರಿಂದ ಮತ್ತರಾದ ಆ ಭಕ್ತರು ನೆಲಕ್ಕೆ ಬಿದ್ದು ಆನಂದಬಾಷ್ಪ ಸುರಿಸುತ್ತ ನೆಲದಮೇಲೆ ಹೊರಳಾಡುತ್ತಿದ್ದರು. ಬಂದವರು 'ಸುರೆ ಎಲ್ಲಿ? ಸ್ತ್ರೀಸಂಗಸುಖ ಯಾವಾಗ?' ಎಂದು ಕೆಲವರು ಕೇಳುತ್ತಿದ್ದರು. ಆಗ ಚೈತನ್ಯದೇವ: 'ಹರಿನಾಮವೇ ಆ ಸುರೆ. ನೆಲದಮೇಲೆ ಒದ್ದಾಡುವುದೇ ಸ್ತ್ರೀಸಂಗಸುಖ' ಎನ್ನುತ್ತಿದ್ದರಂತೆ. ಹಾಗೆಯೇ ಅನುಭಾವಿ ಕವಿಗಳು ತಮ್ಮ ಕಾವ್ಯವನ್ನು ಓದುವವರಿಗೆ ಓದಿದುದನ್ನು ಕೇಳುವವರಿಗೆ ಸಕಲ ಸನ್ಮಂಗಳು ಉಂಟಾಗುತ್ತದೆ ಎಂಬ ಆಸೆಯನ್ನು ತೋರಿಸುತ್ತಿದ್ದರೆಂದು ತೋರುತ್ತದೆ. ಆದರೆ, ಅದಕ್ಕಿಂತಲೂ ಆಳವಾದ ಸತ್ಯವಾದ ನಿತ್ಯ ಸತ್ಯ, ಸತ್ಯಸ್ಯಸತ್ಯ ಇದರಲ್ಲಿ ಅಡಗಿದೆ. ಅದಾವುದೆಂದರೆ ಕಾವ್ಯವಾಚನ, ಕಾವ್ಯ ರಸಾಸ್ವಾದನೆ ಕೇವಲ ವಿಲಾಸಕ್ಕಾಗಿ, ಹೊತ್ತುಕಳೆಯುವದಕ್ಕಾಗಿ, ಮನೋರಂಜನೆಗಾಗಿ ನಡೆಯಬೇಕಾದ ಭೌತಿಕ ಅಥವಾ ಶೀಘ್ರ ಬಾಹ್ಯ ಪ್ರಯೋಜನ ಕ್ರಿಯೆ ಮಾತ್ರವೇ ಅಲ್ಲ. ಮನುಷ್ಯನ ಪ್ರಜ್ಞೆಯೇ ಕ್ರಮೇಣ ಕ್ರಮೇಣ ವಿಕಾಸವಾಗಿ ಭೂಮತ್ವಕ್ಕೆ, ಅತಿ ಮನಸ್ಸಿನಮಟ್ಟಕ್ಕೆ ಹತ್ತಿ ನಿಲ್ಲಬೇಕಾಗಿದೆ.

ಅದು ಕಾವ್ಯಚಿತ್ರ ಶಿಲ್ಪ ಸಂಗೀತ ಮುಂತಾದ ಕಲೆಗಳ ಮೂಲಕವಾಗಿ ಚಣ ಚಣವೂ ನಡೆಯಬೇಕಾದ ಆದಿ ಅಂತ್ಯವಿಲ್ಲದ ಕಾರ್ಯ. ಬಹುಶಃ ಮನುಷ್ಯರು ತಮ್ಮ ಈ ಮನಸ್ಸಿನ ಸಂಕುಚಿತತನದಿಂದ ಪಾರಾಗಿ ಅತಿ ಮನಸ್ಸಿನ ಸ್ಥಿತಿಗೆ ಮುಟ್ಟಿದರೆ ಈ ವಿಕಾಸನ ಕೊನೆ ಮುಟ್ಟಕೆಂಬುದೇನೂ ಇಲ್ಲ. ಅತಿ ಮನಸ್ಸಿನ ವಿಸ್ತಾರದ ಬೆಳವಣಿಗೆಯ ಪರಿಪೂರ್ಣತೆಯ ಅವಕಾಶ ಎಷ್ಟಿದೆಯೋ ಅದನ್ನು ಯಾರು ಬಲರು? ಮನುಷ್ಯನಲ್ಲಿ ಮನಸ್ಸು ವಿಕಾಸವಾಗುವುದಕ್ಕಿಂತ ಮೊದಲು, ಬಹುಶಃ ಮನಸ್ಸು ವಿಕಸಿತವಾದರೆ ತೀರಿತು ಎಂದು ಭಾವಿಸಿದ್ದರೋ ಏನೋ! ಆದರೆ ಆ ಮನಸ್ಸು ವಿಕಾಸವಾದಮೇಲೆ, ಅತಿಮನಸ್ಸಿನ ಮುಂಬೆಳಗು ಕಾಣುತ್ತಿದ್ದಾನೆ ಮಾನವ. ಮುಂದೆ ಆ ಅತಿಮನಸ್ಸು ಭೂಮಿಯಲ್ಲಿ ಸ್ಥಾಪಿತವಾದಮೇಲೆ ಮುಂದಾವ ಮಹಾ ಮನಸ್ಸಿನ ಅವತಾರಕ್ಕಾಗಿ ಜೀವ ಹಂಬಲಿಸುವುದೋ! ಆದ್ದರಿಂದ ಮಾನವ, ಅತಿಮಾನವ, ಮಹಾಮಾನವ ಅದಕ್ಕಿಂತಲೂ ಶ್ರೇಷ್ಟವಾದುದು ಉನ್ನತವಾದುದು ಮತ್ತೇನಾದರೂ ಇದ್ದರೆ ಅದೂ ಆಗುವತನಕ ಈ ಬೆಳವಣಿಗೆ ನಡೆಯುತ್ತ ಹೋಗಲೇಬೇಕು. ಅಲ್ಲಿಯವರೆ ಕಾವ್ಯಸೃಷ್ಟಿ, ಸಹೃದಯಸೃಷ್ಟಿ, ತತ್ಫಲವಾಗಿ ಅತಿಮನದ ಅವತರಣಿಕೆ ಆಗುತ್ತಲೇ ಇರಬೇಕು. ಹೀಗೆ ಕಾವ್ಯ ವಾಚನ ಮಾಡುವವರು ಕಾವ್ಯವನ್ನು ಆಲಿಸುವವರೂ ಕಾಲನ ಪರಿಮಿತಿಯನ್ನು ದಾಟದ ಸ್ಥಿತಿಗೆ ಹೋಗುವುದರಲ್ಲಿ ಆಶ್ಚರ್ಯವೇನಿಲ್ಲ. ಆದರೆ, ರಾತ್ರಿಯೆಲ್ಲ ರಕ್ಷಾಶತಕ ಕೇಳಿ, ಬೆಳಿಗ್ಗೆ ಎದ್ದು ನನ್ನಲ್ಲಿ ಯಾವ ಪರಿವರ್ತನೆಯಾಗಿದೆ ಎಂದು ತಲೆಯನ್ನೋ ಎದೆಯನ್ನೋ ಮುಟ್ಟಿ ನೋಡಿಕೊಳ್ಳುವ ಹುಡುಗಾಟವಲ್ಲ ಇದು. ಬೀಜಬಿತ್ತಿದರೆ ಐದು ಹತ್ತು ದಿನದ ತರುವಾಯ ಕಣ್ಣಿಗೆ ಸಸಿಕಂಡೀತು. ಬೀಜವೊಳಕೆ ಒಡೆಯುವ ಕಾಲಾವಧಿಯಲ್ಲಿಯೇ ಬಿತ್ತಿದಬೀಜ ಏನಾಯಿತು? ಎಂದು ರೈತ ಅವಸರಪಡುವುದಿಲ್ಲ. ನೆಲಬಗೆದು ನೋಡುವುದಿಲ್ಲ. ಕಾದು ನಿಂತು ನೋಡುತ್ತಾನೆ. ಕಣ್ಣಿಗೆಕಾಣುವ ಬೆಳೆಯನ್ನು ಕಾಣಲಿಕ್ಕೇ ರೈತ ನಾಲ್ಕಾರು ದಿನಗಳಾದರೂ ಕಾದುನಿಲ್ಲಬೇಕು. ಎಂದಮೇಲೆ ಕಣ್ಣಿಗೆಕಾಣದ ಮನಸ್ಸಿನವಿಕಾಸ ಆಯಿತೇ ಇಲ್ಲವೇ ಎಂಬುದನ್ನು ತಲೆಮುಟ್ಟಿ ನೋಡಿಕೊಂಡರೆ, ಎದೆಮುಟ್ಟಿ ನೋಡಿಕೊಂಡರೆ ಹುಡುಗಾಟವೇಸರಿ. ಆದಕಾರಣ

ಮನದ ವಿಕಾಸ ಒಂದು ದಿನದಲ್ಲಿ ಮಾಡಿತೋರಿಸ ಬಹುದಾದ ಯಕ್ಷಿಣಿಯಲ್ಲ ದಿನದಿನವೂ, ಶತಶತಮಾನಗಳ ವರೆಗೆ ನಡೆಯಬೇಕಾದ ಗುಪ್ತ ಕ್ರಿಯೆ. ಅದಕ್ಕೆ ಕಾವ್ಯವಾಚನ ಬಹುದೊಡ್ಡಸಾಧನ. ಅದರ ರುಚಿಕಂಡವರೆಲ್ಲ ಈ ಮಾತನ್ನು ಒಪ್ಪುತ್ತಾರೆ.

ಅಲ್ಲದೆ ಕಾವ್ಯಕರ್ತೃ ತನ್ನ ಹೃದಯಾನುಭವವನ್ನು, ದರ್ಶನವನ್ನು ಕಾವ್ಯಪ್ರತಿಮೆಯಲ್ಲಿ ಮೂಡಿಸುವುದು, ಅವನ ಚಟ ತೀರಿಸಿಕೊಳ್ಳುವುದಕ್ಕಲ್ಲ. ತನ್ನ ಅನುಭವ, ದರ್ಶನಗಳಿಂದ ಸ್ವಸಂತೋಷದಿಂದ ಇದ್ದು ಬಿಡಬಹುದಾಗಿತ್ತು. ಆದರೆ ಅದನ್ನು ಲೋಕಸಂಗ್ರಹಾರ್ಥವಾಗಿ, ಜನರಮೇಲೆ ನಿಜವಾದ ಕನಿಕರದಿಂದ, ಪ್ರೀತಿಯಿಂದ, ಕೃಪೆಯಿಂದ ಕಾವ್ಯರೂಪದಲ್ಲಿ ತನ್ನ ದರ್ಶನ ಲಬ್ಧಿಮಾಡಿಸುತ್ತಾನೆ. ಯಾವುದು ಮಾತಿಗೆ ನಿಲುಕದೋ ಅವ್ಯಕ್ತವೋ ಆ ಅನುಭವವನ್ನು, ತನ್ನ ವಿಶೇಷವಾದ ದೈವದತ್ತ ಶಕ್ತಿಯಿಂದ ಲೋಕಕ್ಕೆಲ್ಲಕೆ ಕಿವಿಗೆ ಕೇಳುವ ಮಾತಿನಮೂಲಕ ವ್ಯಕ್ತಪಡಿಸುವುದು ಕವಿಯ ಕೃಪೆಯ ಹೊರತು ಮತ್ತೇನು ? ಅದನ್ನು ಜನ ಬದುಕಬೇಕೆಂದು ಕವಿ ಹೇಳುತ್ತಾನೇ ಲೋಕ ಅವನಿಗೆಷ್ಟು ಋಣಿ ?

## ವೃತ್ತ : ೧೦೧

ಪಿಂತೇನೇನಾಗಿ ಬಂದೆಂ ಮನುಜ ಜನನಮುಂ ತಾನಿದೆಂತಾಯ್ತು ಸಂಸಾ-
ರಂ ದೋಷಂ ಕಾಮಲೋಭಾದಿಗಳೆನಗಿವೆಲ್ಲಿಂದೆ ಬಂದತ್ತು ಮತ್ತಂ
ಮುಂದೇನಾದಪ್ಪೆನೆಂದಾನಱಿಯದೆ ಭಯದಿಂ ಶಂಕಿಸುತ್ತಿರ್ದಪೆಂ ನೀ
ಸಂದೇಹಂ ಮಾಡಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೧೦೧

ಅರ್ಥ: ಪಿಂತೆ = ಹಿಂದೆ; ಏನೇನಾಗಿ: ಬಂದೆಂ = ಬಂದೆನು; ಮನುಜ = ಮಾನವ; ಜನನಮುಂ = ಜನ್ಮವು; ತಾನಿದೆಂತಾಯ್ತು = ಇದು ಹೇಗೋ ಆಯಿತು; ಸಂಸಾರಂ = ಸಂಸಾರ; ದೋಷಂ = ಕಾಮಕ್ರೋಧಗಳೆಂಬ ಅರಿಷಡ್ವರ್ಗಗಳ ದೋಷವು; ಎನಗೆ = ನನಗೆ ಇವೆಲ್ಲಿಂದೆ = ಇವು ಎಲ್ಲಿಂದಲೋ; ಬಂದತ್ತು = ಬಂದವು; ಮತ್ತಂ = ಮತ್ತೆ; ಮುಂದೆ = ಇನ್ನುಮುಂದೆ; ಏನಾದಪ್ಪೆನ್ = ಏನಾಗುವೆನೋ; ಎಂದು; ಆನ್.

= ನಾನು; ಅಱಿಯದೆ= ತಿಳಿಯದೆ; ಭಯದಿಂ= ಭಯದಿಂದ; ಶಂಕಿಸುತ್ತಿರ್ದಪೆಂ= ಶಂಕಿಸುತ್ತಿದ್ದೇನೆ; ನೀಂ=ನೀನು; ಸಂದೇಹಂ= ಸಂದೇಹವನ್ನು; ಮಾಡಿ= ನಿವಾರಣೆ ಮಾಡಿ; ಪಂಪಾಪುರದರಸ ವಿರೂಪಾಕ್ಷಸ್ವಾಮಿಯೇ ನನ್ನನ್ನು ರಕ್ಷಿಸು.

**ಭಾವಾರ್ಥ:** ಹಿಂದೆ ಯಾವಯಾವ ಜನ್ಮಗಳಲ್ಲೋ ಯಾವಯಾವ ನಾಮರೂಪಗಳಲ್ಲೋ ಹುಟ್ಟಿ, ಕೊನೆಗೆ ಹೇಗೋ ಮಾನವಜನ್ಮ ದೊರೆಯಿತು. ಈ ಮಾನವಜನ್ಮದಲ್ಲಿ ಸಂಸಾರ, ದೋಷ, ಅರಿಷಡ್ವರ್ಗಗಳು ಎಲ್ಲಿಂದಲೋ ಬಂದು ಜೀವನನ್ನು ಮುತ್ತಿಕೊಂಡವು. ಮತ್ತೆ ಮುಂದೆ ಏನಾಗುವೆನೋ, ಎಂತಾಗುವೆನೋ ಎಂಬುದು ಒಂದು ನನಗೆ ಅರಿಯದು. ಆ ಭಯದಿಂದ ಶಂಕಿಸುತ್ತಿದ್ದೇನೆ. ಈ ನನ್ನ ಸಂದೇಹವನ್ನು ಪರಿಹರಿಸಿ ನೀನೇ ಕಾಪಾಡಬೇಕು ಪಂಪಾಪುರದ ಒಡೆಯನಾದ ವಿರೂಪಾಕ್ಷ ಸ್ವಾಮಿಯೇ.

**ಟಿಪ್ಪಣಿ:** ಪಂಪಾ ವಿರೂಪಾಕ್ಷನ ಕೃಪೆಯಿಂದ ಈ ಜನ್ಮ ಸಾರ್ಥಕವಾದಂತೆಯೇ. ಆದರೆ ಮುಂದೆ ಏನಾಗುವುದೋ ಎಂತಾಗುವುದೋ ಎಂಬ ಸಂಶಯ ಜೀವನಿಗೆ ಕೊನೆಯುಘಳಿಗೆಯಲ್ಲಿ ಉಳಿದದ್ದೇ. ಆ ಸಂಶಯವನ್ನು ಪರಿಹರಿಸಿ ನನ್ನನ್ನು ಕಾಪಾಡು ತಂದೇ ಎಂದು ಕವಿ ತನ್ನ ಶತಕವನ್ನು ಮುಕ್ತಾಯಗೊಳಿಸುತ್ತಾನೆ.

— ॥ ಸಮಾಪ್ತಿ ॥—

# ಒಪ್ಪೋಲೆ

(ಪು= ಪುಟ, ಸಾ= ಸಾಲು,

| ತಪ್ಪು | ಪು | ಸಾಲು | ಒಪ್ಪು |
|---|---|---|---|
| ದಃಶತತ | ೨ | — ೧೧ | ದಶಶತಶತ |
| ಮಜ್ಜನ | ೫ | — ೬ | ಮಜ್ಜೆ |
| ಭುವಿಗಳಿದು | ೬ | — ೬ | ಭುವಿಗಿಳಿದು |
| ಸೃಷ್ಟಿಕ್ರಯ | ,, | — ೯ | ಸೃಷ್ಟಿಕ್ರಮ |
| ಅನಂತಂಥ | ,, | — ೨೪ | ಅಂತೆ+ಅಂಥನಂತೆ |
| ಹುಚ್ಚನಾಸತ್ತ | ೮ | — ೫ | ಆಹುತಿಯಾಸತ್ತೆ |
| ಥನವಳಿಯಿಲ್ | ೧೩ | — ೬ | ಥನವಳಿಯಲ್ |
| ಸಂಡತ್ತು | ,, | — ೧೧ | ಸಂಪತ್ತು |
| ಶೃಂಬಲೆ | ೧೫ | — ೮ | ಶೃಂಖಲೆ |
| ಮನನು | ,, | — ೨೧ | ಮನಸ್ಸು |
| ಆತರ್ಯದ್ಧತರ | ೨೫ | — ೮ | ಅತ್ಯುದ್ಧತತರ |
| (ಭೋ)ಕಸಿಕಾಯ | ೨೬ | — ೫ | ಭೋಗಸಿಕಾಯ |
| ಕೈಮುಗಿದು........ | ೨೮ | — ೯ | ಕೈಮುಗಿದುಸುಗಿಮ |
| ಪಂಪಾಪ್ರಸದರಸ | ,, | — ೧೧ | ಪಂಪಾಪುರದರಸ |
| ರಕ್ಷಿರುಸ್ವಾಮಿ | ೨೯ | — ೬ | ರಕ್ಷಿಸುಸ್ವಾಮಿ |
| ಮುಂಬೆ | ೩೨ | — ೮ | ಮುಂದೆ |
| ಜೀವ | ,, | — ೯ | ಜೀಯ |
| ನಿರ್ಮಿತ್ತವಾಗಿ | ೨೬ | — ೩ | ನಿರ್ನಿಮಿತ್ತವಾಗಿ |
| ಸಂಗಕ್ಕೆಜಿಯದೆ | ೩೭ | — ೨೦ | ಸಂಗಕ್ಕಜಿಯದೆ |
| ಸತಲ್ | ೪೭ | — ೨ | ಸುತರ್ |
| ಆನೆ=ನಾವೇ | ೪೯ | — ೬ | ಆನೆ=ನಾನೇ |
| ಚ್ಛಾಯೆಯಂತೆ | ,, | — ೨೪ | ಚ್ಛಾಯೆಯಂತು |

| | | |
|---|---|---|
| ತ್ರಿಗುಣಾರಹಿತನು | ೫೨ — ೧೧ | ತ್ರಿಗುಣರಹಿತನು |
| ಕಡುಮೂಖ | ,, — ೨೪ | ಕಡುಮೂರ್ಖ |
| ಅಡಿಮಾಡಿ | ೫೪ — ೭ | ಎಡೆಮಾಡಿ |
| ಬಲ್ಪಿಂದೂಡೆಯೆ | ೫೫ — ೨೦ | ಬಲ್ಪಿಂದೊದೆಯೆ |
| ಅನವಿಲ್ಲವೇಯಿಲ್ಲ | ೫೭ — ೨ | ಅನ್ಯವಿಲ್ಲವೇ ಇಲ್ಲ |
| ಒಡಲನೂಲಿಯುತುಂ | ,, — ೧೫ | ಒಡಲನೊಲೆಯುತುಂ |
| ಪೆರ್ಗೊರಿಡುತ್ತೆ | ೫೯ — ೮ | ಪೆರ್+ಗೂರ್+ಇಡುತ್ತೆ |
| ಮುಪಿನಾ | ೬೨ — ೧೯ | ಮುಪ್ಪಿನಾ |
| ತನುಗೆಟ್ಟುಂ | ,, — ೨೧ | ತನುಗೆಟ್ಟಿಂ |
| ಸಂಗು=ಸತಂದ | ೬೪ — ೩ | ಸಂಗ=ಸತ್‌ಸಂಬಂಧ |
| ಮೊರೆಹೊಕ್ಕೆ | ,, — ೧೩ | ಮರೆಹೊಕ್ಕೆ |
| ಪರರ್=ಹೆಚ್ಚಿನವರು | ೬೫ — ೧೯ | ಪರರ್=ಬೇರೆಯವರು |
| ಇದ್ದೆಲೂ | ೯೮ — ೧೫ | ಇದ್ದಿಲೂ (ಇಜ್ಜಲೂ) |
| ವಿದ್ವಾವಿನಯ | ೯೯ — ೧೮ | ವಿದ್ಯಾವಿನಯ |
| ದಶ್ಚಿಂತಿತ | ೮೨ — ೮ | ದುಶ್ಚಿಂತಿತ |
| ಸಂಸ್ತೋಮುಮಂ | ೭೫ — ೩ | ಸಂಸ್ತ್ರೋಮುಮಂ |
| ಭವಭವಬವದೊಳ್ | ೭೮ — ೧೦ | ಭವಭವಭವದೊಳ್ |
| ಪೊಡೆ=ಹೊಡೆಯುವ ಕಿರ್ಚೀಕೆ | ೭೯ — ೧೬ | ಹೊಟ್ಟೆಕಿಚ್ಚು ಏಕೆ |
| ಗುರುವ | ೮೬ — ೧೫ | ಗರುವ |
| ಸಂತಕಕ್ಕಗಿ | ೮೯ — ೧೬ | ಸ್ವಂತಕ್ಕಾಗಿ |
| ಶಂಭವಿಂತೊ | ೯೦ — ೨೨ | ಶಂಭುವಿಂತೊ |
| ಉದ್ಧಾರಪೂಡು | ೯೩ — ೧೩ | ಉದ್ಧಾರಮಾಡು |
| ಭಾವನಮಾಧಿ | ೬೫ — ೧೨ | ಭಾವಸಮಾಧಿ |
| ಬಿದ್ದ ಒದ್ದಾಡುತ್ತ | ೯೬ — ೧೪ | ಹೂವಾಗಿ ಅರುಳುತ್ತ |
| ತಾದಾತ್ಮ್ಯಹೊಂದಿ | ೯೭ — ೬ | ತಾದಾತ್ಮ್ಯಹೊಂದಿ |
| ಅಂಗಳಗಳೂ | ೯೮ — ೧೭ | ಅಂಗಗಳೂ |

| | | |
|---|---|---|
| ವೋಡವೆ | ೧೧೧ — ೧ | ನೋಡವೆ |
| ದುಂತ್ರಮಂ | ೧೨೩ — ೧೮ | ಮಂತ್ರಮಂ |
| ಕರವಲ್ಲಿಂ | ೧೧೮ — ೧೧ | ಕರೆವಲ್ಲಿಂ |
| ನೊರೆವಂತಾಂ | ೧೨೫ — ೧೦ | ದೊರೆವಂತಾಂ |
| ಬಣ್ಣೆ ಸೋಣ | ೧೨೭ — ೨೧ | ಬಣ್ಣ ಸೋಣ |
| ಧರಿಸಿಸುವೆ | ೧೨೮ — ೪ | ಧರಿಸಿರುವೆ |
| ಶ್ರೀ ಅಠವಿಂದ | ,, — ೧೯ | ಶ್ರೀ ಅರವಿಂದ |
| ದ್ವಿತೀತಯ | ೧೨೯ — ೨೦ | ದ್ವಿತಯ |
| ದಿವ್ಯೋಮ | — ೨೧ | ವ್ಯೋಮ |
| ವೈಜ್ಞಾನವಾಗಿ | ೧೩೦ — ೨೨ | ವೈಜ್ಞಾನಿಕವೆಂದು |
| ನಿರವಧಿಯ ಮಳಂ | ೧೩೧ — ೧ | ನಿರವಧಿಯಮಳಂ |
| ಆಶ್ರಮದಾತನೂ | ,, — ೧೮ | ಆಶ್ರಯದಾತನೂ |
| ಮೊದ್ಯತ್=ವೈಮರೆಯುವ | ೧೩೬ — ೧೬ | ಆದ್ಯತ್=ಪ್ರಥಮ, ಮೂಲ |
| ಲಪತ್ | ,, — ೨೦ | ಲಸತ್ |
| ಗಡೆವಿಪಿದನ್ | ೧೩೭ — ೧೨ | ಗಡ+ಎನಿಪ+ಇದನ್ |
| ತಶ್ಗೂತ್ರಿ | ೧೩೮ — ೨ | ತರ್ಗೊತ್ರಿ |
| ರಕ್ಷಿವ್ಪುದನ್ನ | ೧೩೯ — ೧೨ | ರಕ್ಷಿಪ್ಪುದೆನ್ನಂ |
| ತಳವೇಲ್ಲಂ | ೧೪೩ — ೨೧ | ತಳವೆಲ್ಲಂ |
| ಉದ್ಯುಲ್ಲೇಖೆ | ೧೪೩ — ೫ | ವಿದ್ಯುಲ್ಲೇಖ |
| ಎನ್ನಯೆ | ೧೪೫ — ೧೨ | ಎನ್ನಯ |
| ಅವಯುವನವೂ | ೧೪೭ — ೧೭ | ಅವಯುವವೂ |
| ಬೆಡೆಂ | ,, — ೬೩ | ಬಿಡೆಂ |
| ಎಂಬಂಥ | ೧೪೮ — ೨೧ | ಎಂತೆಂಥ |
| ಹರಿನಾಮವೆ ಅಸುರೆ | ೧೫೧ — ೧೭ | ಹರಿನಾಮವೇ ಆ ಸುರೆ |

# ಈ ಕೃತಿಯನ್ನು ಕುರಿತು

"ಕಾವ್ಯ, ಕತೆ, ಕಾದಂಬರಿ ಮುಂತಾದ ಹಲವಾರು ಕ್ಷೇತ್ರಗಳಲ್ಲಿ ದುಡಿದು ಕನ್ನಡಿಗರಿಗೆ ಸುಪರಿಚಿತರಾಗಿದ್ದು, ನವ್ಯಸಾಹಿತ್ಯ ಕ್ಷೇತ್ರದಲ್ಲಿ ಹೆಸರಾಂತ ನನ್ನ ಸನ್ಮಿತ್ರರಾದ ಶ್ರೀ ಕೋ. ಚೆನ್ನಬಸಪ್ಪನವರು ಇಂದೀಗ ಗಂಭೀರವಾದ ದಾರ್ಶನಿಕ ವಾಙ್ಮಯದಲ್ಲಿ ಕೃಷಿಮಾಡಲು ಪ್ರವೇಶಿಸಿರುವುದು ಸ್ವಾಗತಾರ್ಹವಾಗಿದೆ".

"ಒಂದಾನೊಂದು ಕಾಲದಲ್ಲಿ ಮನೆಮನೆಯಲ್ಲೂ ಪಾರಾಯಣವಾಗುತ್ತಿದ್ದ ರಕ್ಷಾಶತಕವು, ಈಗ ಇಲ್ಲವೇ ಇಲ್ಲವೆಂಬಷ್ಟು ಮರೆತುಹೋಗಿರುವುದು ಶೋಚನೀಯವಾಗಿದೆ. ಇಂಥ ಕೃತಿಯನ್ನು ಅರ್ಥ, ಭಾವಾರ್ಥ ಅದಕ್ಕಿಂತಲೂ ವಿಶೇಷವಾಗಿ ಟಿಪ್ಪಣಿಗಳೊಡನೆ ಸಂಪಾದಿಸಿ ಕೋ. ಚೆನ್ನಬಸಪ್ಪನವರು ನಾಡಿಗೆ ಬಹು ದೊಡ್ಡ ಸೇವೆ ಮಾಡಿದ್ದಾರೆ.

"ಹರಿಹರನ ರಕ್ಷಾಶತಕ, ಕವಿಯ ಆತ್ಮಕಥೆಯೇ ಎಂದು ಊಹಿಸುವ ಪಂಡಿತರೂ, ವಿದ್ವಾಂಸರೂ ಇದ್ದಾರೆ. ಆದರೆ, ಅದು ಕವಿಯ ಆತ್ಮಕಥೆಯಲ್ಲ, ಜೀವಾತ್ಮನ ಪ್ರಯಾಣದ ಕಥೆ ಎಂಬುದನ್ನು ಈ ಸಂಪಾದಕರು ಬುದ್ಧಿ ಮೆಚ್ಚುವಂತೆ, ಹೃದಯ ಒಪ್ಪುವಂತೆ ನಿರೂಪಿಸಿದ್ದಾರೆ. ಈ ನಿರೂಪಣೆ ಸರಿ ಎಂದು ಒಪ್ಪುತ್ತೇನೆ.

"ಈ ಕಾವ್ಯ ದ್ವೈತ, ಅಥವಾ ಅದ್ವೈತ ದರ್ಶನವನ್ನು ಪ್ರತಿಪಾದಿಸುತ್ತದೆ ಎಂದು ಕೆಲವರು ಹೇಳುತ್ತಾರೆ. ಆದರೆ ಈ ಕಾವ್ಯದ ದರ್ಶನ ಶಕ್ತಿ ವಿಶಿಷ್ಟಾದ್ವೈತ ದರ್ಶನ ಎಂಬುದನ್ನು ಅಲ್ಲಲ್ಲಿ ಎತ್ತಿ ತೋರಿಸಿರುವುದು ಉಚಿತವಾಗಿದೆ.

"ಈ ಯುಗದ ಆಧುನಿಕ ಸಾಹಿತ್ಯದಲ್ಲಿ ಇದೊಂದು ಮಹತ್ವದ ಗ್ರಂಥವಾಗಿ ಉಳಿಯುವುದರಲ್ಲಿ ನನಗೆ ಎಳ್ಳಷ್ಟೂ ಸಂಶಯವಿಲ್ಲ"

ಹಂಪೆ, ) —ಶ್ರೀ ಟಿ. ಎಚ್. ಎಂ. ಸದಾಶಿವಯ್ಯನವರು
ತಾ॥ 9-4-60 ) (ಅವರ ಭಾಷಣದಿಂದ)